# ಗ್ರಂ ಥ ಪ ರಿ ಚ ಯ

ವಿದ್ಯಾವತಿ, ರೂಪವತಿ, ಲಕ್ಷಲಕ್ಷಾಧಿಕಾರಿ ಆದ ಕನ್ಯೆ–ನಿರಕ್ಷರ ಕುರೂಪಿ, ಗಣಿಯ ಕೂಲಿಗಾರ ಇವರ ಮದುವೆ ಏಕಾಯಿತು, ಹೇಗಾ ಆ ಮದುವೆ ನಿಂತಿತೆ, ಮುರಿಯಿತೆ ಎಂಬುದನ್ನು ಹೃದಯಂಗಮವಾಗಿ ಸುವ ಕತೆ 'ಸ್ವಯಂವರ'.

ಪ್ರಾಚೀನಕಾಲದ ಸ್ವಯಂವರಗಳಂತೆ ಇಲ್ಲಿಯೂ ಕಥಾನಾಯಕಿ ತಾ ಗಂಡನನ್ನು ಹುಡುಕಿ ವರಿಸುತ್ತಾಳೆ. ಸರಿಯಾದ ಗಂಡ ಬೇಕೆಂದ ಮದುವೆಯೆಂಬ ಶಾಸ್ತ್ರ ತೀರಿಸುವುದಕ್ಕೆ. ತಾತನು ಉಯಿಲಿನಲ್ಲಿ ಬರೆದಿ ಹೋದ ನಿಬಂಧನೆಯನ್ನು ತನ್ನ ಚಮತ್ಕಾರದಿಂದ ನಿವಾರಿಸಿಕೊಳ್ಳುನೆನೆಂ ಭಾವಿಸಿ ಕಥಾನಾಯಕಿ ವಸಂತಾದೇವಿಯು ಯಾವುದೋ ಕೊಲೆಗಾಗಿ ಮರ ದಂಡನೆಗೆ ಗುರಿಯಾಗಿದ್ದ ಗಣಿಯ ಕೂಲಿ ಆಳು ನಟೇಶನನ್ನು ಮದುವೆಯಾ ತ್ತಾಳೆ. ಅವನು ಸಾಯುವುದಕ್ಕೆ ಬದಲಾಗಿ ಉಳಿದುಬರುತ್ತಾನೆ. ಇದರ ಜೊತೆಗೆ ಇಂಥ ಗಂಡನೊಡನೆ ಕಡೆಯ ಪಕ್ಷ ಒಂದು ತಿಂಗಳಾದರೂ ಅವಳ ವಾಸಮಾಡಲೇಬೇಕೆಂಬ ಮತ್ತೊಂದು ನಿಬಂಧನೆಯು ಅವರಿಬ್ಬರೂ ಒಂದೇ ಕುಟೀರದಲ್ಲಿ ಅಷ್ಟು ಕಾಲ ಇರುವಂತೆ ಮಾಡುತ್ತದೆ.

ಈ ಸಂಸಾರ ಹೇಗೆ ನಡೆಯಿತು, ಒಂದು ತಿಂಗಳು ಒಡನೆ ಜೀವಿಸಿದ ಭಿನ್ನ ಸ್ವಭಾವ ಗುಣಗಳ ಈ ಎರಡು ಮನಸ್ಸುಗಳು ಬೆರೆತುದು ಹೇಗೆ ಎಂಬುದೇ ಈ ಕಾದಂಬರಿಯಲ್ಲಿ ನಿರೂಪಿಸಿರುವ ವಸ್ತು. ಇಲ್ಲಿನ ಕಥಾನಾಯಕ ನಾಯಕಿಯರ ನಡುವೆ ನಾವು ಕಾಣುವುದು ವಿರಸ ಶೃಂಗಾರ.

ತಾನೊಲಿದ ಪ್ರಿಯತಮನಿಗಾಗಿ ಹೆಣ್ಣು ಎಂಥ ಸಾಹಸದಲ್ಲಿ ಕೈಹಾಕಿತು, ಎಷ್ಟು ಕಷ್ಟಪಟ್ಟಿತು ಎಂಬುದನ್ನು ಶ್ರೀವರ್ಮಾ ಮೂರ್ತಿಯವರ "ಚಿಕ್ಕ ದೇವರಾಜ" ಕಾದಂಬರಿಯಲ್ಲಿ ಕಂಡ ಓದುಗರು ಇಲ್ಲಿ ತನಗೆ ಬೇಡವಾದ ಗಂಡನನ್ನು ಕಟ್ಟಿಕೊಂಡು ವಿಧಿಯಿಲ್ಲದೆ ಅವನೊಡನೆ ಸಂಸಾರದ ಆಟನನ್ನಾ ಡಿದ ಹೆಣ್ಣಿನ ಚಿತ್ರವನ್ನು ಕಾಣುತ್ತಾರೆ.

# ಒಳಮಾತು

ಬರೆಯುವುದಕ್ಕೆ ಕುಳಿತಾಯಿತು, ಬೇರೆ ಕೆಲಸವಿಲ್ಲ; ಬಾಳು ಬಹು ದೂರ ಬಂದುಬಿಟ್ಟಿತು; ಇಷ್ಟುದಿನ ನಡೆದ ದಾರಿಯಲ್ಲಿ ಕಂಡ ನೋಟಗಳೆಷ್ಟೋ, ಅನುಭವಿಸಿದ ಸುಖ ದುಃಖಗಳೆಷ್ಟೋ ಆದ ಕನಸುಗಳು ಕಣಸುಗಳು ಅವೆಷ್ಟೋ, ಅವುಗಳಿಂದ ಮನಸ್ಸು ಭಾರವಾಗಿ ತೋರುತ್ತಿತ್ತು; ಆ ಹೊರೆಯನ್ನಿಳಿಸಿದಲ್ಲದೆ ನಿನಗೆ ಬಿಡುಗಡೆಯಿಲ್ಲವೆಂದು ಒಳಗಿನ ದನಿಯೊಂದು ಹೇಳುತ್ತಿತ್ತು; ಈ ಕಾರಣಗಳಿಂದ ಬರೆಯುವುದಕ್ಕೆ ಕುಳಿತಿದೇನೆ. ನನ್ನ ಸ್ವಭಾವಕ್ಕೆ ಅಸಹಜವಾಗಿರುವ ಈ ಚಟುವಟಿಕೆಯು ಮತ್ತೆ ಜಡತೆಯನ್ನಪ್ಪುವ ಮೊದಲು ಆದಷ್ಟು ಬರೆಯಬೇಕೆಂದಿದೇನೆ. ಆ ಪ್ರಯತ್ನದ ಫಲ ಈ ಕಾದಂಬರಿ.

ಮೂಕಚಿತ್ರಗಳ ಕಾಲ ಹೋಗಿ ಮಾತಾಡುವ ಚಿತ್ರಗಳು ನಮ್ಮ ದೇಶಕ್ಕೆ ಬಂದ ತರುಣದಲ್ಲಿ—ನನ್ನ ತಾರುಣ್ಯದಲ್ಲಿ—ಒಂದು ಇಂಗ್ಲಿಷ್ ಚಿತ್ರವನ್ನು ನೋಡಿದ್ದೆ. ಅದರ ಹೆಸರು ಈಗ ನೆನಪಿನಲ್ಲಿಲ್ಲ; ಹೆಚ್ಚು ವಿವರಗಳು ಮನಸಿನಲ್ಲಿ ಉಳಿಯಲಿಲ್ಲ; ಕಥಾವಸ್ತು ಮಾತ್ರ ಸ್ಥೂಲವಾಗಿ ನಿಂತುಬಿಟ್ಟಿತು. ಆ ಚೌಕಟ್ಟಿನ ಮೇಲೆ ಚಿತ್ರಿಸಿದ ಕಥೆ 'ಸ್ವಯಂವರ'.

ಇದು ಪೌರಾಣಿಕವಲ್ಲ, ಐತಿಹಾಸಿಕವಲ್ಲ, ಅದರಿಂದ ಬೇಕಾದರೆ ಸಾಮಾಜಿಕ ಕಾದಂಬರಿಯೆಂದು ಕರೆಯಬಹುದು; ನನ್ನಮಟ್ಟಿಗೆ ಇದು ಕಾದಂಬರಿ ಮಾತ್ರ-ಕೇವಲ ಕಾಲ್ಪನಿಕ ಕಾದಂಬರಿ. ನಾನು ಸಮಾಜವನ್ನು, ಸಮಾಜದಲ್ಲಿನ ಯಾವುದೇ ವ್ಯಕ್ತಿಗಳನ್ನು ಚಿತ್ರಿಸಲು ಹೊರಟಿಲ್ಲ; ಸಮಾಜದಲ್ಲಿನ ಲೋಪದೋಷಗಳನ್ನು ತಿದ್ದುವೆನೆಂಬ ಹಂಬಲ ನನಗಿಲ್ಲ. ಸಮಾಜ ನನಗಿಂತ, ನನ್ನಂಥ ಎಷ್ಟೋ ಜನರಿಗಿಂತ ದೊಡ್ಡದು, ಹೆಚ್ಚು ಶಕ್ತಿಯುಳ್ಳದು ಎಂದು ನನ್ನ ನಂಬಿಕೆ. ಸಮಾಜವನ್ನು ಸರಿಪಡಿಸುತ್ತೇವೆಂದು ಇದುವರೆಗೆ ಅನೇಕ ಮಹಾ ವ್ಯಕ್ತಿಗಳು ನಮ್ಮ ದೇಶದಲ್ಲಿ ಪ್ರಯತ್ನಿಸಿದಾರೆ. ಆ ಪ್ರಯತ್ನಗಳ ಫಲವಾಗಿ ನಮ್ಮ ಸಮಾಜದಲ್ಲಿ ಹೊಸ ಹೊಸ ಮಾರ್ಗಗಳು ಹುಟ್ಟಿದುವು;

ಆದರೆ ಹಳೆಯ ದೋಷಗಳು ಹೋಗಲಿಲ್ಲ, ಅವುಗಳ ಜೊತೆಗೆ ಹೊಸವು ಕೆಲವು ಸೇರಿಕೊಂಡುವು. ನಮ್ಮಲ್ಲಿ ಆಗಿರುವ ಕೆಲವೇ ಕೆಲವು ಸಮಾಜ ಸುಧಾರಣೆಗಳು ಸಾಹಿತ್ಯದಿಂದ ಆದುವಂತೂ ಅಲ್ಲ.

ಸಾಹಿತ್ಯವು ಜೀವನದ ರನ್ನಗನ್ನಡಿ, ಹೌದು; ಹಾಗೆಯೇ ಸಾಹಿತ್ಯವು ಕಲೆಯೂ ಹೌದು. ಒಂದು ರೀತಿಯಲ್ಲಿ ನಿತ್ಯ ಜೀವನದಲ್ಲಿ ನಾವು ಕಾಣುವ ಪ್ರತಿಯೊಂದು ವಸ್ತುವಿನಲ್ಲೂ, ನಡೆಯುವ ಪ್ರತಿ ನಡೆಯಲ್ಲೂ, ಆಡುವ ಪ್ರತಿ ನುಡಿಯಲ್ಲೂ ಕಲೆಯ ಸಂಬಂಧವಿದ್ದೇ ಇರುತ್ತದೆ; ಅದು ನೋಡುವ ಕಣ್ಣಿನಲ್ಲಿರುತ್ತದೆ. ಈ ದೃಷ್ಟಿಯಿಂದ, ಕನ್ನಡಿಯಲ್ಲಿ ನಾವು ಕಾಣುವ ಜನಜೀವನವು ಎಷ್ಟುಮಟ್ಟಿಗೆ ಕಲೆಯೆನಿಸಿಕೊಳ್ಳಬಹುದೆಂಬುದನ್ನು ಯೋಚಿಸಬೇಕಾಗಿದೆ.

ಇದರೊಂದಿಗೆ ಇನ್ನೊಂದು ಮಾತೂ ಪದೇಪದೇ ನೆನಪಿಗೆ ಬರುತ್ತದೆ— 'Truth is stranger than fiction' ಎಂಬುದು. ಸತ್ಯವಾಗಿ ನಡೆದ ಕಥೆಯು ಕಲ್ಪನಾಕೃತಿಗಿಂತ ಹೆಚ್ಚು ಅಚ್ಚರಿಯನ್ನುಂಟುಮಾಡುವುದೆಂಬ ಮಾತು ಸಾಹಿತ್ಯದಲ್ಲಿ ಎಷ್ಟುಮಟ್ಟಿಗೆ ಅನುಸರಣೀಯ? ನಮ್ಮ ನಮ್ಮ ಮನೆಗಳಲ್ಲಿ ಅಥವಾ ನಮ್ಮ ಸ್ನೇಹಿತರ, ಬಂಧುಗಳ, ಪರಿಚಿತರ ಮನೆಗಳಲ್ಲಿ ನಡೆದ ವಿಷಯಗಳನ್ನು ಕಾಣುವ ವ್ಯಕ್ತಿಗಳನ್ನು ಇದ್ದಕ್ಕಿದ್ದಂತೆ ಅಥವಾ ಅಲ್ಪ ಸ್ವಲ್ಪ ರೂಪಾಂತರಗೊಳಿಸಿ ಸಾಹಿತ್ಯ ಕೃತಿಯಲ್ಲಿಳಿಸಿ ಅದಕ್ಕೆ ಮೇಲೆ ಹೇಳಿದ ವಾಕ್ಯದ ಆಧಾರವನ್ನು ಸಮರ್ಥನೆಗಾಗಿ ತೆಗೆದುಕೊಳ್ಳುವುದು ಎಷ್ಟುಮಟ್ಟಿಗೆ ಉಚಿತ ಎಂಬ ಮಾತೂ ವಿಮರ್ಶೆ ಮಾಡಬೇಕಾದುದು.

ಈ ಕಾದಂಬರಿಯನ್ನು ಬರೆಯಲು ಉದ್ದೇಶಿಸಿದಾಗ, ಬರೆಯತೊಡಗಿದಾಗ, ಬರೆದು ಪೂರೈಸಿದ ಈಗಲೂ ಇಂಥ ಹಲವು ಪ್ರಶ್ನೆಗಳು ನನ್ನಿಂದ ಉತ್ತರವನ್ನು ನಿರೀಕ್ಷಿಸಿವೆ. ಉತ್ತಮವಾದ ಕಥೆಯೆಂದು ಮನಸಿಗೆ ತೋರಿದ ವಸ್ತುವನ್ನು ವಿಸ್ತರಿಸಿ ನನ್ನ ಶಕ್ತ್ಯನುಸಾರ ಉತ್ತಮ ರೀತಿಯಲ್ಲಿ ಇದನ್ನು ಬರೆದಿದೇನೆ. ಇಲ್ಲಿನ ಕಥಾನಾಯಕಿ ವಸಂತಾದೇವಿಯಂಥ ಹೆಣ್ಣಾಗಲಿ, ನಟೇಶನಂಥ ಗಂಡಾಗಲಿ ನಮ್ಮಲ್ಲಿ ಇದಾರೆಯೆ ಅಥವಾ ಇರಬಲ್ಲರೆ ಎಂಬ ಯೋಚನೆ ನನಗೆ ಎಳ್ಳಷ್ಟೂ ಇಲ್ಲ. ಅವರು ಇದ್ದರೆ ಎಷ್ಟು ಸಮಾಧಾನವೋ ಇಲ್ಲದಿದ್ದರೂ ಅಷ್ಟೇ; ಕದಾಚಿತ್ ಇದ್ದರೆ ಸಂತೋಷ. ಇದರಲ್ಲಿ ನಾಯ

ಕಿಯ ಮನೋಭಾವ ಪ್ರಧಾನ. ಜೀವನದ ಆರಂಭದಲ್ಲಿ ತಾನು ಬಹು ಬುದ್ಧಿ ಶಾಲಿಯೆಂಬ ಅಹಂಕಾರದಿಂದ ಅವಳು ಒಂದು ತಪ್ಪು ಮಾಡುತ್ತಾಳೆ, ಅದರ ಪರಿಣಾಮವಾಗಿ ಕಷ್ಟಕ್ಕೆ ಗುರಿಯಾಗುತ್ತಾಳೆ; ಇದು ಸಾಮಾನ್ಯವಾಗಿ ಎಲ್ಲರ ಜೀವನದಲ್ಲೂ ಒಂದಲ್ಲ ಒಂದು ರೀತಿಯಿಂದ ನಡೆದಿರುವುದೇ. ಚಿಕ್ಕಪುಟ್ಟ ವಿಷಯಗಳಲ್ಲಾದರೆ ಸಾಧಾರಣವಾಗಿ ಕಾಣಬಲ್ಲ ಈ ತಪ್ಪು ತನ್ನ ಮದುವೆಯ ವಿಷಯದಲ್ಲಿ ನಡೆಸಿದ ಚಲ್ಲಾಟದಿಂದ ಬೃಹದ್ರೂಪವನ್ನು ತಾಳುತ್ತದೆ. ಅಂತೆಯೇ ಕತೆಯನ್ನು ರಸಮಯವಾಗಿ ಮಾಡುತ್ತದೆ.

ಕತೆಯನ್ನು ನಿವೇದಿಸಿರುವ ರೀತಿ ಉತ್ತಮವಾಗಿದೆಯೆ ಅಲ್ಲವೆ ಎಂಬುದು ಓದುಗರಿಗೆ ಸೇರಿದುದು. ಅದು ಅವರ ಮೆಚ್ಚುಗೆಗೆ ಪಾತ್ರವಾದರೆ ನನ್ನ ಶ್ರಮವು ಸಾರ್ಥಕ.

ಈ ಕಾದಂಬರಿಯನ್ನು ತಮ್ಮ 'ಸುದರ್ಶನ ಪ್ರಕಾಶನ'ದ ಮೂರನೆಯ ಗ್ರಂಥವಾಗಿ ಪ್ರಕಟಿಸಿರುವ ಶ್ರೀಮಾನ್ ತಾ. ರಾ. ನಾಗರಾಜ ಅವರಿಗೂ ಮತ್ತು ಇದನ್ನು ಮುದ್ರಿಸಿಕೊಟ್ಟಿರುವ ಚಿತ್ರಾ ಪ್ರಿಂಟರಿಯ ಮಾಲೀಕರಾದ ಶ್ರೀಮಾನ್ ಎಚ್. ವೆಂಕೋಬರಾಯರಿಗೂ ನಾನು ಕೃತಜ್ಞನಾಗಿದೇನೆ.

ಬೆಂಗಳೂರು ನಗರ
ತಾ|| ೩೦-೭-೧೯೫೪

ಮ. ನರಸಿಂಹಮೂರ್ತಿ



# ಓದುಗ - ಪ್ರಕಾಶಕ

ಪ್ರೀತಿಯ ಓದುಗ,

ಉತ್ತಮ ದರ್ಜೆಯ ಸಾಹಿತ್ಯವನ್ನು ಒದಗಿಸುತ್ತೇವೆಂದು ಸಂಕಲ್ಪ ಮಾಡಿದಂತೆ, ಈವರೆಗೆ ಯಶಸ್ವಿಯಾಗಿ ಬಂದಿದೇವೆ. ಈ ಬಾರಿಯ ಯಶಸ್ಸಿನ ಫಲವೇ ಶ್ರೀ ಮ. ನ. ಮೂರ್ತಿಯವರ ಹೊಸ ಪ್ರಯೋಗದ ಕಾದಂಬರಿ "ಸ್ವಯಂವರ".

ನಿಮ್ಮೆಲ್ಲರ ಆದರದ ಫಲವಾಗಿ ನಮ್ಮ ಮೊದಲ ಎರಡು ಪ್ರಕಟನೆಗಳು ಗೋಮುಖವ್ಯಾಘ್ರ ಮತ್ತು ಪ್ರೇಮದರ್ಶನ ಪ್ರತಿಗಳು ಮುಗಿದಿವೆ. ಮೊದಲ ನೋಟ ಮತ್ತು ಅಭಯಕ್ಕೆ ತೋರಿದ ಮಮತೆಯಿಂದಲೇ ಇದನ್ನು ಸಹ ಸ್ವಾಗತಿಸುತ್ತೀರೆಂದು ಭರವಸೆಯಿದೆ.

ಮುಂದಿನ ಪ್ರಕಟನೆಗಳಾಗಿ, ಕೊರವಂಜಿಯ ಖಾಯಂ ಲೇಖಕರಾದ ಶ್ರೀ ದಾಶರಥಿ ದೀಕ್ಷಿತರ ಮೊಟ್ಟಮೊದಲ ಕಾದಂಬರಿ "ಬಾಳಬಂಧನ" ಅಚ್ಚಿನಲ್ಲಿದೆ. ಅನಂತರ ಅವರದೇ ಆದ "ಮಾವನ ಮನೆಯಲ್ಲಿ" ಎಂಬ ಹಾಸ್ಯಪೂರ್ಣ ಕಾದಂಬರಿ ಸಹ, ನಮ್ಮ ಪ್ರಕಾಶನದಲ್ಲಿ ಹೊರಬರಲಿದೆ.

ಎಲ್ಲ ವಿಮರ್ಶಕ ಮತ್ತು ಓದುಗರಿಂದ ಮನ್ನಣೆ ಪಡೆದು ಹೆಚ್ಚಿನ ಬೆಲೆಯಲ್ಲಿ ಮುದ್ರಿತವಾಗಿರುವ ತ.ರಾ.ಸು. ರವರ "ಮಸಣದ ಹೂ" ಕಾದಂಬರಿಯು ಸುಲಭ ಬೆಲೆಯ ಕೃತಿಯಾಗಿ ನಮ್ಮ ಮಾಲೆಯಲ್ಲಿ ಹೊರಬರುತ್ತದೆಂದು ತಿಳಿಸಲು ಸಂತೋಷಿಸುತ್ತೇವೆ.

'ಸ್ವಯಂವರ'ವನ್ನು ತಮ್ಮ ಸ್ವಂತ ಪ್ರಕಟನೆ ಎಂಬ ಭಾವನೆಯನ್ನು ಹೊಂದಿ ವಿಶ್ವಾಸದಿಂದ ಅಚ್ಚುಮಾಡಿಕೊಟ್ಟ ಶ್ರೀ ಹೆಚ್. ವೆಂಕೋಬರಾವ್, [illegible] ಪ್ರಿಂಟರಿರವರಿಗೂ, ಮುದ್ರಣದ ಜವಾಬ್ದಾರಿ ಹೊತ್ತು ಅಂದವಾಗಿರುವಂತೆ ನಿಗಾ ನೋಡಿದ ಶ್ರೀ ಹೆಚ್. ವಿ. ನಾರಾಯಣ್‌ರಿಗೂ ನನ್ನ ನೆನಕೆಗಳು. ಮುಖಚಿತ್ರ ಬರೆದುಕೊಟ್ಟ ಶ್ರೀ ರಮೇಶರಿಗೂ, ನಮ್ಮ ಪ್ರಕಾಶನಕ್ಕೆ ತಮ್ಮ ಕೃತಿಕೊಟ್ಟ ಶ್ರೀ ಮ. ನ. ಮೂರ್ತಿಯವರಿಗೂ ಆಭಾರಿಯಾಗಿದೇವೆ.

"ತಾರಾ ನಿವಾಸ", ತಿಪಟೂರು
೩೦–೭–೧೯೫೪

ತಾ. ರಾ. ನಾಗರಾಜ

*

# ಸ್ವಯಂವರ

'ಅಣ್ಣಾ, ಅಣ್ಣಾ' ಎಂದು ಒಂದೇಸಮನೆ ಕೂಗುತ್ತ ಬಿಕ್ಕಿಬಿಕ್ಕಿ ಇಂದಿರೆಯು ಅಳುತ್ತಿದ್ದಳು. ತಂದೆ ತಾಯಿ ಬಂಧು ಬಳಗ ಯಾರೂ ಇಲ್ಲದೆ ಈ ಜಗತ್ತಿನಲ್ಲಿ ತನ್ನವನೆಂಬ ಒಬ್ಬನೇ ಆಗಿದ್ದ ಅಣ್ಣನು ನ್ಯಾಯಸ್ಥಾನದಲ್ಲಿ ಕಟಕಟೆಗಳ ಮಧ್ಯೆ ನಿಂತಿದ್ದ.

ಸಾಹುಕಾರ ಬಸಪ್ಪನನ್ನು ಕೊಲೆ ಮಾಡಿರುತ್ತಾನೆಂಬ ಅಪರಾಧಕ್ಕಾಗಿ ಅವನ ವಿಚಾರಣೆ ನಡೆದು ಅಂದು ತೀರ್ಮಾನ ಹೇಳುವುದಿತ್ತು.

ಊಹೆಗೆ ನಿಲುಕದ ವೇದನೆಯಿಂದ ಹನ್ನೆರಡು ವರ್ಷದ ಹುಡುಗಿಯು ಮಾಡುತ್ತಿದ್ದ ಚೀತ್ಕಾರವು ಕೋರ್ಟಿನ ಆವರಣವೆಲ್ಲ ತುಂಬಿತ್ತು. ಕೋರ್ಟಿನಲ್ಲಿ ತುಂಬಿದ್ದ ಲಾಯರುಗಳು, ಸಾಕ್ಷಿಗಳು, ಪ್ರೇಕ್ಷಕರು, ಅಧಿಕಾರಿಗಳು, ಪೋಲೀಸಿನವರು ಮತ್ತು ನ್ಯಾಯಮೂರ್ತಿಗಳು ಸಹ ನಿರುಪಾಯರಾಗಿ ಮರುಗುತ್ತಿದ್ದರು. ಸುಮ್ಮನಿರೆಂದು ಅವಳನ್ನು ಸಮಾಧಾನಪಡಿಸುವುದಕ್ಕಾಗಲಿ ಗದರಿಸುವುದಕ್ಕಾಗಲಿ ಪೋಲೀಸಿನವರಿಗೂ ಮನಸ್ಸು ಬರುತ್ತಿರಲಿಲ್ಲ—ಅವಳ ಅಳುವಿನ ಆರ್ತನಾದ ಅಷ್ಟು ಗಾಢವಾಗಿ ಅವರ ಮನಸ್ಸನ್ನು ಕಲಕಿಬಿಟ್ಟಿತ್ತು. ಕಟಕಟೆಯನ್ನು ಅಪ್ಪಿಕೊಂಡು ಅಳುತ್ತಿದ್ದ ತಂಗಿಯ ತಲೆಯನ್ನು ನೀರವವಾಗಿ ಸವರುತ್ತ ಅಪರಾಧಿ ನಟೇಶ ಕಣ್ಣುಗಳಲ್ಲಿ ನೀರು ಸುರಿಸುತ್ತ ನಿಂತಿದ್ದ.

ಸಾಹುಕಾರ ಬಸಪ್ಪ ಬಹಳ ಹೆಸರಾದ ಮನುಷ್ಯ; ಸಾವಿರಾರು ಬಡ ಸಂಸಾರಗಳ ಜೀವವನ್ನು—ಜೀವನವನ್ನು—ಹೀರಿ ಸಂಪಾದಿಸಿದ ಸಾಹುಕಾರಿಕೆ. ಅವನಲ್ಲಿ ಧರ್ಮಬಡ್ಡಿಯೆಂದರೆ ನಗನಾಣ್ಯಗಳ ಮೇಲೆ ರೂಪಾಯಿಗೆ ತಿಂಗಳಿಗೆ ಒಂದಾಣೆ ಮಾತ್ರ. ಬಡ್ಡಿಯ ದರ ಇಲ್ಲಿಂದ ಆರಂಭವಾಗಿ ರೂಪಾಯಿಗೆ ದಿನಕ್ಕೆ ಒಂದಾಣೆಯಂತೆ ಕೊಟ್ಟವರೂ ಉಂಟು. ಹೀಗೆ ಸಂಪಾದಿಸಿದ ಹಣ ಬ್ಯಾಂಕುಗಳಲ್ಲಿ, ಕಬ್ಬಿಣದ ಪೆಟ್ಟಿಗೆಗಳಲ್ಲಿ, ನೆಲಮಾಳಿಗೆಯಲ್ಲಿ ಹುಳಿತು ಹೋಗುತ್ತಿತ್ತು. ಅದರ ಪ್ರಭಾವದಿಂದ ಅವನಿಗೆ ಜನತೆಯಲ್ಲಿ ಗಣ್ಯವಾದ

ಸ್ಥಾನ ದೊರಕಿತ್ತು, ದೇಶದಲ್ಲಿ ಪ್ರಧಾರಿಕೆ ಬಂದಿತ್ತು. ನಿರಕ್ಷರ ಕುಕ್ಷಿಯಾದ ಅವನು ವಿದ್ವನ್ಮಂಡಲಿಗಳ ಅಧ್ಯಕ್ಷನಾಗಿದ್ದ; ಕೂಲಿಮಾಡಿಯಾಗಲಿ ಕೂಲಿ ಕೊಟ್ಟಾಗಲಿ ಅರಿಯದವನು ಕೂಲಿಗಾರ ಸಂಸ್ಥೆಗಳ ಮಾನ್ಯ ಪೋಷಕನಾಗಿದ್ದ; ಸಮಾಜದ ರಕ್ತ ಹೀರಿ ದೇಹ ಬೆಳೆಸಿದವನು ವಿಧಾನ ಸಭೆಯಲ್ಲಿ ಸಮಾಜದ ಪ್ರತಿನಿಧಿಯಾಗಿದ್ದ; ಎಲ್ಲ ಸಭೆಗಳಲ್ಲಿ ಎಲ್ಲ ಸಂಸ್ಥೆಗಳಲ್ಲಿ ಅವನಿಗೆ ಸ್ಥಾನವಿತ್ತು, ಪೂಜ್ಯತೆಯಿತ್ತು. ಅಂಥ ಪ್ರಖ್ಯಾತ ವ್ಯಕ್ತಿಯ ಕೊಲೆ ನಡೆದುಹೋಗಿತ್ತು. ಚಿನ್ನದ ಗಣಿಯ ಕೂಲಿ ಆಳು ನಟೇಶ ಅವನ ಬಳಿ ಸಾಲ ತೆಗೆದುಕೊಂಡಿದ್ದು ಅದನ್ನು ತೀರಿಸಲಾರದೆ ಸಾಹುಕಾರನೊಂದಿಗೆ ಜಗಳವಾಡಿ ಒಂದುದಿನ ಕತ್ತಲೆ ಯಲ್ಲಿ ಅವನನ್ನು ಹಿಂಬಾಲಿಸಿ ಕೊಲೆ ಮಾಡಿದನೆಂದು ಆಪಾದನೆ ಬಂದಿತ್ತು.

ಕೋರ್ಟಿನಲ್ಲಿ ಮಾಮೂಲಾಗಿ ಇರುತ್ತಿದ್ದ ಜನರಲ್ಲದೆ ವೃತ್ತಪತ್ರಿಕೆಗಳ ವರೂ ಪ್ರೇಕ್ಷಕರೂ ಬೇರೆಕಡೆ ಕೆಲಸವಿಲ್ಲದ ಅಧಿಕಾರಿಗಳೂ ಲಾಯರುಗಳೂ ತುಂಬಿಕೊಂಡಿದ್ದರು. ಕೊಲೆ ಮಾಡಿದವನಿಗೆ ಶಿಕ್ಷೆ ಕೊಡುವಾಗ ಹೆಚ್ಚು ಜನ ಸೇರಿದಷ್ಟೂ ಸತ್ತವನ ಆತ್ಮಕ್ಕೆ ಶಾಂತಿಯುಂಟಾಗುವುದೋ ಏನೋ. ಅವರು ಯಾವುದೇ ಕಾರಣದಿಂದ ಅಲ್ಲಿ ಸೇರಿರಲಿ, ಇಂದಿರೆಯ ಅಳುವಂತೂ ಅವರ ಕ್ರೋಧವನ್ನು ಕರಗಿಸಿತ್ತು; ಪರದೇಶಿಯಾಗುವ ಈ ಹುಡುಗಿಯ ಕಡೆಗಾದರೂ ನೋಡಿ ಕೊಲೆಪಾತಕನಿಗೆ ನ್ಯಾಯಮೂರ್ತಿಗಳು ಜೀವದಾನ ಕೊಡಬಾರದೆ ಎಂಬ ನಿರಾಧಾರವಾದ ಆಸೆ ಹಲವರಲ್ಲಿ ಹುಟ್ಟಿತ್ತು.

ವೇಳೆ ಕಳೆಯುತ್ತಿದ್ದುದು ಮನಸ್ಸಿಗೆ ಬಂದು ನ್ಯಾಯಮೂರ್ತಿಗಳು ತಮ್ಮ ತೀರ್ಮಾನವನ್ನು ಓದತೊಡಗಿದರು. ತೀರ್ಮಾನವು ಬಹಳ ಸಂಕ್ಷೇಪ ವಾಗಿದ್ದರೂ ಮೊಕದ್ದಮೆಯನ್ನು ಸಂಪೂರ್ಣವಾಗಿ ವಿಮರ್ಶೆ ಮಾಡಿತ್ತು. ತಮ್ಮ ಮುಂದೆ ದೊರೆತಿರುವ ಸಾಕ್ಷ್ಯದಲ್ಲಿ ನಟೇಶನೇ ಅಪರಾಧಿಯೆಂದು ಖಚಿತವಾಗುವಂತಿತ್ತು. ನ್ಯಾಯಪರಿಶೀಲಕರಾದ ಪಂಚಾಯತರಾದರೂ ನಟೇಶನೇ ಅಪರಾಧಿಯೆಂದು ಅಭಿಪ್ರಾಯಪಟ್ಟಿದ್ದರು. ಎಲ್ಲಕ್ಕಿಂತ ಮೇಲಾಗಿ ಒಂದು ಮುಖ್ಯ ವಿಷಯವನ್ನು ನ್ಯಾಯಮೂರ್ತಿಗಳು ತೀರ್ಮಾನದಲ್ಲಿ ತಿಳಿ ಸುವುದಿತ್ತು. ಸಾಲ ಕೊಟ್ಟವರನ್ನು ಈ ರೀತಿ ಕೊಲೆ ಮಾಡುತ್ತೇವೆಂದು ಬೆದರಿಸುವುದಕ್ಕೆ ನ್ಯಾಯಸ್ಥಾನವು ಉತ್ತೇಜನ ಕೊಡಬಾರದು. ಇಂಥ ಪುಂಡು ಜನರನ್ನು ಕ್ರೂರವಾಗಿ ಶಿಕ್ಷಿಸದೆಹೋದರೆ ಇದೇ ರೀತಿಯ ಅಪರಾಧಗಳು ದೇಶ

ದಲ್ಲಿ ಬೆಳೆಯಬಹುದು. ಈ ದೃಷ್ಟಿಯಿಂದ ನ್ಯಾಯಮೂರ್ತಿಗಳು ನಟೇಶನಿಗೆ ಫಾಸಿ ಶಿಕ್ಷೆ ವಿಧಿಸಿದ್ದರು.

ಅಂದಿಗೆ ಏಳು ದಿನಕ್ಕೆ ಬರುವ ಸೋಮವಾರ ಬೆಳಿಗ್ಗೆ 8 ಗಂಟೆಗೆ ಅವನನ್ನು ಗಲ್ಲಿಗೇರಿಸಿ ಪ್ರಾಣ ತೆಗೆಯತಕ್ಕುದೆಂದು ಹೇಳಿ ತೀರ್ಮಾನಕ್ಕೆ ತಮ್ಮ ರುಜು ಹಾಕಿ ನ್ಯಾಯಮೂರ್ತಿಗಳು ಮೇಲಕ್ಕೆದ್ದರು.

ತೀರ್ಮಾನವನ್ನು ಕೇಳಿ ಇಂದಿರೆಯು ಚಿಟ್ಟನೆ ಚೀರಿದಳು. ಅವಳನ್ನು ಸಂತೈಸಲು ನಟೇಶನು ಪ್ರಯತ್ನಿಸಿದ. ಇಬ್ಬರು ಪೋಲೀಸಿನವರು ಅವನನ್ನು ಎಳೆದೊಯ್ದು ಕೋರ್ಟಿನ ಹೊರಗಡೆ ನಿಲ್ಲಿಸಿದ್ದ ಪೋಲೀಸ್ ವ್ಯಾನಿನ ಬಳಿಗೆ ಕರೆದೊಯ್ದರು. ಕೋರ್ಟಿನಲ್ಲಿ ತುಂಬಿದ್ದ ಜನರು ತಾವಾಗಿ ದಾರಿ ಬಿಡುತ್ತಿರಲು ಇಂದಿರೆಯು ಅಂಬಿನಿಂದ ಬಿಟ್ಟ ಬಾಣದಂತೆ ಓಡಿಬಂದು ಅಣ್ಣನನ್ನು ಅಪ್ಪಿಕೊಂಡಳು.

ವ್ಯಾನಿನಲ್ಲಿ ಇನ್ನೂ ನಾಲ್ಕೈದು ಮಂದಿ ಖೈದಿಗಳು ಕುಳಿತಿದ್ದರು. ನಟೇಶನನ್ನು ಕುಳ್ಳಿರಿಸಿಕೊಂಡು ಅದು ಹೊರಡಬೇಕಾಗಿತ್ತು. ಅಣ್ಣತಂಗಿಯರ ಅಳುವಿನಲ್ಲಿ ವೇಳೆ ಕಳೆಯುತ್ತಿದೆಯೆಂದು ಒಬ್ಬ ಪೋಲೀಸಿನವನು ಅವಳನ್ನು ಗದರಿಸಿ ಆಚೆಗೆ ಎಳೆಯಲು ಮುಂದೆ ಕೈ ಚಾಚಿದ. ಅವರ ಅಗಲಿಕೆಯ ನೋವಿನ ಆಳವನ್ನರಿತ ಇನ್ನೊಬ್ಬನು ಆ ಕೈಯನ್ನು ತಡೆದು ಮೌನವಾಗಿಯೇ ಸುಮ್ಮನಿರೆಂದು ಹೇಳಿದ. ಇಂದಿರೆಯು ಒಂದೇ ಸಮನೆ 'ಅಣ್ಣಾ ಅಣ್ಣಾ' ಎಂದು ಅಳುತ್ತಿದ್ದವಳು ಪೋಲೀಸಿನವರ ಕಡೆಗೆ ತನ್ನ ಬಲಗೈಯನ್ನು ಚಾಚಿ ಬೇಡಿಕೊಳ್ಳುತ್ತ 'ಅಣ್ಣನನ್ನು ಬಿಟ್ಟುಬಿಡಿ; ನನ್ನ ಅಣ್ಣನನ್ನು ಬಿಟ್ಟುಬಿಡಿ' ಎಂದು ಅಂಗಲಾಚಿದಳು. ನಿಸ್ಸಹಾಯಕರಾದ ಅವರು ಮರುಮಾತಾಡದೆ ದಾರುಣವಾದ ಈ ದೃಶ್ಯವನ್ನು ನೋಡುತ್ತಿದ್ದರು. ನಟೇಶನು ತಂಗಿಯ ತಲೆಯನ್ನು ನೇವರಿಸುತ್ತ 'ಅವರೇನು ಮಾಡಿಯಾರು ತಂಗೀ. ಅಳಬೇಡಮ್ಮ; ಮನೆಗೆ ಹೋಗು' ಎಂದ.

'ಹೇಗೆ ಹೋಗಲಣ್ಣಾ; ನನಗೆ ಇನ್ನು ಯಾರುಗತಿ?'

'ದೇವರು ಕಾಪಾಡುತ್ತಾನೆ ಮಗು' ಎಂದು ಪೋಲೀಸಿನವನೆಂದ. ನಟೇಶನು ಅವನಕಡೆ ನೋಡಿ ತಟ್ಟನೆ ಮುಖ ತಿರುಗಿಸಿ,

'ದೇವರೆಂಬುವನಿಲ್ಲ ತಂಗೀ; ಅವನನ್ನು ನಂಬಬೇಡ. ದೇವರೆನ್ನುವನಿದ್ದರೆ ನಿರಪರಾಧಿಯಾದ ನನಗೆ ಶಿಕ್ಷೆಯಾಗುತ್ತಿರಲಿಲ್ಲ. ನೆರೆಹೊರೆಯ ಬಡವರನ್ನು ಆಶ್ರಯಿಸಿ ಬದುಕಮ್ಮ; ಇನ್ನು ಅವರೇ ನಿನ್ನ ಬಂಧುಗಳು, ತಂದೆ, ತಾಯಿ, ಅಣ್ಣ, ಎಲ್ಲವೂ ಅವರೇ' ಎಂದ.

ಆ ವೇಳೆಗೆ ಮೇಲಧಿಕಾರಿಯ ಮುಖವನ್ನು ದೂರದಲ್ಲಿ ನೋಡಿ ಪೋಲೀಸಿನವರು ಅಣ್ಣತಂಗಿಯರನ್ನು ಬೇರೆಮಾಡಿ ನಟೇಶನನ್ನು ವ್ಯಾನಿನೊಳಕ್ಕೆ ತಳ್ಳಿದರು. ಅವರು ತಳ್ಳಿದಾಗ ಕೆಳಗೆಬಿದ್ದ ಇಂದಿರೆಯು ಏಳುವುದರೊಳಗಾಗಿ ವ್ಯಾನು ಹೊರಟುಬಿಟ್ಟಿತು. ಅದರ ಹಿಂದೆ ಇಂದಿರೆಯೂ ಓಡತೊಡಗಿದಳು. ಎರಡು ನಿಮಿಷಗಳೊಳಗಾಗಿ ಅದು ಕಣ್ಮರೆಯಾಯಿತು; ಓಟದಲ್ಲಿ ತಾನು ಎಬ್ಬಿಸಿದ್ದ ಧೂಳು ಮಾತ್ರ ಇಂದಿರೆಯ ಸುತ್ತ ತುಂಬಿಕೊಂಡಿತ್ತು.

— ೨ —

ಬೆಂಗಳೂರಿನಲ್ಲಿ ದಂಡಿನ ವೆಂಕಪ್ಪಯ್ಯನವರೆಂದರೆ ಬಹಳ ಹೆಸರಾದ ವ್ಯಕ್ತಿ. ಅವರ ಮನೆತನಕ್ಕೇ ದಂಡಿನ ಮನೆತನವೆಂದು ಹೆಸರು. ಆ ಹೆಸರು ಬರುವುದಕ್ಕೆ ಕಾರಣ ಸರಿಯಾಗಿ ತಿಳಿಯದು; ಅವರ ಪೂರ್ವಿಕರಲ್ಲಿ ಯಾರೂ ದಂಡಿನಲ್ಲಿ ಕೆಲಸಮಾಡಿದಂತೆ ಕಾಣಲಿಲ್ಲ. ಆದರೆ ದಂಡಿನ ಜನರೊಡನೆ ವ್ಯಾಪಾರ ಮಾಡಿ ಅಥವಾ ದಂಡಿಗೆ ಬೇಕಾದ ಪದಾರ್ಥಗಳನ್ನೋ ಜನರನ್ನೋ ಒದಗಿಸಿ ಅವರ ಪೂರ್ವಿಕರಲ್ಲಿ ಯಾರೋ ಬಹಳವಾಗಿ ಹಣ ಸಂಪಾದಿಸಿದರಂತೆ. ಅವರ ಕಾಲದಲ್ಲಿ ಕಟ್ಟಿದ ದೊಡ್ಡ ಬಂಗಲೆ—ಬಂಗಲೆಯೇನು, ಸುಮಾರಾದ ಅರಮನೆ—ಈಗಲೂ ದಂಡಿನ ಪ್ರದೇಶದಲ್ಲಿದೆ. ಅವನು ಬಿಟ್ಟುಹೋದ ಐಶ್ವರ್ಯ ಅವರ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳ ಕಾಲದಲ್ಲಿ ತಾನಾಗಿ ಬೆಳೆಯುತ್ತ ಹೋಗಿ ವೆಂಕಪ್ಪಯ್ಯನ ಕೈಗೆ ಬರುವಾಗ್ಗೆ ಅದು ಬೃಹದ್ರೂಪವನ್ನು ತಾಳಿತ್ತು. ನಗದು ಹಣವೇ ಸುಮಾರು ಇಪ್ಪತ್ತು ಲಕ್ಷ ರೂಪಾಯಿಗಳಾದರೂ ಇರಬೇಕೆಂದು ಜನ ಆಡಿಕೊಳ್ಳುತ್ತಿದ್ದರು. ಕೊಯಮುತ್ತೂರಿನಲ್ಲಿ ಒಂದು ಹತ್ತಿ ಗಿರಣಿ, ಬೆಂಗಳೂರಿನಲ್ಲಿ ಒಂದು ಎಣ್ಣೆ ಕಾರ್ಖಾನೆ, ಜೊತೆಗೆ ನಾಲ್ಕಾರು ಜೋಡಿ ಗ್ರಾಮಗಳು, ಕಾವೇರಿ ನಾಲೆಯ ಕೆಳಗೆ ಒಂದುನೂರೆಕರೆ ಗದ್ದೆ, ಇಷ್ಟು ವೆಂಕಪ್ಪಯ್ಯನ ಕಾಲಕ್ಕೆ ಬೆಳೆದಿದ್ದ ಆಸ್ತಿ.

ದೇವರ ಸೃಷ್ಟಿಯಲ್ಲಿ ಯಾವುದೋ ಒಂದು ನಿಯಮ ನಮಗೆ ತಿಳಿಯದೆ ಅಡಗಿರುವಂತಿದೆ. ಅದನ್ನು ನ್ಯಾಯವೆಂದು ಕರೆಯಲಿ, ಧರ್ಮವೆಂದು ಕರೆಯಲಿ, ಕರ್ಮವೆಂದು ಕರೆಯಲಿ, ಅದರ ಇರುವಿಕೆಯಂತೂ ನಿಜ. ಮನುಷ್ಯನಿಗೆ ಒಂದುಕಡೆ ಸುಖ ಹೆಚ್ಚಿದಷ್ಟೂ ಇನ್ನೊಂದುಕಡೆ ಅದು ತಗ್ಗುತ್ತ ಹೋಗುತ್ತದೆ. ಎಲ್ಲರ ಪಾಲಿಗೆ ಹಂಚಿಕೆಯಾಗಿರುವ ಸುಖದ ಅಥವಾ ದುಃಖದ ಮೊತ್ತವೂ ಒಂದೇ. ವೆಂಕಪ್ಪಯ್ಯನಿಗಾದರೂ ಈ ಪ್ರಕೃತಿ ಧರ್ಮ ಬಿಡಲಿಲ್ಲ. ಇಷ್ಟು ಆಸ್ತಿಯನ್ನು ಪಡೆದ ಶ್ರೀಮಂತನಿಗೆ ಇದ್ದ ಒಬ್ಬ ಮಗ ಮತ್ತು ಅವನ ಕೈಹಿಡಿದ ಮುತ್ತಿನಂಥ ಸೊಸೆ ಎಳೆಯ ಮಗುವೊಂದನ್ನು ಬಿಟ್ಟು ತಮ್ಮ ಜೀವನದ ಆರಂಭದಲ್ಲೇ ಕಣ್ಣು ಮುಚ್ಚಿದ್ದರು. ಮಗನು ಹೋದ ವ್ಯಸನದಲ್ಲಿ ತಾಯಿಯೂ ಸಹ ವರ್ಷ ತುಂಬುವುದರೊಳಗಾಗಿ ತನ್ನ ಯಾತ್ರೆಯನ್ನು ಮುಗಿಸಿದಳು. ಮೂರು ವರ್ಷದ ಮಗುವನ್ನು ಬೆಳೆಸಿ ತಕ್ಕ ವರನಿಗೆ ಕೊಟ್ಟು ಮದುವೆಮಾಡಿ ಪಿತ್ರಾರ್ಜಿತವಾದ ಈ ಅಖಂಡ ಆಸ್ತಿಯನ್ನು ಜೋಪಾನವಾಗಿ ಅವರ ವಶಕ್ಕೆ ಕೊಡುವ ಗುರುತರವಾದ ಜವಾಬ್ದಾರಿ ವೆಂಕಪ್ಪಯ್ಯನದಾಯಿತು.

ವೆಂಕಪ್ಪಯ್ಯ ವ್ಯವಹಾರದಲ್ಲಿ ಬಹಳ ಅರಿತವ, ನುರಿತವ. ಜೀವಮಾನವು ಶಾಶ್ವತವಲ್ಲವೆಂದೂ ತಾನು ಸಹ ಎಂದಾದರೂ ಈ ದೇಹವನ್ನು ಬಿಡಲೇಬೇಕೆಂದೂ, ತನ್ನ ಮೊಮ್ಮಗಳು ಇನ್ನೂ ಬೆಳೆದಿಲ್ಲವೆಂದರೆ ಮೃತ್ಯು ಕೇಳುವುದಿಲ್ಲವೆಂದೂ ಅವನಿಗೆ ತಿಳಿದಿತ್ತು. ಹುಡುಗಿಯನ್ನು ಸಾಕುವುದಕ್ಕಾಗಿ ತನ್ನ ದೂರದ ಸಂಬಂಧಿಯಾದ ಗೌರಮ್ಮನೆಂಬೊಬ್ಬಾಕೆಯನ್ನು ತಂದಿಟ್ಟುಕೊಂಡಿದ್ದ. ಬೇರೆ ಯಾವ ಆಶ್ರಯವೂ ಇಲ್ಲದಿದ್ದ ಗೌರಮ್ಮನಿಗೆ ಒಳ್ಳೆಯ ಸ್ಥಳ ಸಿಕ್ಕಹಾಗಾಯಿತು. ಮಗುವನ್ನು ಅಕ್ಕರೆಯಿಂದ ಬೆಳೆಸಬಲ್ಲಳೆಂಬ ಸಮಾಧಾನವೂ ವೆಂಕಪ್ಪಯ್ಯನಿಗೆ ಆಯಿತು. ಆದರೆ ಇಷ್ಟು ದೊಡ್ಡ ಆಸ್ತಿಯನ್ನು ಹೇಗೆ ಜೋಪಾನ ಮಾಡುವುದು ಎಂಬ ಯೋಚನೆ ಅವನನ್ನು ಬಾಧಿಸುತ್ತಲೇ ಇತ್ತು. ಹಣಕ್ಕಾಗಿ ಜನ ಏನುಬೇಕಾದರೂ ಮಾಡುತ್ತಾರೆ. ಬಂಧು, ಬಳಗ, ಸ್ನೇಹ, ಕೃತಜ್ಞತೆ, ಸತ್ಯ, ಧರ್ಮ, ನ್ಯಾಯ, ಪುಣ್ಯ, ಪಾಪ, ಇವೆಲ್ಲಾ ಹಣದ ಮುಂದೆ ಬರಿಯ ಪೊಳ್ಳು ಮಾತುಗಳು. ಹಣವನ್ನು ಸಂಪಾದಿಸುವುದು ಕಷ್ಟ, ಅದನ್ನು ಜೋಪಾನವಾಗಿಡುವುದು ಮತ್ತೂ ಕಷ್ಟ. ಸ್ಮಶಾನದಲ್ಲಿ ಬಿಸುಟ

ಹೆಣವನ್ನು ಮುತ್ತಲು ರಣಹದ್ದುಗಳು ಹೊಂಚುಹಾಕುತ್ತಿರುವಂತೆ ಸಿರಿವಂತನ ಹಣವನ್ನು ದೋಚಲು ಜನ ಸುತ್ತಲೂ ಕಾದಿರುತ್ತಾರೆ. ಅಂಥವರು ಯಾರಿಗೂ ಸಿಕ್ಕದಂತೆ ತನ್ನ ಪೂರ್ವಿಕರು ತನ್ನ ಕೈಗೆ ಕೊಟ್ಟ ಆಸ್ತಿಯನ್ನು ತನ್ನ ರಕ್ತ ಸಂಬಂಧಿಗಳ ಕೈಗೆ ತಾನು ಕೊಡಬೇಕಾದುದು ತನ್ನ ಧರ್ಮ; ಅಲ್ಲಿಗೆ ತನ್ನ ಪಿತೃದೇವತೆಗಳಿಗೆ ಸಮಾಧಾನ ಎಂದು ವೆಂಕಪ್ಪಯ್ಯನು ಯೋಚಿಸುತ್ತಿದ್ದ.

ಜೀವನದಲ್ಲಿ ಒಂದು ಗಡಿಯನ್ನು ದಾಟಿದ ಮೇಲೆ ವಯಸ್ಸು ಬಹುಬೇಗ ಓಡುತ್ತಿರುವಂತೆ ಕಾಣುತ್ತದೆ. ಸರ್ಕಾರಿ ನೌಕರಿಯಲ್ಲಿದ್ದು ವಿಶ್ರಾಂತಿ ಪಡೆದ ಕೆಲವರನ್ನು ನಾನು ನೋಡಿದೇನೆ. ಕೆಲಸದಲ್ಲಿದ್ದಾಗ ಇನ್ನೂ ಹರೆಯದವರಾಗಿ ಕಾಣುತ್ತಿದ್ದ ಅವರು ವಿಶ್ರಾಂತಿ ಪಡೆದ ಮೂರು ತಿಂಗಳಲ್ಲಿ ಮುದುಕರಾಗಿ ಬಿಟ್ಟಿರುತ್ತಾರೆ; ಮತ್ತೆ ಮೂರು ವರ್ಷದಲ್ಲಿ ವಿಚಾರಿಸಿದರೆ ಅವರ ಹೆಸರೇ ಇರುವುದಿಲ್ಲ. ಹಾಗೂ ಉಳಿದು ಷಷ್ಠಿ ಪೂರ್ತಿಮಾಡಿಕೊಳ್ಳುವವರು ಅತಿ ವಿರಳ. ಅದಕ್ಕೆ ಕಾರಣವಿಷ್ಟೇ; ಸರ್ಕಾರಿ ನೌಕರರಿಗೆ ಕೆಲಸದಿಂದ ನಿವೃತ್ತರಾಗುವುದು ಒಂದು ಗಡಿ. ಅಲ್ಲಿಗೆ ತಮಗೆ ವೃದ್ಧಾಪ್ಯ ಸನ್ನಿಹಿತವಾಯಿತೆಂಬ ಭಾವನೆ ಮನಸಿನಲ್ಲಿ ಹುಟ್ಟುತ್ತದೆ. ಅದರಿಂದ ಇನ್ನೂ ಎಲ್ಲಿಯೋ ಇದ್ದ ಯಮದೂತರನ್ನು ಇವರು ಹತ್ತಿರಕ್ಕೆ ಕರೆಸಿಕೊಳ್ಳುತ್ತಾರೆ.

ವೆಂಕಪ್ಪಯ್ಯನವರು ಹೀಗೆ ಮೃತ್ಯುವಿಗೆ ಆಮಂತ್ರಣ ಕೊಡದಿದ್ದರೂ ಅದು ಸಮಯ ಕಾಯುತ್ತಿದೆಯೆಂದಂತೂ ಅರಿತುಕೊಂಡರು. ತಮಗೆ ದೇವರು ಕೊಟ್ಟಿದ್ದ ಬುದ್ಧಿಯನ್ನೆಲ್ಲ ಉಪಯೋಗಿಸಿ, ಅನುಭವದ ಸಾರವನ್ನೆಲ್ಲ ಸೇರಿಸಿ, ತನಗೆ ತಿಳಿದ ಬುದ್ಧಿಶಾಲಿಗಳೊಡನೆಲ್ಲ ಆಲೋಚಿಸಿ, ನ್ಯಾಯಶಾಸ್ತ್ರ ಪಾರಂಗತವಾದ ವಕೀಲರಿಗೆ ದಣಿಯುವಷ್ಟು ಹಣ ಕೊಟ್ಟು ತನ್ನ ಆಸ್ತಿಯ ಭದ್ರತೆಯನ್ನು ಗುರಿಯಾಗಿಟ್ಟು ಮೃತ್ಯು ಪತ್ರವನ್ನು ಬರೆದಿಟ್ಟರು. ತನ್ನ ಐದು ವರ್ಷ ವಯಸ್ಸಿನ ಮೊಮ್ಮಗಳು ವಸಂತ ಆ ಎಲ್ಲ ಆಸ್ತಿಗೂ ಉತ್ತರಾಧಿಕಾರಿ. ಅವಳ ಕೈಗೆ ಆ ಆಸ್ತಿ ಸೇರುವವರೆಗೆ ಮೂರು ಜನ ಟ್ರಸ್ಟಿಗಳು, ತನಗೆ ಬಹು ಆಪ್ತರಾಗಿದ್ದ ರಾವ್ ಸಾಹೇಬ್ ನಂಜುಂಡಯ್ಯನವರು, ಸರ್ವೋತ್ತಮ ಶೆಟ್ಟಿಯವರು, ಸಾಹುಕಾರ ತಿರುಮಲಯ್ಯನವರು ಆ ಆಸ್ತಿಯ ವಹಿವಾಟನ್ನು ನೋಡಿಕೊಳ್ಳುತ್ತಿದ್ದು ವಸಂತಳನ್ನು ವಿದ್ಯಾವತಿಯನ್ನಾಗಿ ಮಾಡಿ ತಾನೀಗ ಮೃತ್ಯು ಪತ್ರದಲ್ಲಿ ನಿರ್ದಿಷ್ಟಪಡಿಸಿರುವ ಕೆಲವು ನಿಯಮಗಳಿಗನುಸಾರವಾಗಿ

ಆಸ್ತಿಯನ್ನು ಅವಳಿಗೆ ವಹಿಸಬೇಕು. ಮೃತ್ಯು ಪತ್ರದಲ್ಲಿ ತಾನು ಸೂಚಿಸಿರುವ ನಿಯಮಗಳು ಅವುಗಳ ಪಾಲನೆಗೆ ಯುಕ್ತವಾದ ಕಾಲ ಬರುವವರೆಗೂ ಗುಟ್ಟಾಗಿರಬೇಕು; ಟ್ರಸ್ಟಿಗಳ ಹೊರತು ಬೇರೆಯವರಿಗೆ ತಿಳಿಸಕೂಡದು. ವೆಂಕಪ್ಪಯ್ಯ ಬಹಳ ಬುದ್ಧಿವಂತಿಕೆಯಿಂದ ಮೃತ್ಯು ಪತ್ರ ಬರೆದಿದ್ದ. ಅವನಿಗೆ ಮನುಷ್ಯ ಸ್ವಭಾವದಲ್ಲಿ ಅಷ್ಟು ಹೆಚ್ಚು ನಂಬಿಕೆಯಿಲ್ಲ; ಅದರಿಂದ ತನ್ನ ಮೊಮ್ಮಗಳಿಗೆ ಮೋಸವಾಗಬಹುದಾದ ಎಲ್ಲ ಸಂದರ್ಭಗಳನ್ನೂ ಮುಂದಾಗಿಯೇ ಯೋಚಿಸಿ ಅವಕ್ಕೆ ತಕ್ಕ ತೋಡುಗಳನ್ನು ಮೃತ್ಯು ಪತ್ರದಲ್ಲಿ ಸೇರಿಸಿದ್ದ.

ತಾನು ಮಾಡಿದ ಏರ್ಪಾಡು ಸರಿಹೋಯಿತೆಂಬ ಭರವಸೆಯಿಂದ ವೆಂಕಪ್ಪಯ್ಯ ತನ್ನ ಪಿತೃಗಳನ್ನು ಸೇರಿಕೊಂಡಿದ್ದ. ಗೌರಮ್ಮನ ಪೋಷಣೆ, ಟ್ರಸ್ಟಿಗಳ ಮೇಲ್ವಿಚಾರಣೆ, ನೌಕರರ ಆದರಣೆಗಳಲ್ಲಿ ವಸಂತ ಹನ್ನೆರಡು ವಸಂತ ಮಾಸಗಳನ್ನು ಕಳೆದು ಹದಿಮೂರನೆಯದನ್ನು ಸವಿನೋಡುತ್ತಿದ್ದಳು.

ಈ ಹದಿಮೂರು ವರ್ಷಗಳಲ್ಲಿ ಪ್ರಪಂಚ ಬಹು ಬದಲಾವಣೆ ಹೊಂದಿತ್ತು. ಎರಡನೆಯ ಮಹಾ ಯುದ್ಧವು ಮುಗಿದು ಜನಜೀವನವನ್ನು ತಲೆಕೆಳಗು ಮಾಡಿತ್ತು. ಗಾರೆಯ ಕೆಲಸದಿಂದ ಜೀವಿಸುತ್ತಿದ್ದವನು, ಸಂತೆಯಲ್ಲಿ ತಲೆಯ ಮೇಲೆ ಸರಕು ಹೊತ್ತು ಮಾರುತ್ತಿದ್ದವನು, ಬೀದಿಯಲ್ಲಿ ಮಿಠಾಯಿ ಬೋಂಡಗಳನ್ನು ಮಾರಿ ಹೊಟ್ಟೆಹೊರೆದುಕೊಳ್ಳುತ್ತಿದ್ದವನು–ಎಲ್ಲರೂ ಲಕ್ಷಲಕ್ಷಗಳನ್ನು ಸೂರೆ ಹೊಡೆದುಬಿಟ್ಟರು. ಸತ್ಯಧರ್ಮಗಳು ಅಡವಿಯನ್ನು ಸೇರಿದುವು. ಏನು ಮಾಡಿದರೂ ಸರಿ, ಹಣವನ್ನು ಮಾತ್ರ ಶೇಖರಿಸಬೇಕು ಎಂಬುದು ಮಹಾ ಪಲ್ಲವಿಯಾಯಿತು. ಈ ಕೆಟ್ಟ ಗಾಳಿಯ ಸೋಂಕು ಜನತೆಯಲ್ಲಿನ ಎಲ್ಲ ಸದ್ಗುಣಗಳನ್ನೂ ಹಿಂಡಿ ಹಾಕಿತು. ಸತ್ಯವಂತನೂ ಪಾಪಭೀರುವೂ ಬಾಳುವುದೇ ಕಷ್ಟವಾಯಿತು.

ಪಂಜು ಹಿಡಿದು ಹುಡುಕಿದರೂ ಸಿಕ್ಕದೆ ಇರುವ ಸತ್ಯ ಧರ್ಮಗಳನ್ನು ವಸಂತಳ ಟ್ರಸ್ಟಿಗಳಿಂದಲೂ ಪಾಲಿಸಿಕೊಂಡು ಬರುವುದು ಹೇಗೆ? ಏಕೆ? ದೊರೆತ ಸನ್ನಿವೇಶದ ಪ್ರಯೋಜನವನ್ನು ಅವರೂ ತಮ್ಮ ತಮ್ಮ ಶಕ್ತ್ಯನುಸಾರ ಮಾಡಿಕೊಂಡರು. ನ್ಯಾಯವಾಗಿ ಬರಬೇಕಾದ ಲಾಭ ರೂಪಾಯಿಗೆ ಒಂದಾಣೆ; ಅಷ್ಟನ್ನು ವಸಂತಳ ಲೆಕ್ಕಕ್ಕೆ ಜಮಾ ಕಟ್ಟಬೇಕು; ತಮ್ಮ ಪ್ರಯತ್ನದಿಂದ ಅಥವಾ ಅದೃಷ್ಟದಿಂದ ಲಾಭ ಹನ್ನೆರಡಾಣೆ ಬಂದರೆ ಅಷ್ಟನ್ನೂ

ಆ ಹುಡುಗಿಗೆ ಒಪ್ಪಿಸಿಬಿಡುವುದು ಸಾಧ್ಯವೆ? ಇಂಥ ಸಮಾಧಾನಗಳಲ್ಲಿ ಸಿಕ್ಕಿ ಶೆಟ್ಟರು 8-10 ಲಕ್ಷ ರೂಪಾಯಿಗಳನ್ನು ಕೂಡಿಹಾಕಿಕೊಂಡರು. ಭತ್ತದ ಧಾರಣೆ ಸರ್ಕಾರದವರು ಕೊಡುವುದು 20 ರೂಪಾಯಿ ಇದ್ದು ತಾನು 38-40 ರಂತೆ ಮಾರಿದಾಗ ಈ ಹೆಚ್ಚಿಗೆಯ 18-20 ರೂಪಾಯಿ ತನಗೆ ತಾನೆ ಬರಬೇಕಾದುದು. ಅದನ್ನು ತಾನು ತೆಗೆದುಕೊಳ್ಳುವುದು ದ್ರೋಹವೇ ಅಲ್ಲ. ಜೊತೆಗೆ ಹತ್ತಿರದಲ್ಲೇ ಒಂದು ಅಕ್ಕಿಯ ಗಿರಣಿ ಹಾಕಿಕೊಂಡು ಅದರಿಂದ ಬಂದ ಕೂಲಿ, ಅಕ್ಕಿಯ ಇಳಿವರಿಯಲ್ಲಿ ಲಾಭ ಇವೆಲ್ಲಾ ಸ್ವಂತ ತಾನೆ! ಇಂಥ ಲೆಕ್ಕಾಚಾರದಲ್ಲಿ ತಿರುಮಲಯ್ಯ 5-6 ಲಕ್ಷ ರೂಪಾಯಿ, ಮೂವತ್ತು ಎಕರೆ ಗದ್ದೆ ಸಂಪಾದಿಸಿದರೆ ಅದೇನೂ ಹೆಚ್ಚಲ್ಲ. ರಾವ್ ಸಾಹೇಬರೂ ಕನಿಷ್ಟಪಕ್ಷ ಇತರರಷ್ಟಾದರೂ ಸಂಪಾದಿಸಿಕೊಂಡರೆಂದು ಜನ ಆಡಿಕೊಳ್ಳುತ್ತಿದ್ದರು. ಅದು ಹೇಗೇ ಇರಲಿ ಅವರ ದೃಷ್ಟಿ ದೊಡ್ಡ ಬಾಬಿನ ಮೇಲೆ ಬಿದ್ದಿತ್ತು.

ನಂಜುಂಡಯ್ಯನವರ ಮಗ ನರಸಿಂಹಸ್ವಾಮಿ ವಸಂತಳಿಗಿಂತ ಒಂದೆರಡು ವರ್ಷ ದೊಡ್ಡವನು. ತನ್ನ ಪೋಷಣೆಗೆ ವಸಂತಳು ಬಂದ ಮೊದಲುಗೊಂಡು ನಂಜುಂಡಯ್ಯನವರು ಸ್ವಾಮಿಯನ್ನು ವಸಂತಳ ಜೊತೆಯಲ್ಲಿ ಹೆಚ್ಚಾಗಿ ಬಿಡುತ್ತಿದ್ದರು. ಓದಿನಲ್ಲಿ ಒಂದು ವರ್ಷ ಮುಂದಿನ ತರಗತಿಯಲ್ಲಿದ್ದ ಸ್ವಾಮಿಯು ದೈವಾನುಕೂಲದಿಂದ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಒಂದುಸಲ ನಿಂತುಹೋಗಿ ಅಲ್ಲಿಂದ ಮುಂದಕ್ಕೆ ಇಬ್ಬರೂ ಒಂದೇ ತರಗತಿಯಲ್ಲಿ ಓದಲು ಅನುಕೂಲವಾಗಿತ್ತು.

ನಂಜುಂಡಯ್ಯನವರ ಯೋಚನೆ ಕುಶಲಮತಿಯಾದ ವಸಂತಳಿಗೆ ತಿಳಿಯದೆ ಇರಲಿಲ್ಲ; ಆದರೆ ಅದಕ್ಕೆ ವಿರೋಧವನ್ನು ಯಾವಾಗಲೂ ಅವಳು ವ್ಯಕ್ತಪಡಿಸಲಿಲ್ಲ. ಸ್ಕೂಲಿಗೆ ಹೋಗಬೇಕಾದಾಗ ಸದಾ ತನ್ನ ಮೋಟಾರನ್ನು ಉಪಯೋಗಿಸುವಳೇ ಹೊರತು ಸ್ವಾಮಿಯ ಕಾರಿನಲ್ಲಿ ಹೋಗಳು; ಯಾವುದೊಂದು ಪುಸ್ತಕವನ್ನಾಗಲಿ ಪಾಠವನ್ನಾಗಲಿ ತಾನು ಬೇಕಾದರೆ ಅವನಿಗೆ ಹೇಳಿ ಕೊಡುವಳು, ಅವನನ್ನು ಏನೂ ಕೇಳುತ್ತಿರಲಿಲ್ಲ; ಇಬ್ಬರೂ ಜೊತೆಯಲ್ಲಿ ಕಾಫೀಬಾರಿಗೆ ಅಥವಾ ಸಿನೀಮಾಕ್ಕೆ ಹೋದರೆ ಹಣವನ್ನು ತಾನೇ ಕೊಡಬೇಕು. ಯಾವುದಾದರೂ ನೆಪ ಮಾಡಿಕೊಂಡು ಸ್ವಾಮಿಯು ಏನನ್ನಾದರೂ ಅವಳಿಗೆ ಕೊಡಿಸಲು ಹೋದರೆ ತೆಗೆದುಕೊಳ್ಳುತ್ತಿರಲಿಲ್ಲ. ನಂಜುಂ

ಡಯ್ಯನವರ ಹೆಂಡತಿಯು ಯಾವುದಾದರೂ ಹಬ್ಬ ಹುಣ್ಣಿಮೆಯ ಕಾರಣದ ಮೇಲೆ ವಸಂತಳನ್ನು ತಮ್ಮ ಮನೆಗೆ ಕರೆಯಬಹುದೆಂದು ತೋರಿದ ದಿನ ಇವಳ ಮನೆಯಲ್ಲಿ ಏನಾದರೊಂದು ಸಮಾರಂಭವಿದ್ದೇ ಇರುತ್ತಿತ್ತು. ಯಾವ ವಿಥ ದಲ್ಲೂ ಸ್ವಾಮಿಯ ಹಂಗಿಗೆ ತಾನು ಒಳಪಡಬಾರದೆಂಬಂತೆ ವಸಂತ ನಡೆದು ಕೊಳ್ಳುತ್ತಿದ್ದಳು. ತನ್ನ ಆಸ್ತಿಯ ಮೇಲಿನ ವ್ಯಾಮೋಹದಿಂದ ನಂಜುಂ ಡಯ್ಯನವರು ಈ ಆಟ ಹೂಡಿದ್ದಾರೆಂಬ ನಂಬಿಕೆ ವಸಂತಳಿಗೆ ಬಂದಿತ್ತು. ಅದರಿಂದ ಸ್ವಾಮಿಯ ಮೇಲೆ ಒಂದು ರೀತಿಯ ತಿರಸ್ಕಾರವೂ ಹುಟ್ಟಿತ್ತು. ವಿದ್ಯಾವಂತಳಾದ ತಾನು ಈ ತೆರದ ಆಕರ್ಷಣೆಗಳಿಗೆ ಬಲಿಯಾಗಬಾರದೆಂದೂ ತನ್ನ ಭವಿಷ್ಯವನ್ನು ತನ್ನ ಕೈಯಲ್ಲಿಟ್ಟುಕೊಂಡಿರಬೇಕೆಂದೂ ಅವಳು ಗಟ್ಟಿ ಮನಸ್ಸು ಮಾಡಿದ್ದಳು. ಚಿಕ್ಕಂದಿನಿಂದ ಅವಳನ್ನು ಸಾಕಿ ದೊಡ್ಡವಳನ್ನಾಗಿ ಮಾಡಿದ ಗೌರಮ್ಮನ ಸಹಕಾರ ಈ ವಿಷಯದಲ್ಲಿ ಅವಳಿಗೆ ಸಂಪೂರ್ಣವಾಗಿತ್ತು.

— ೩ —

ವಸಂತಳು ಪ್ರಾಪ್ತವಯಸ್ಕಳಾಗಿ ಸುಮಾರು ಒಂದುವಾರವಾಗಿತ್ತು. ಹದಿನೆಂಟರ ಗೆರೆಯನ್ನು ದಾಟಿದ ಮರುದಿನವೇ ಟ್ರಸ್ಟಿಗಳು ತನ್ನ ಆಸ್ತಿಯನ್ನೆಲ್ಲ ತನಗೆ ವಹಿಸಿಕೊಡುತ್ತಾರೆಂದು ನಿರೀಕ್ಷಿಸಿದಳು. ಆದರೆ ಆ ದಿನ ಕಳೆದು ಒಂದು ವಾರವಾದರೂ ಆ ಪ್ರಸ್ತಾಪವೇ ಬರಲಿಲ್ಲ. ಇನ್ನು ಕಾದಿರಲು ಸಾಧ್ಯವಿಲ್ಲದೆ ವಸಂತಳು ಆ ಮೂವರಿಗೂ ಟೆಲಿಫೋನು ಮಾಡಿ ತನ್ನ ಬಂಗಲೆಗೆ ಬರಮಾಡಿ ಕೊಂಡಳು. ವಿಸ್ತಾರವಾದ ಒಂದು ಕೋಣೆಯಲ್ಲಿ ಹಾಕಿದ್ದ ದುಂಡು ಮೇಜೊಂ ದರ ಸುತ್ತ ಕುಳಿತು ಮೂರು ಜನ ಟ್ರಸ್ಟಿಗಳೂ ವಸಂತಳೂ ಈ ಮಾತನ್ನು ಆಡುತ್ತಿದ್ದರು. ಸರ್ವಸಾಕ್ಷಿಯಾಗಿದ್ದ ಗೌರಮ್ಮನು ದೂರದಲ್ಲಿ ಒಂದು ಸೋಫಾದ ಮೇಲೆ ಕುಳಿತು ತನಗೆ ಅದು ಸಂಬಂಧವಿಲ್ಲದ ಮಾತೆಂಬಂತೆ ಕಸೂತಿ ಹಾಕುವುದರಲ್ಲಿ ತಲ್ಲೀನಳಾಗಿದ್ದಳು. ವಸಂತ ತನ್ನ ಟ್ರಸ್ಟಿಗಳನ್ನು ಕೇಳಿದಳು,

'ನಮ್ಮ ತಾತ ಬರೆದಿರುವ ಉಯಿಲು ಪ್ರಕಾರ ನನಗೆ ಎಷ್ಟು ಆಸ್ತಿ ಬರುತ್ತೆ ? '

ಟ್ರಸ್ಟಿಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಹದಿನೈದು ವರ್ಷ ಒಬ್ಬರಿಂದ ಒಂದು ಪ್ರಶ್ನೆ ಹಾಕಿಸಿಕೊಳ್ಳದೆ ಆಡಳಿತ ನಡೆಸಿದವರು ಈಗ

ಒಬ್ಬ ಹುಡುಗಿಗೆ ಉತ್ತರ ಕೊಡಬೇಕಾದ ಕಠಿ ಪ್ರಸಂಗವೊದಗಿತ್ತು. ಯಾವ ಉತ್ತರವನ್ನು ಹೇಳಬೇಕಾಗಲಿ ಅದು ಉಯಿಲಿನಲ್ಲಿ ವೆಂಕಪ್ಪಯ್ಯನು ಬರೆದಿದ್ದ ನಿಯಮಗಳಿಗನುಸಾರವಾಗಿರಬೇಕು ಮತ್ತು ಮೂರು ಜನರ ಮಾತೂ ಒಂದೇ ಆಗಿರಬೇಕು. ವಸಂತಳ ಪ್ರಶ್ನೆಗೆ ಉತ್ತರ ಕೊಡಬಹುದೆಂದು ಉಳಿದ ಇಬ್ಬರ ಮುಖಭಾವದಿಂದ ಅರಿತ ರಾವ್ ಸಾಹೇಬರು ಶೆಟ್ಟರನ್ನು ಕುರಿತು,

'ಸ್ವಲ್ಪ ಆ ಲೆಕ್ಕ ಹೇಳಿ ಶೆಟ್ಟರೆ, ಅಮ್ಮಯ್ಯ ಕೇಳುತಿದಾಳೆ' ಎಂದರು.

ಶೆಟ್ಟರು ತಮ್ಮ ಲೆಕ್ಕದ ಪುಸ್ತಕವನ್ನು ತೆಗೆದು ಹಿಂದೆ ಮುಂದೆ ತಿರುವಿ ಹಾಕಿ ನೋಡಿ ಕರಾರುವಾಕಾಗಿ ಲೆಕ್ಕವನ್ನೊಪ್ಪಿಸುವ ಭರವಸೆಯಿಂದ ಹೇಳ ತೊಡಗಿದರು :

'ಕಾವೇರಿ ನಾಲೆ ಕೆಳಗಿನ ಜಮೀನುಗಳು, ಮಾರಸಂದ್ರ, ಗುಂಡೇನಹಳ್ಳಿ, ರಾಯಾಪುರ, ಹುಲಿಕಟ್ಟೆ ಈ ಜೋಡಿ ಗ್ರಾಮಗಳು ಇವುಗಳ ಒಟ್ಟು ಅಂದಾಜು ಬೆಲೆ ಸುಮಾರು 5 ಲಕ್ಷ ರೂಪಾಯಿಗಳು ;

ಎಣ್ಣೆ ಮಿಲ್ಲುಗಳು ಕೊಯಮತ್ತೂರಿನಲ್ಲಿರುವ ಹತ್ತಿ ಕಾರ್ಖಾನೆ, ಬೆಂಗಳೂರು ಹೆಂಚಿನ ಕಾರ್ಖಾನೆ ಇವುಗಳ ಅಂದಾಜು ಬೆಲೆ 10 ಲಕ್ಷ ರೂಪಾಯಿಗಳು, ಮನೆಗಳು ಬಂಗಲೆಗಳು ಕಾರುಗಳು ಇತ್ಯಾದಿ ಸ್ವತ್ತು 3 ಲಕ್ಷ ರೂಪಾಯಿಗಳು, ಸರ್ಕಾರಿ ಸಾಲದ ಪತ್ರಗಳು 8 ಲಕ್ಷ ರೂಪಾಯಿಗಳು, ನಗದು ಬ್ಯಾಂಕಿನಲ್ಲಿರುವುದು 5 ಲಕ್ಷ ರೂಪಾಯಿಗಳು, ನಗನಾಣ್ಯ ಮುಂತಾದ್ದುವು 1 ಲಕ್ಷ ರೂಪಾಯಿಗಳು, ಒಟ್ಟು 32 ಲಕ್ಷ ರೂಪಾಯಿಗಳಾಗುತ್ತೆ.'

ಈ ಲೆಕ್ಕ ಸರಿಯೆಂಬಂತೆ ನಂಜುಂಡಯ್ಯನವರೂ ತಿರುಮಲಯ್ಯನೂ ತಮ್ಮ ತಲೆಯಲ್ಲಾಡಿಸಿದರು.

'ಇದನ್ನು ಯಾವಾಗ ನನಗೆ ವಹಿಸಿಕೊಡುತ್ತೀರಿ ?'

ಅಬ್ಬ! ಹುಡುಗಿ ಎಷ್ಟು ಸುಲಭವಾಗಿ ಕೇಳಿಬಿಟ್ಟಳು ? 32 ಲಕ್ಷ ರೂಪಾಯಿಗಳ ಆಸ್ತಿಯನ್ನು ಕೇವಲ ಹದಿನೆಂಟು ವರ್ಷದ ಹುಡುಗಿಯ ಕೈಗೆ ಕೊಟ್ಟುಬಿಡುವುದೆ ?

ಟ್ರಸ್ಟಿಗಳ ಮುಖದಲ್ಲಿ ಬೆವರಿಟ್ಟಿತು ; ಪುನಃ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ವಸಂತಳಿಗೆ ಏನೂ ಅರ್ಥವಾಗಲಿಲ್ಲ. ಈ ಮುದುಕರು ಹೀಗೇಕೆ ಮುಖಮುಖಗಳನ್ನು ನೋಡಿಕೊಳ್ಳುತ್ತಾರೆ, ಬಾಯಿಬಿಟ್ಟೇಕೆ ಸ್ಪಷ್ಟ

ವಾಗಿ ಮಾತಾಡಬಾರದು, ತಾನಿನ್ನೂ ಚಿಕ್ಕವಳೆಂಬ ಅನುಮಾನ ಇವರಿಗಿರ ಬಹುದೆ ಎಂದುಕೊಂಡು,

'ನಾನೀಗ ಮೆಜಾರಿಟಿಗೆ ಬಂದಿದ್ದೇನಲ್ಲ! ' ಎಂದಳು.

ನಂಜುಂಡಯ್ಯನವರು ಕನ್ನಡಕವನ್ನು ಮೂಗಿನ ಮೇಲಕ್ಕೇರಿಸಿ ಅಂಗಿಯ ಒಳಜೇಬಿನಿಂದ ಒಂದು ಲಕೋಟೆಯನ್ನು ತೆಗೆದು ಅದರಲ್ಲಿದ್ದ ಉಯಲನ್ನು ಓದಿಕೊಳ್ಳುತ್ತ ಇದ್ದವರು ವಸಂತಳ ಮಾತನ್ನು ಪುಷ್ಟೀಕರಿಸುವಂತೆ 'ಹೌದು ಹೌದು, ನೀನು ಮೆಜಾರಿಟಿಗೆ ಬಂದಿದೀಯೆ' ಎನ್ನುತ್ತ ಉಯಲಿನಲ್ಲಿನ ಒಂದು ನಿಯಮವನ್ನು ಶೆಟ್ಟರಿಗೆ ತೋರಿಸಿ ಅವರ ಕೈಗೆ ಕೊಟ್ಟರು. ತಿರುಮಲಯ್ಯನೂ ತನ್ನ ಕಣ್ಣುಗಳನ್ನು ಶೆಟ್ಟರ ಕಣ್ಣುಗಳೊಡನೆ ಕೂಡಿಸಿ ರಾವ್ ಸಾಹೇಬರು ತೋರಿಸಿದ ನಿಯಮವನ್ನು ಓದಿಕೊಂಡು ಏನೋ ದೊಡ್ಡ ಸಂಶೋಧನೆ ನಡೆಸಿದವರಂತೆ ಇಬ್ಬರೂ ಮುಖದಲ್ಲಿ ಆಶ್ಚರ್ಯವನ್ನು ಸೂಚಿಸ ತೊಡಗಿದರು. ವಸಂತಳಿಗೆ ಈ ಮುದುಕರ ನಟನೆ ತಲೆನೋವು ತರುತ್ತಿತ್ತು. ಕೊಂಚ ಅಸಮಾಧಾನದಿಂದ, ಕೊಂಚ ಅಧಿಕಾರವಾಣಿಯಿಂದ ಕೇಳಿದಳು,

'ಉಯಲಿನಲ್ಲಿ ನಮ್ಮ ತಾತ ಏನು ಬರೆದಿದಾರೆ, ನನಗೂ ಸ್ವಲ್ಪ ಹೇಳಿ.'

ಈ ಸಲ ಉತ್ತರ ಕೊಡುವ ಸರದಿ ತಿರುಮಲಯ್ಯನದಾಯಿತು. ನಿಧಾನವಾಗಿ ನಯವಾಗಿ ಹಿಂದಿನ ಕಥೆಯನ್ನೆಲ್ಲ ವಿವರಿಸಿದ. ವೆಂಕಪ್ಪಯ್ಯನಂಥ ಬುದ್ಧಿಶಾಲಿಯನ್ನು ತಾನು ಕಂಡೇ ಇಲ್ಲವೆಂದ, ಅವರಿಗೂ ತಮಗೂ ಇದ್ದ ವಿಶ್ವಾಸವನ್ನು ಅಭಿಮಾನವನ್ನು ನಂಬಿಕೆಯನ್ನು ವಿಧವಿಧವಾಗಿ ಬಣ್ಣಿಸಿ ಹೇಳಿದ. ತನ್ನ ಪ್ರಶ್ನೆಗೆ ನೇರವಾದ ಉತ್ತರ ಬಾರದುದನ್ನು ಅರಿತ ವಸಂತ ಎಲ್ಲವನ್ನೂ ಕೇಳುತ್ತಿದ್ದಳು. ಅವರು ತಮ್ಮಲ್ಲಿಟ್ಟ ಆ ನಂಬಿಕೆಯನ್ನು ವಿಶ್ವಾಸವನ್ನು ನೆನೆದು ಅವರ ಅಪೇಕ್ಷೆಯಂತೆ ಇಷ್ಟು ಆಸ್ತಿಗಳ ಆಡಳಿತವನ್ನೂ ತಾವು ನೋಡುತ್ತಿರುವುದಾಗಿಯೂ ಈ ಜವಾಬ್ದಾರಿಯು ಯಾವಾಗ ತಮ್ಮನ್ನು ಬಿಟ್ಟೀತೋ ಎಂದು ತಾವೂ ಸಮಯವನ್ನೆದುರು ನೋಡುತ್ತಿರುವುದಾಗಿಯೂ ಹೇಳಿ 'ಇನ್ನು ನಿನ್ನ ಮದುವೆಯಾಗಿಬಿಟ್ಟರೆ........" ಎಂದ. ವಸಂತಳು ಈ ಮಾತಿಗೆ ಸುಮ್ಮನೆ ಹೂಗುಟ್ಟುವವಳಾಗಿರಲಿಲ್ಲ.

'ನಾನು ಈಗಲೇ ಮದುವೆಯಾಗುವುದಿಲ್ಲ. ನನ್ನ ಆಸ್ತಿಯನ್ನೆಲ್ಲಾ ಸರಿಯಾಗಿ ಹತೋಟಿಗೆ ತೊಗೊಂಡು ಆ ಮೇಲೆ ಮದುವೆಮಾಡಿಕೊಳ್ಳುತೇನೆ.'

ಟ್ರಸ್ಟಿಗಳ ಮುಖ ಮತ್ತೆ ಬಿಳುಪೇರಿತು. ಈಗ ಸ್ಪಷ್ಟವಾಗಿ ಹುಡುಗಿಗೆ ಉತ್ತರ ಕೊಡಲೇಬೇಕಾಯಿತು. ರಾವ್ ಸಾಹೇಬರೇ ಅದನ್ನು ಹೇಳಿದರು,

'ಹಾಗಾಗುವುದಿಲ್ಲಮ್ಮ. ನಿನಗೆ ಮದುವೆಯಾಗುವವರೆಗೂ ಈ ಆಸ್ತಿ ನಿನಗೆ ಬರುವುದಿಲ್ಲ. ನಿಮ್ಮ ತಾತ ಉಯಲಿನಲ್ಲಿ ಹಾಗೆ ಬರೆದುಬಿಟ್ಟಿದ್ದಾರೆ.'

ಉಳಿದ ಇಬ್ಬರೂ ಅವರೊಡನೆ ಸೇರಿಕೊಂಡು ಮಾತಾಡಿದರು.

'ಎಷ್ಟೇ ಆಗಲಿ ಹೆಂಗಸು. ಒಬ್ಬ ಗಂಡಸಿನ ಆಶ್ರಯವಿರಬೇಕು.'

'ಅನುಭವವಿಲ್ಲದ ಹುಡುಗಿ ಇಷ್ಟು ಆಸ್ತಿ ಹೇಗೆ ನೋಡಿಕೊಳ್ಳುತ್ತೀಯಮ್ಮಾ? ಅದನ್ನು ಯೋಚಿಸಿಯೇ ನಿಮ್ಮ ತಾತ ಹಾಗೆ ಉಯಲಿನಲ್ಲಿ ಷರತ್ತು ಹಾಕಿರುವುದು. ಬೇಗ–ಆದಷ್ಟು ಬೇಗ–ಮದುವೆಮಾಡಿಕೊಳ್ಳಮ್ಮಾ.'

ಮದುವೆ, ಮದುವೆ, ಮದುವೆ. ಈ ತಲೆಮಾರಿನ ಜನಕ್ಕೆ ಬೇರೆ ಯೋಚನೆಯೇ ಇಲ್ಲ ಅಂತ ಕಾಣುತ್ತೆ. ವಸಂತಳು ಸ್ವಲ್ಪ ಸಿಟ್ಟಾಗಿಯೇ ಕೇಳಿದಳು,

'ಹಾಗಾದರೆ, ನನ್ನ ಮದುವೆಯಾಗುವವರೆಗೂ........'

'ನಾವು ಏನುಮಾಡುವಹಾಗಿಲ್ಲ ತಾಯಿ; ನಿಮ್ಮ ತಾತನ ಅಪೇಕ್ಷೆ ಹಾಗಿದೆ....................ಇನ್ನೇನಾದರೂ ಮಾತಿದೆಯೇಮ್ಮಾ. ಖರ್ಚಿಗೇನಾದರೂ ಹಣ ಬೇಕಾಗಿತ್ತೆ?'

'ಬೇಡ.'

'ಇನ್ನು ನಾವು ಬರೋಣವೇಮ್ಮಾ?'

ಟ್ರಸ್ಟಿಗಳು ವಸಂತಳ ಉತ್ತರವನ್ನು ನಿರೀಕ್ಷಿಸದೆ ಎದ್ದು ಹೊರಟರು. ಅವರು ಬರುತ್ತಿರುವ ಹಾದಿಯಲ್ಲಿ ಕುಳಿತಿದ್ದ ಗೌರಮ್ಮ ಎದ್ದು ನಿಂತು ಅವರು ಸಮೀಪಕ್ಕೆ ಬರುತ್ತಲೇ 'ನಮಸ್ಕಾರ' ಎಂದಳು. ರಾವ್ ಸಾಹೇಬರು ಪ್ರತಿಯಾಗಿ ನಗುಮುಖ ಮಾಡಿಕೊಂಡು 'ನಮಸ್ಕಾರ' ಎಂದರು. ಶೆಟ್ಟರು ಆಪ್ತವಾಗಿ ಹೇಳುವವರಂತೆ 'ಒಳ್ಳೆಯ ಒಬ್ಬ ವರನ್ನ ನೋಡಿ ಗೌರಮ್ಮ' ಎನ್ನುತ್ತ ಅನುದ್ದಿಶ್ಯವಾಗಿ ರಾವ್ ಸಾಹೇಬರ ಕಡೆ ಕಣ್ಣು ತಿರುಗಿಸಿದರು. ಗೌರಮ್ಮನು 'ನೀವೆಲ್ಲ ಒಪ್ಪದೆ ಆಗುತ್ತೆಯೆ?' ಎಂದು ಉತ್ತರಕೊಟ್ಟಳು. ತಿರುಮಲಯ್ಯನೂ ದೇಶಾವರದ ನಗುವನ್ನು ನಗುತ್ತ ಅಲ್ಲಿಂದ ಪೊರಮಟ್ಟರು.

ವಸಂತಳ ರಕ್ತ ಬಿಸಿಯಾಗಿತ್ತು. ಹೆಂಗಸೆಂದರೆ ಒಂದು ಕನಿಷ್ಠ ವಸ್ತುವೆಂದು, ಗಂಡಿನ ಸಹಾಯವಿಲ್ಲದೆ ಬಾಳಲಾರದ ಪರಾವಲಂಬಿಯೆಂದು ಈ ಜನರು ತಿಳಿದಹಾಗಿದೆ. ತನ್ನ ಮೇಲೆ ಸ್ವಲ್ಪವೂ ಇವರಿಗೆ ಭರವಸೆಯಿಲ್ಲ. ಹದಿನೆಂಟು ವರ್ಷಕ್ಕೇ ಬಿ.ಎ. ಮಾಡಿರುವ ತನ್ನನ್ನು ಏನೂ ಕೆಲಸಕ್ಕೆ ಬರದವಳೆಂದು ಅವರು ತಿಳಿದಹಾಗಿದೆ. ಕಡೆಗೂ ತನ್ನ ತಾತನು ಬರೆದ ಉಯಲನ್ನು ತನ್ನ ಕೈಗೆ ಕೊಡಲಿಲ್ಲ. ಅದರಲ್ಲಿ ಏನು ಬರೆದಿದೆಯೆಂದು ಓದಿ ಹೇಳಲಿಲ್ಲ. ನಂಜುಂಡಯ್ಯನಿಗೆ, ಹೇಗಾದರೂಮಾಡಿ ತನ್ನ ಮಗ—ಆ ದಡ್ಡಶಿಖಾಮಣಿ—ಸ್ವಾಮಿಯನ್ನು ನನಗೆ ಗಂಟುಹಾಕಬೇಕೆಂಬ ದುರಾಲೋಚನೆ. ತಿರುಮಲಯ್ಯನಿಗೂ ಯಾರೋ ಹತ್ತಿರದ ಬಂಧುಗಳಿರುವಹಾಗಿದೆ. ವ್ಯಕ್ತವಾಗಿ ನಂಜುಂಡಯ್ಯನಿಗೆ ಇದಿರುಬೀಳಲಾರದೆ ಪರ್ಯಾಯವಾಗಿ ಹೇಳುತ್ತಿರುತ್ತಾನೆ. ಅಂತೂ ಈ ಜನರಿಗೆ ನನ್ನ ಮದುವೆಯ ಹುಚ್ಚು ಹಿಡಿದಿದೆ. ಹೀಗೆಂದು ಇವಳು ಯೋಚಿಸುತ್ತ ಅಲ್ಲಿಯೇ ಕುಳಿತಿದ್ದಳು. ಇವಳ ಮನೋವ್ಯಥೆಯನ್ನರಿತಿದ್ದ ಗೌರಮ್ಮ ಕಾಫಿ ತರಹೇಳಲು ಒಳಕ್ಕೆದ್ದು ಹೋಗಿದ್ದಳು. ಅಷ್ಟರಲ್ಲಿ ಸ್ವಾಮಿಯು ಹೊಂಚುಹಾಕುವ ಬೆಕ್ಕಿನಂತೆ ಮೆಲ್ಲನೆ ಹೆಜ್ಜೆಯಿಡುತ್ತ ವಸಂತಳ ಸಮೀಪಕ್ಕೆ ಬಂದು ತಾನು ಬಂದುದನ್ನು ತಿಳಿಸುವುದಕ್ಕಾಗಿ ಎಂಬಂತೆ,

'ಗುಡ್‌ಮಾರ್ನಿಂಗ್, ಮಿಸ್ ವಸಂತ' ಎಂದ. ಅವಳನ್ನು ಮಾತನಾಡಿಸುವ ಗಾಬರಿಯಲ್ಲಿ ಆಗ ಸಂಜೆಯಾಗುತ್ತಿತ್ತೆಂಬುದು ಕೂಡ ಅವನಿಗೆ ಮರೆತಿತ್ತು. ಯಾವುದೋ ಯೋಚನೆಯಲ್ಲಿದ್ದ ವಸಂತಳಿಗೆ ಈ ಗುಡ್ ಮಾರ್ನಿಂಗ್ ಬೇಕಿರಲಿಲ್ಲ. ಅದು ಕಿವಿಗೆ ಬೀಳುತ್ತಲೇ'

'Shut up' ಎಂದನಳು ಎಚ್ಚೆತ್ತು 'ಕ್ಷಮಿಸಿ ಸ್ವಾಮಿ. ಏನೋ ಕೋಪದಲ್ಲಿದ್ದೆ' ಎಂದಳು.

'ಚಿಂತೆಯಿಲ್ಲ. ತಾವು ಇನ್ನೂ ಕೋಪವಾಗಿಯೇ ಇರಬಹುದು. ಹಿ ಹಿ ಹಿ. ನನಗೆ ಇದೇನೂ ಹೊಸದಲ್ಲವಲ್ಲ. ಹಿ ಹಿ ಹಿ.'

ಸ್ವಾಮಿಯ ದೈನ್ಯತೆಯನ್ನು ಕಂಡು ಸಹಜವಾಗಿಯೇ ವಸಂತಳ ಕೋಪ ಇಳಿಯುತ್ತಿತ್ತು.

'ಕೂತುಕೊಳ್ಳಿ. ಸ್ವಲ್ಪ ಮುಖ ತೊಳೆದುಕೊಂಡು ಬರುತೇನೆ. ಕಾಫಿ ತರಿಸಲೆ ?'

'ಈಗತಾನೇ ಮನೇಲಿ ಆಯಿತು. ಉ....ಉ....ಉ....ಕಾಫಿ ಬಾರಿಗೆ ಹೋಗೋಣ.'

— ೪ —

ವಸಂತಳು ತನ್ನ ಸ್ಟುಡಿಬೇಕರ್ ಕಾರಿನಲ್ಲಿ ಸ್ವಾಮಿಯನ್ನು ಕುಳ್ಳಿರಿಸಿ ಕೊಂಡು ತಾನೇ ಕಾರನ್ನು ನಡೆಸುತ್ತ ಸಂಜೆಯ ವಿಹಾರಕ್ಕೆಂದು ಹೊರಟಳು. ಕಬ್ಬನ್‌ಪಾರ್ಕಿಗೆ ಬಂದು ಮರದ ನೆರಳಲ್ಲಿ ಕಾರುನಿಲ್ಲಿಸಿಕೊಂಡು ಎದುರಿಗಿದ್ದ ಹೋಟಲಿನಿಂದ ಕಾಫಿ ತಿಂಡಿಗಳನ್ನು ತರಿಸಿಕೊಂಡು ತಿನ್ನುತ್ತ ಸ್ವಲ್ಪಹೊತ್ತು ಕಳೆಯುವುದು ವಾಡಿಕೆ; ಇಲ್ಲವೇ ಮಹಾತ್ಮಾ ಗಾಂಧಿ ರಸ್ತೆಯಲ್ಲಿ ಕಾಫಿಬಾರಿಗೆ ಹೋಗಿ ಕಾರಹಚ್ಚಿದ ಗೋಡಂಬಿ, ವೆಜಿಟಬಲ್ ಕಟ್‌ಲೆಟ್ ಕಾಫಿಗಳನ್ನು ತುಂಬಿಕೊಂಡು ಕಬ್ಬನ್‌ಪಾರ್ಕಿಗೆ ಬರುತ್ತಿದ್ದುದೂ ಉಂಟು. ಇವೆರಡು ಸ್ಥಳ ಗಳಲ್ಲೂ ವಸಂತಳು ಬಹು ಪರಿಚಿತವ್ಯಕ್ತಿ.

ಸಂಜೆ ವಿಹಾರಕ್ಕಾಗಿ ಹೀಗೆ ಬರುವ ಜನರಲ್ಲಿ ಒಂದು ವೈಶಿಷ್ಟ್ಯವಿದೆ, ಅದು ಕೆಲವರಿಗೆ ಒಂದು ರೀತಿಯ ಚಟ. ಆ ಚಟದಲ್ಲಿಯೂ ಒಂದು ರೀತಿಯ ಶಿಸ್ತು ಸಂಪ್ರದಾಯಗಳನ್ನು ಅವರು ಮಾಡಿಕೊಂಡಿರುತ್ತಾರೆ. ಪಾರ್ಕಿ ನಲ್ಲಾದರೆ ಒಂದೊಂದು ಪ್ರದೇಶದಲ್ಲಿ ಬಂದು ಸೇರುವ ಜನರ ಗುಂಪೇ ಬೇರೆ. ಒಂದು ಗುಂಪಿನ ಜನರು ಇನ್ನೊಂದು ಗುಂಪಿನವರ ಬಳಿಗೆ ಹೋಗುವುದಿಲ್ಲ. ಅಷ್ಟೇಅಲ್ಲ, ಆಯಾ ಗುಂಪುಗಳಲ್ಲಿ ಸಹ ಇಂಥವರ ಕಾರು ನಿಲ್ಲುವಸ್ಥಳ ಇಂಥವೇ ಎಂದು ಸಂಪ್ರದಾಯದಲ್ಲಿ ಖಚಿತವಾಗಿರುತ್ತದೆ. ಬೇರೊಬ್ಬರು ಆ ಸ್ಥಳದಲ್ಲಿ ತಮ್ಮ ಕಾರನ್ನು ತಂದು ನಿಲ್ಲಿಸುವುದಿಲ್ಲ. ಒಂದುವೇಳೆ ಯಾರಾದರೂ ತಿಳಿಯದೆ ಒಂದು ಸ್ಥಳವನ್ನು ಆಕ್ರಮಿಸಿದ್ದರೆ ಅವರು ಆ ಸ್ಥಳವನ್ನು ಬಿಟ್ಟು ಹೋಗುವುದನ್ನೇ ಕಾದಿದ್ದು ಮಾಮೂಲಿನವರು ಅಲ್ಲಿಗೆ ಬಂದು ಸೇರಿಕೊಳ್ಳು ವವರೆಗೂ ಅವರಿಗೆ ಸಮಾಧಾನವಿರುವುದಿಲ್ಲ. ಕಾರು ನಿಲ್ಲಿಸುವ ಸ್ಥಳದ ವಿಷಯದಲ್ಲಿ ಬೆಳೆದ ಈ ನಿಕಟ ಸಂಬಂಧವೇ ತಮಗೆ ತಿಂಡಿ ತರುವ ಮಾಣಿಯ ವಿಷಯದಲ್ಲೂ ಆಗಿರುತ್ತದೆ. ಹೋಟೆಲುಗಳಲ್ಲಿ ಅವರು ಕುಳಿತುಕೊಳ್ಳುವ ಮೇಜು, ಕುರ್ಚಿಗಳ ವಿಷಯದಲ್ಲೂ ಹಾಗೇ.

ಇಷ್ಟು ಶ್ರದ್ಧೆಯಿಂದ ತಮ್ಮ ಮಾಮೂಲನ್ನು ಕಾಪಾಡಿಕೊಂಡು ಬರುತ್ತಿದ್ದ ವಸಂತಳ ಕಾರು ನಿಲ್ಲುವ ಸ್ಥಳದಲ್ಲಿ ಯಾವನೋ ಪಾಪಿ ತನ್ನದೊಂದು ಒಡಕಲು ಗಾಡಿಯನ್ನು ನಿಲ್ಲಿಸಿಕೊಂಡಿರಬೇಕೆ? 1928ನೆಯ ಇಸವಿಯ ಫೋರ್ಡ್‌ಗಾಡಿ ಅದು. ಡ್ರೈವರೂ ಸೇರಿ ಐದು ಜನ ಕೂಡಬಹುದಾದ ಅದರಲ್ಲಿ ಎರಡರಿಂದ ಇಪ್ಪತ್ತು ವಯಸ್ಸಿನವರೆಗಿದ್ದ ಹನ್ನೆರಡು ಮಕ್ಕಳು, ಕಾರಿನ ಮಾಲೀಕ–ಸಾರಥಿ–ಮನೆಯ ಯಜಮಾನ–ಬಹುಶಃ ಆ ಹನ್ನೆರಡು ಮಕ್ಕಳ ತಂದೆ ಮತ್ತು ಅವನ ಹೆಂಡತಿ. ಇವರಿಷ್ಟು ಜನರೇ ಸಾಲದೆಂಬಂತೆ ದೃಷ್ಟಿಪರಿಹಾರಕ್ಕಾಗಿ ಒಬ್ಬ ಕಮ್ಯೂನಿಸಂ ಪ್ರಚೋದಕ, ಇವರಿಷ್ಟು ಜನರನ್ನು ತುಂಬಿಕೊಂಡು ಯಾವನೋ ಮಹಾಪುರುಷ ವನ(ಣ) ವಿಹಾರಕ್ಕಾಗಿ ಬಂದು ವಸಂತಳ ಕಾರು ನಿಲ್ಲುವ ಜಾಗದಲ್ಲಿ ನಿಂತಿರಬೇಕೆ? ಕಾರಿನಲ್ಲಿದ್ದ ಕೆಂಪು ಬಾವುಟವನ್ನೂ ಚಿಳ್ಳೆಪಿಳ್ಳೆಗಳ ದಂಡನ್ನು ನೋಡುತ್ತಲೇ ಆ ದಿನದೊಳಗಾಗಿ ಅವರು ಅಲ್ಲಿಂದ ಕದಲುವುದು ಸಾಧ್ಯವಲ್ಲವೆಂದು ತೋರಿ ವಸಂತ ನೇರವಾಗಿ ತನ್ನ ಕಾರನ್ನು ಕಾಫಿಬಾರಿನ ಕಡೆಗೆ ಒಯ್ದಳು. ಮೊದಲೇ ನಿರಾಶಳಾಗಿ ಇವಳು ಹೋಗುತ್ತಿದ್ದರೆ ತಮ್ಮ ತಮ್ಮ ಸ್ಥಳಗಳಲ್ಲಿ ಎಂದಿನಂತೆ ಸುಖಪಡುತ್ತಿದ್ದ ಇತರ ಕಾರುಗಳವರು—ಅದರಲ್ಲಿಯೂ ಗಂಡಸರೆನಿಸಿಕೊಂಡವರು—ಇವಳನ್ನೇಕೆ ನೋಡಿ ನಗಬೇಕು? ಹೆಣ್ಣಿಗೆ ಇಂಥದೊಂದು ಅನ್ಯಾಯ ನಡೆದರೆ ಅವರಿಗೇನು ಸಂತೋಷ?

ಕಾಫಿ ಬಾರಿನಲ್ಲಾದರೂ ಇವಳ ದುರ್ವಿಧಿ ಅವಳ ಬೆನ್ನುಬಿದ್ದಿತು. ಅವಳು ಯಾವಾಗಲೂ ಕುಳಿತುಕೊಳ್ಳುತ್ತಿದ್ದ ಮೇಜಿನಬಳಿ ಯಾರೋ ನಾಲ್ಕು ಮಂದಿ ಧಾಂಡಿಗರು ಕುಳಿತುಬಿಟ್ಟದ್ದರು. ಅದಕ್ಕೆ ಎದುರಾಗಿ ಸ್ವಲ್ಪದೂರದಲ್ಲಿ ನಾಲ್ಕಾರು ಮೇಜುಗಳ ಮಧ್ಯೆ ಬಿಡುವಾಗಿದ್ದ ಒಂದುಕಡೆ ವಸಂತಳೂ ಸ್ವಾಮಿಯೂ ಕುಳಿತುಕೊಳ್ಳಬೇಕಾಯಿತು. ಅರೆಮನಸಿನಿಂದ ಅಲ್ಲಿ ಹೋಗಿ ಕುಳಿತಳು. ತಿಂಡಿ ಕೊಡುವ 'ಬಾಯ್' ಏನೋ ಕೇಳಿದ, ಇವಳು ಏನೋ ಹೇಳಿದಳು. ಸಂತೆಯ ನಡುವೆ ಕುಳಿತುಕೊಂಡಿರುವಂತೆ ಅವಳಿಗೆ ತೋರುತ್ತಿತ್ತು. ತನ್ನ ಮೇಜು ಖಾಲಿಯಾಗುವ ಭರವಸೆಯಿದೆಯೇನೋ ಎಂದು ಅತ್ತಕಡೆ ನೋಡಿದಳು. ಆ ಸೂಚನೆಯೇ ಕಾಣಲಿಲ್ಲ. ಆ ಧಾಂಡಿಗರು ತಿಂಡಿ ತಿನ್ನುವುದಕ್ಕಿಂತ ಅವರಿವರ ಕಡೆ ನೋಡುತ್ತ ಹರಟೆ ಕೊಚ್ಚಿ ನಗುವುದ

ಕ್ಕಾಗಿ ಬಂದಿದ್ದವರು. ತಮ್ಮ ಸ್ಥಳವನ್ನಾಕ್ರಮಿಸಿದ್ದುದು ಎಲ್ಲರೂ ನಟ್ಟದೃಷ್ಟಿಯಿಂದ ತನ್ನನ್ನೇ ನೋಡುತ್ತಿದ್ದುದಲ್ಲದೆ ಏನೋ ಗೊಣಗುತ್ತ ನಗುತ್ತಿದ್ದುದು ವಸಂತಳ ತಾಳ್ಮೆಯನ್ನು ಕಳೆಯುತ್ತಿತ್ತು. ಚಟ್ಟನೆ ಮುಖ ತಿರುಗಿಸಿ ಬೇರೆಕಡೆ ನೋಡಿದಳು. ಯಾವಕಡೆ ನೋಡಿದರೂ ಎಲ್ಲರೂ ತಮ್ಮನ್ನೇ ನೋಡುತ್ತಿದ್ದಾರೆ. ಈ ಹಾಳು ಗಂಡಸರು ಹೆಂಗಸಿನ ಮುಖವನ್ನೆಂದೂ ನೋಡಿಲ್ಲವೇ, ಒಂದು ಹೆಣ್ಣು ಎಂದಮಾತ್ರಕ್ಕೇ ಹೀಗೆ ಕಮಂಗಿಗಳಂತೆ ಇತ್ತಲೇ ನೋಡುತ್ತಿರುವುದೇ ? ವಸಂತಳಿಗೆ ತಿಂಡಿ ಬೇಕಾಗಲಿಲ್ಲ, ಕಾಫಿ ಬೇಕಾಗಲಿಲ್ಲ; ತಂದಿಟ್ಟುದನ್ನು ಅರ್ಧ ಮರ್ಧ ಎಂಜಲುಮಾಡಿ ಒಂದು ರೂಪಾಯಿ ನೋಟನ್ನು ಮೇಜಿನಮೇಲೆ ಬಿಸುಟು ಸರಸರನೆ ಹೊರಟುಬಿಟ್ಟಳು, ನಿರುಪಾಯನಾಗಿ ಸ್ವಾಮಿಯೂ ಹಿಂದೆ ಹೊರಟ.

ಮನೆಯಿಂದ ಹೊರಟ ಅರ್ಧಗಂಟೆಯೊಳಗೇ ಸಂಜೆಯ ವಿಹಾರವು ಕೊನೆಗೆ ಬಂದಿತ್ತು. ಇಷ್ಟುಬೇಗ ಮನೆಗೆ ಹೋಗಿ ಏನು ಮಾಡುವುದು ? ಸ್ವಾಮಿಯು ಮೆಲ್ಲನೆ ಸಿನೀಮಾಕ್ಕೆ ಹೋಗೋಣವೆ ಎಂದು ಸೂಚಿಸಿದ. ಎಲ್ಲಿಗಾದರೂ ಹೋಗಿ ಹೊತ್ತು ಕಳೆಯಬೇಕಾಗಿತ್ತು ; ಅಲ್ಲದೆ ಮನಸ್ಸು ಎರಡು ಗಂಟೆಯಕಾಲ ಬೇರೆಕಡೆ ಇದ್ದರೆ ಸ್ವಲ್ಪ ಸಮಾಧಾನಕ್ಕೆ ಬರಬಹುದು. “ಅನಾರ್ಕಲಿ'' ಚಿತ್ರ ಬಹಳ ಚೆನ್ನಾಗಿದೆಯೆಂದು ಜನ ಹೇಳುತ್ತಾರೆ, ಮೊಗಲರ ಕಾಲದ ವೈಭವವನ್ನಿಷ್ಟು ನೋಡಬಹುದು. ಹೀಗೆಂದುಕೊಂಡು ಇಬ್ಬರೂ “ಅನಾರ್ಕಲಿ” ಚಿತ್ರಕ್ಕೆ ಹೋದರು.

ಚಿತ್ರದ ಕಥೆ ಕರುಳನ್ನು ಕತ್ತರಿಸುವಂಥದು. ಮೊಗಲ ಚಕ್ರವರ್ತಿ ಅಕ್ಬರ್ ಬಾದಷಹನ ಮಗ ಸಲೀಮ ಒಬ್ಬ ಹುಡುಗಿಯನ್ನು ನೋಡಿ ಮೋಹಿಸುತ್ತಾನೆ. ಅವನ ಪ್ರೇಮ ನಿಜವಾದುದೆಂದು ಸ್ಥಿರವಾದುದೆಂದು ತಿಳಿದು ಆ ಹುಡುಗಿ ಅವನನ್ನು ಒಪ್ಪಿಕೊಳ್ಳುತ್ತಾಳೆ. ಅರಸುಮಗ, ಮುಂದೆ ಚಕ್ರವರ್ತಿಯಾಗತಕ್ಕವನು ಒಂದು ಸಾಮಾನ್ಯ ಹೆಣ್ಣನ್ನು ಮದುವೆಯಾಗಕೂಡದೆಂದು ತಂದೆ ವಿರೋಧಿಸುತ್ತಾನೆ. ಕೊಟ್ಟ ಮನಸ್ಸನ್ನು ಹಿಂದಕ್ಕೆ ತೆಗೆದುಕೊಳ್ಳಲಾರದ ಹೆಣ್ಣು ಇವರ ಕೋಪಕ್ಕೆ ನಡುಗುತ್ತದೆ. ತಾನು ಪ್ರೇಮಿಸಿ ರಕ್ಷಿಸುವೆನೆಂದು ಭರವಸೆಕೊಟ್ಟ ಗಂಡು ನಿಸ್ಸಹಾಯತೆಯನ್ನು ತೋರುತ್ತದೆ. ಅವಳು ಬದುಕಿದ್ದಷ್ಟು ದಿನ ಸಲೀಮನಿಗೆ ಅವಳ ಮೇಲಿನ ಪ್ರೇಮ ಹೋಗುವುದಿಲ್ಲ

ವೆಂದು ಅನಾರ್ಕಲಿಯನ್ನು ಜೀವಸಹಿತ ಗೋಡೆಯೊಂದರಲ್ಲಿ ಸಮಾಧಿಮಾಡುತ್ತಾರೆ. ಯಾವ ಅಪರಾಧಕ್ಕಾಗಿ? ರೂಪವತಿಯಾದುದು ಅವಳ ತಪ್ಪೆ? ರಾಜಕುಮಾರನು ಅವಳನ್ನು ಮೋಹಿಸಿ ನಂಬಿಸಿ ಅವಳ ಮನಸ್ಸನ್ನು ತನ್ನೆಡೆಗೆ ಎಳೆದುಕೊಂಡುದು ಅವಳು ತಪ್ಪೆ? ಗಂಡು ಮಾಡಿದ ತಪ್ಪಿಗೆ ಹೆಣ್ಣನ್ನು ಶಿಕ್ಷಿಸುವುದು ಯಾವ ನ್ಯಾಯ. ಹೆಂಗಸೆಂದರೆ ಅದೊಂದು ಭೋಗ್ಯವಸ್ತುವೆಂದು ಜನ ತಿಳಿದಿದ್ದಾರೆ. ಕುಂಬಾರನ ಮನೆಯ ಮಡಕೆಯನ್ನು ಬಳಸುವಂತೆ ಅವಳ ಜೀವನ.

ಅನಾರ್ಕಲಿಯಂತೆ ಎಷ್ಟುಮಂದಿ ಮುಗ್ಧೆಯರು ಗಂಡಸರ ಸ್ವಾರ್ಥಕ್ಕೆ ಬಲಿಯಾಗಿದ್ದಾರೋ, ಎಷ್ಟು ಜೀವಗಳು ತಮಗೆ ವಿಮೋಚನೆ ಸಹ ಇಲ್ಲದೆ ತೊಳಲಿ ಬಳಲುತ್ತಿವೆಯೋ! ತನ್ನ ಜೀವನವನ್ನು ಅಂಥ ದುರ್ದೈವಿಗಳ ಸೇವೆಗಾಗಿ ಮೀಸಲಾಗಿಡಬೇಕು. ತಾನೆಂದಿಗೂ ಗಂಡಸಿನ ಹಂಗಿಗೆ ಒಳಗಾಗಬಾರದು.

ಎಂದರೆ? ಗಂಡನೆಂಬುವನ ಹಿಡಿತಕ್ಕೆ ಸಿಕ್ಕದೆ ತಾನು ಸ್ವತಂತ್ರಳಾಗಿರುವುದು ಹೇಗೆಸಾಧ್ಯ? ತನಗೆ ಮದುವೆಯಾದ ಹೊರತು ತನ್ನ 32 ಲಕ್ಷ ರೂಪಾಯಿಯ ಆಸ್ತಿಯು ಕೈಗೆ ಬರುವಂತಿಲ್ಲ. ಆ ಹಾಳು ಮುದುಕ ತಲೆಯೆಲ್ಲಾ ಉಪಯೋಗಿಸಿ ಉಯಲಿನಲ್ಲಿ ಏನೇನೋ ಬರೆದಿರುವಹಾಗಿದೆ. ಆಸ್ತಿಯನ್ನು ಬಿಟ್ಟು ಬರಿಯ ಕೈಯಲ್ಲಿ ತನ್ನ ಜೀವನವನ್ನು ಆರಂಭಿಸುವುದೇ? ತನ್ನ ಬಂಗಲೆ, ತನ್ನ ಕಾರು, ಖರ್ಚಿನ ಹಣ, ಕೆಲಸ ಮಾಡುವ ಜನ ಇವೊಂದೂ ಇಲ್ಲದೆ ಜೀವಿಸುವುದು ಹೇಗೆ? ವಿದ್ಯಾವಂತಳಾದೆನೆಂದು ಯಾವುದೋ ಸ್ಕೂಲು ಮೇಷ್ಟರಾಗಿ ಹೊಟ್ಟೆಹೊರೆಯ ತೊಡಗಿದರೆ ಇನ್ನು ಸಮಾಜಸೇವೆ ಮಾಡುವುದೆಲ್ಲಿ? ಆಸ್ತಿಯನ್ನು ಬಿಡುವುದು ಹುಚ್ಚುತನ; ಆ ಯೋಚನೆಯೇ ಮಾಡತಕ್ಕದಲ್ಲ. ತಾನು ಮದುವೆಯಾಗದೆ ವಿಧಿಯಿಲ್ಲ. ಈ ಸ್ವಾಮಿ ದಡ್ಡನಾಗಿದ್ದಾನೆ, ಈಗಂತೂ ಹೇಳಿದಂತೆ ಕೇಳುತ್ತಾನೆ; ಇವನನ್ನು ಮದುವೆಯಾಗುವುದು ಇವನ ತಂದೆಗೂ ಇಷ್ಟ; ಇವನನ್ನು ಮದುವೆಯಾದರೆ ಇವನು ನನ್ನ ಹಿಡಿತದಲ್ಲಿರಲಾರನೆ?

ವಸಂತಳ ಮನಸ್ಸು ಸ್ವಲ್ಪಹೊತ್ತು ಅದನ್ನು ನಿರ್ಧರಿಸಲಾರದೆ ತೂಗಾಡುತ್ತಿತ್ತು. ಸ್ವಾಮಿಯನ್ನು ತನ್ನ ಗಂಡನೆಂದು ಯೋಚಿಸುವುದಕ್ಕೂ ಸಹ

ಮನಸ್ಸು ಹಿಂಜರಿಯುತ್ತಿತ್ತು. ಮೇಲಾಗಿ ಈಗ ಇಷ್ಟು ಸಾಧುವಾಗಿರುವವನು ತನ್ನ ಕೊರಳಿಗೆ ದಾರವನ್ನು ಬಿಗಿಯುತ್ತಲೇ ಜೋರಾಗಿಬಿಡುತ್ತಾನೆ. ಕೈಲಾಗದ ಗಂಡು ಹೆಂಡತಿಯ ಮೇಲೆ ಅಧಿಕಾರ ಮಾಡುವುದು ಹೆಚ್ಚು. ಬೇರೆಲ್ಲಿಯೂ ನಡೆಯದ ತನ್ನ ಅಧಿಕಾರವನ್ನು ಮನೆಯಲ್ಲಿ ತಾನು ಹೇಳಿದಂತೆ ಕೇಳ ಬೇಕಾಗಿರುವ ಈ ಬಡಪ್ರಾಣಿಯ ಮೇಲೆ ಚಲಾಯಿಸುತ್ತಾನೆ. ಸ್ವಾಮಿಯೂ ಹಾಗಾದರೆ ಆಶ್ಚರ್ಯವೇನಲ್ಲ.

ಸಿನೀಮಾ ಮುಗಿಸಿಕೊಂಡು ಮನಗೆ ಬರುತ್ತ ವಸಂತಳ ತಲೆಯಲ್ಲಿ ಇವೆಲ್ಲ ಯೋಚನೆಗಳು ಹಾದುಹೋಗುತ್ತಿದ್ದುವು. ಮಾತಾಡದೆ ಸುಮ್ಮನಿರುವ ವಸಂತಳನ್ನು ಮಾತನಾಡಿಸುವ ನೆಪದಲ್ಲಿ "ಚಿತ್ರ ಬಹಳ ಚೆನ್ನಾಗಿತ್ತಲ್ಲವೆ, ವಸಂತ?" ಎಂದ. ಪ್ರಶ್ನೆ ಅವಳ ಮನಸ್ಸನ್ನು ಮತ್ತಷ್ಟು ಕಲಕಿತು. ಹೆಣ್ಣು ಈ ರೀತಿ ನೊಂದಿತಲ್ಲಾ ಎಂದು ತನ್ನ ಮನಸ್ಸು ಪರಿತಪಿಸುತ್ತಿದ್ದರೆ ಇವನಿಗೆ ಅದರಿಂದ ಸಂತೋಷವುಂಟಾಗಿದೆ. ಇವನ ಮನಸ್ಸು ಎತ್ತಕಡೆ ಹರಿಯುತ್ತಿದೆ ಯೆಂಬುದಕ್ಕೆ ಇದೇಸಾಕ್ಷಿ. ಪ್ರಶ್ನೆಗೆ ಉತ್ತರ ಕೊಡದೆ ವಸಂತ ಕಾರಿನಕಡೆ ಗಮನವಿಟ್ಟಳು. ತನ್ನ ಯೋಚನೆಗಳಲ್ಲಿ ಒಂದೆರಡು ಸಲ ಅಪಘಾತ ನಡೆಯುವು ದರಲ್ಲಿತ್ತು. ಅಪಾಯದಿಂದ ಪಾರಾಗಿ ಎಚ್ಚರಗೊಂಡ ಬುದ್ಧಿಯು ಮಾತಿಗೆಡೆ ಗೊಡದೆ ಅವರನ್ನು ಮನೆಮುಟ್ಟಿಸಿತು.

ಕಾರನ್ನು ಹೊರಗಡೆಯೇ ಬಿಟ್ಟು ವಸಂತ ಮನೆಯೊಳಕ್ಕೆ ಬಂದು ಸರಸರನೆ ಮಹಡಿಯ ಮೆಟ್ಟಲಕಡೆ ಹೋಗುತ್ತಿದ್ದಳು. ಸ್ವಾಮಿಯು ಹಿಂಬಾಲಿಸುತ್ತಿದ್ದ. ಅವನು ಬರುತ್ತಿರುವುದನ್ನು ಅರಿತು "ನೀವಿನ್ನು ಮನೆಗೆ ಹೋಗಬಹುದು ಸ್ವಾಮಿ" ಎನ್ನುತ್ತ ಹಿಂತಿರುಗಿಸಹ ನೋಡದೆ ಮಹಡಿಯ ಮೆಟ್ಟಲುಗಳನ್ನು ಹತ್ತತೊಡಗಿದಳು. ಸ್ವಾಮಿಯು ಅರ್ಧದೂರ ಬಂದಿದ್ದವನು ಅಲ್ಲೇ ನಿಂತು ಹಲ್ಲು ಕಿರಿಯುತ್ತ "ಗುಡ್‌ನೈಟ್, ಮಿಸ್ ವಸಂತ" ಎಂದ. ಆ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳದೆ ವಸಂತಳು ಮೇಲೆ ಹೋಗು ತ್ತಿದ್ದಳು. ಕಡೆಯಲ್ಲಾದರೂ ಒಮ್ಮೆ ತಿರುಗಿನೋಡುವಳೆಂದು ಕಾದಿದ್ದ ಸ್ವಾಮಿಯು ಅವಳು ಬಾಗಿಲನ್ನು ಸಮೀಪಿಸುತ್ತಲೇ ಎಂದಿನಂತೆ ಕೈಯೆತ್ತಿ ಮುಂಗೈಯನ್ನು ಆಡಿಸುತ್ತ 'ಟಾ ಟಾ' ಎಂದ. ವಸಂತಳು ತಿರುಗಿ ನೋಡದೆಯೇ ಒಳಕ್ಕೆ ಹೋಗಿಬಿಟ್ಟಳು.

ಸ್ವಾಮಿಯ ದುಃಸ್ಥಿತಿಯನ್ನು ನೋಡುತ್ತ ನಿಂತಿದ್ದ ಗೌರಮ್ಮ ಮಹಡಿಯನ್ನೇರುತ್ತ ಒಮ್ಮೆ ಹಿಂತಿರುಗಿ ನೋಡಿದಳು. ಸ್ವಾಮಿಯು ಏನೂ ಆಗದವನಂತೆ ಹಿಂತಿರುಗುತ್ತಿದ್ದ. ಬಾಗಿಲುಗಳ ಮರೆಯಲ್ಲಿ ಇಣಿಕಿ ನೋಡುತ್ತಿದ್ದ ಸೇವಕರು ಉಕ್ಕಿಬರುತ್ತಿದ್ದ ನಗುವನ್ನು ತಡೆದುಕೊಳ್ಳುತ್ತ ತಮ್ಮ ಯಜಮಾನಿಯ ಕರೆಯನ್ನು ಇದಿರುನೋಡುತ್ತಿದ್ದರು.

— ೫ —

ರಾತ್ರಿಯೆಲ್ಲ ವಸಂತಳಿಗೆ ನಿದ್ರೆಬರಲಿಲ್ಲ. ದೊಡ್ಡದೊಂದು ಸಮಸ್ಯೆಯನ್ನು ತನ್ನ ತಾತನು ತಂದುಹಾಕಿದ್ದ. ಇನ್ನೂ ನಾಲ್ಕಾರು ವರ್ಷಗಳಾದರೂ ತಾನು ಮದುವೆಯಾಗದೆ ಇರಬೇಕು, ಪಾಶ್ಚಾತ್ಯ ದೇಶಗಳನ್ನೆಲ್ಲ ನೋಡಿಕೊಂಡು ಸಾಧ್ಯವಾದರೆ ಅಲ್ಲಿ ಏನಾದರೂ ಹೆಚ್ಚಿಗೆ ವ್ಯಾಸಂಗ ಮಾಡಿಕೊಂಡು ಬರಬೇಕು, ನಮ್ಮ ದೇಶದಲ್ಲಿನ ಹೆಂಗಸರಿಗೆ ಮಾರ್ಗದರ್ಶಕಳಾಗಿ ಅವರನ್ನು ಉತ್ತಮಸ್ಥಿತಿಗೆ ತರುವುದಕ್ಕಾಗಿ ಕೆಲಸಮಾಡಬೇಕು. ತನ್ನ ಧ್ಯೇಯಗಳಿಗೆ ಆಳಾಗಿ ತನ್ನ ಸ್ವತಂತ್ರವನ್ನು ಉಳಿಸಬಲ್ಲವನು ತನ್ನ ಮನಸ್ಸಿಗೆ ಒಪ್ಪುವವನು ಯಾರಾದರೂ ಸಿಕ್ಕಿದರೆ ಮದುವೆಯಾಗುವುದು. ಇಲ್ಲವೇ ಹೀಗೆಯೇ ಇದ್ದುಬಿಡುವುದು. ದೇಶದಲ್ಲಿ ತಾನು ಮಾಡಬಹುದಾದ ಮಾಡಬೇಕಾದ ಸಾವಿರ ಕೆಲಸಗಳಿವೆ, ಇವುಗಳ ನಡುವೆ ಗಂಡ, ಮಕ್ಕಳ ಸಂಸಾರವನ್ನು ಹಚ್ಚಿಕೊಳ್ಳಬಾರದು; ಹೀಗೆಲ್ಲ ಯೋಚಿಸುತ್ತಿದ್ದ ವಸಂತಳ ಭವಿಷ್ಯಕ್ಕೆ ಆ ಮುದುಕ ಅಡ್ಡಗೋಡೆ ಹಾಕಿಬಿಟ್ಟಿದ್ದ.

ವಸಂತಳು ಮಲಗುವ ಕೋಣೆಯಲ್ಲಿ ವೆಂಕಪ್ಪಯ್ಯನ ಭಾವಚಿತ್ರವೊಂದನ್ನು ಹಾಕಿತ್ತು. ಮಹಾರಾಜರು ತನಗೆ ಒಂದುಸಲ ದರ್ಬಾರಿನಲ್ಲಿ ಕೊಟ್ಟಿದ್ದ ಪಬ್ಲಿಕ್ ಸರ್ವಿಸ್ ಮೆಡಲನ್ನು ಹಾಕಿಕೊಂಡು ಫೋಟೋ ತೆಗೆಸಿ ಅದನ್ನೇ ದೊಡ್ಡದು ಮಾಡಿಸಿ ಅಂದವಾದ ಚೌಕಟ್ಟು ಹಾಕಿಸಿ ಆ ಕೋಣೆಯಲ್ಲಿ ಹಾಕಿದ್ದ. ಅದು ವೆಂಕಪ್ಪಯ್ಯ ಮಲಗುತ್ತಿದ್ದ ಕೋಣೆ. ಅದೇ ಮಂಚ, ಅದೇ ನಿಲವುಗನ್ನಡಿ, ಅವನು ಉಪಯೋಗಿಸುತ್ತಿದ್ದ ಸಾಮಾನುಗಳೇ ಈಗಲೂ ಅಲ್ಲಿದ್ದವು. ತಾತನ ಭಾವಚಿತ್ರದ ಬಳಿಗೆ ಹೋಗಿ ನಿಂತು ವಸಂತಳು ತನಗೆ ಗುರುತೇ ಇಲ್ಲದ ಅವನೊಡನೆ ಜಗಳವಾಡುವವಳಂತೆ ಬಿರು

ಸಾಗಿ ಮಾತನಾಡಿದಳು; ತನಗೆ ತುಂಬ ಅನ್ಯಾಯ ಮಾಡಿದನೆಂದು ನಿಷ್ಠುರ ಮಾಡಿದಳು; ಮೊಮ್ಮಗಳಲ್ಲಿ ಇಲ್ಲದ ಭರವಸೆಯನ್ನು ಯಾವನೋ ಕಂಡು ಕೇಳದ ಒಬ್ಬ ಗಂಡಿನಲ್ಲಿಟ್ಟು ಅವನು ಕರ್ತನಾಗಿ ಬಂದು ನಿಂತಲ್ಲದೆ ತನಗೆ ಈ ಆಸ್ತಿಯು ಸಲ್ಲಕೂಡದೆಂದು ಬರೆದಿಟ್ಟಿರುವುದು ನ್ಯಾಯವೆ ಎಂದು ವಾದಿಸಿದಳು. ಇವಳ ಮಾತುಗಳನ್ನೆಲ್ಲ ಕೇಳುತ್ತ ಭಾವಚಿತ್ರ ಸುಮ್ಮನಿತ್ತು. ನಿದ್ದೆ ಬರಲೆಂದು ಕಣ್ಣುಮುಚ್ಚಿದರೆ ಆ ತಾತನು ಬಂದು ತನ್ನೆದುರು ನಿಂತಹಾಗೆ, ಅವನು ನಂಬಿ ಅಧಿಕಾರ ವಹಿಸಿಕೊಟ್ಟಿರುವ ಆ ಮೂರುಜನ ಟ್ರಸ್ಟಿಗಳು ಎದುರಿಗೆ ಬಂದು ನಿಂತಹಾಗೆ, "ನೀನು ಹೆಂಗಸು, ನಿನ್ನಿಂದ ಈ ಆಸ್ತಿಯನ್ನು ನೋಡಿಕೊಳ್ಳುವುದು ಸಾಧ್ಯವಿಲ್ಲ. ಮದುವೆಯಾಗು, ಬೇಗ ಮದುವೆಯಾಗು, ನಿನಗೆ ರಕ್ಷಕನಾಗಿ, ಆಸ್ತಿಯ ಪಾಲಕನಾಗಿ ಒಬ್ಬ ಗಂಡುಬೇಕು, ಗಂಡು ಬೇಕು' ಎನ್ನುವಂತೆ ತೋರುವುದು.

ವಸಂತಳ ಹೃದಯದಲ್ಲಿ ಅಡಗಿದ್ದ ಹೆಣ್ಣುತನದ ಸ್ವಾಭಿಮಾನವು ಅಂದು ಕೆರಳಿತು. ಅನ್ನಪೂರ್ಣೆಯಾಗಿ ಜಗತ್ತಿಗೆ ಹಾಲೆರೆಯಬೇಕಾದ ಹೆಣ್ಣು ಆದಿಶಕ್ತಿಯಾಗಿ ಕತ್ತಿಹಿರಿದು ನಿಂತಿದ್ದಳು. ತನ್ನ ಬಲವನ್ನಿಂದು ಜಗತ್ತು ಅಲ್ಲಗಳೆಯುತ್ತಿದೆ; ಸರ್ವಶಕ್ತಳು ತಾನೆಂಬುದನ್ನು ತೋರಿಸಬೇಕು. ತಾನು ಅಬಲೆಯೆಂದು ಗಂಡು ವಜ್ರಮುಷ್ಟಿಯಲ್ಲಿ ತನ್ನನ್ನು ಹಿಡಿಯಲು ಹವಣಿಸಿದೆ. ಆ ವಜ್ರವನ್ನು ಭೇದಿಸಬಲ್ಲ ಸಿಡಿಲು ತಾನೆಂದು, ಅದನ್ನು ಹಿಡಿದು ಕಟ್ಟಿಹಾಕಬಲ್ಲ ಸ್ವರ್ಣಮಾತಾನೇ ಎಂದು ತೋರಿಸಿಕೊಡಬೇಕು. ಅದು ಹೇಗೆ ಸಾಧ್ಯ? ಹೇಗೆ, ಹೇಗೆ ಎಂದು ಯೋಚಿಸುತ್ತ ವಸಂತಳು ರಾತ್ರಿಯನ್ನು ಕಳೆದಳು.

ಬೆಳಿಗ್ಗೆ ಆರುಗಂಟೆಯ ವೇಳೆಗೆ ಎಂದಿನಂತೆ ಗೌರಮ್ಮನು ಕೋಣೆಯೊಳಕ್ಕೆ ಬಂದಳು. ವಸಂತಳು ಕಣ್ಣುಬಿಟ್ಟಿರುವುದನ್ನು ನೋಡಿ,

"ಆಗಲೇ ಎಚ್ಚರವಾಯಿತೆ ಮಗು?"

"ನಿದ್ರೆ ಸರಿಯಾಗಿ ಬರಲಿಲ್ಲಮ್ಮಾ."

ಗೌರಮ್ಮನು ಕಿಟಕಿಯ ಪರದೆಗಳನ್ನು ಸರಿಸುತ್ತ,

'ನೀನು ಯಾವಮಾತನ್ನೂ ಮನಸ್ಸಿಗೆ ಬಹಳ ಹಚ್ಚಿಕೊಳ್ಳುತ್ತೀಯಮ್ಮ. ರಾತ್ರಿಯೆಲ್ಲಾ ಯೋಚನೆ ಮಾಡುತ್ತಿದ್ದೆಯೇನೋ.'

"ನಾನೇನು ಮಾಡಲಿ ಅಮ್ಮಾ, ತಾತ ಎಂಥ ಇಕ್ಕಟ್ಟಿನಲ್ಲಿ ನನ್ನನ್ನು ಸಿಕ್ಕಿಸಿಬಿಟ್ಟಿದ್ದಾನೆ ನೋಡು.''

ಅದುವರೆಗೆ ಆಳು ರಂಗ ಒಂದು ಬೋಗುಣಿಯನ್ನು ತಂಬಿಗೆಯಲ್ಲಿ ಬಿಸಿ ನೀರನ್ನೂ ತಂದು ಮಂಚದ ಪಕ್ಕದಲ್ಲಿದ್ದ ಚಿಕ್ಕ ಮೇಜೊಂದನ್ನು ಸರಿಸಿ ಅದರ ಮೇಲೆ ಅವುಗಳನ್ನಿಟ್ಟು, ಸಾಬೂನು, ಟೂತ್‌ಬ್ರಷ್, ಟೂತ್ ಪೇಸ್ಟು ಗಳನ್ನೂ ನಾಲಗೆಯನ್ನು ತಿಕ್ಕುವ ಕಡ್ಡಿಯನ್ನೂ ಮುಂದಿಟ್ಟ. ವಸಂತಳು ಮುಖವನ್ನು ತೊಳೆದುಕೊಂಡು ಆಳು ಕೈಗೆಕೊಟ್ಟ ಟವಲಿನಿಂದ ಮುಖ ವನ್ನೊರಸಿಕೊಳ್ಳುತ್ತಿರುವ ವೇಳೆಗೆ ರಂಗನು ಆ ಮೇಜನ್ನು ತೆಗೆದು ಬೇರೆಂದು ಮೇಜನ್ನು ಅವಳ ಮುಂದಕ್ಕೆ ಸರಿಸಿದ. ಅಡಿಗೆಯ ಭಟ್ಟ ನಾರಾಯಣಾಚಾರಿಯು ಒಂದು ತಟ್ಟೆಯಲ್ಲಿ ಕಾಫಿ ಹಾಲು ಸಕ್ಕರೆ ನಾಲ್ಕು ಬಿಸ್ಕತ್ತುಗಳನ್ನು ತಂದು ಮೇಜಿನ ಮೇಲಿಟ್ಟ. ಗೌರಮ್ಮನು ಹದವಾಗಿ ಕಾಫಿಬೆರಸಿ ಕೊಟ್ಟಳು. ವಸಂತ ಒಂದು ಬಿಸ್ಕತ್ತನ್ನು ಕಾಫಿಯಲ್ಲಿ ಅದ್ದಿ ತಿನ್ನುತ್ತ 'ಈಗ ನಾನೇನು ಮಾಡಬೇಕಮ್ಮ' ಎಂದಳು. ಆಳುಗಳ ಮುಂದೆ ಆ ಮಾತಾಡುವುದು ಸರಿಯಲ್ಲವೆಂದು ಗೌರಮ್ಮ "ಇನ್ನೂ ಸ್ವಲ್ಪಹೊತ್ತು ಹೋಗಲಿ ಮಗು. ಒಂಬತ್ತುಗಂಟೆಯ ಹೊತ್ತಿಗೆ ಪೇಟೆಗೆ ಹೋಗಿಬರೋಣ" ಎಂದು ಉತ್ತರ ಕೊಟ್ಟಳು. ತಾನು ಕೇಳಿದುದು ತಪ್ಪಾಯಿತೆಂದು ವಸಂತಳಿಗೆ ಅರ್ಥವಾಯಿತು.

ವಸಂತಳು ಕಾಫಿ ಕುಡಿಯುತ್ತಿರುವಾಗ ಬೆಳಿಗ್ಗೆಯ ವರ್ತಮಾನ ಪತ್ರಿಕೆಯನ್ನು ಆಳು ಬೋರನು ತಂದು ಅವಳ ಮುಂದಿಟ್ಟ. ಭಟ್ಟನೊಬ್ಬನ ಹೊರತು ಉಳಿದ ಇಬ್ಬರು ಆಳುಗಳೂ ಗೌರಮ್ಮನೂ ಬೇರೆ ಕೆಲಸಗಳಿಗೆ ಹೊರಟುಹೋದರು. ಕಾಫಿ ಕುಡಿಯುತ್ತಿದ್ದ ವಸಂತಳಿಗೆ ವರ್ತಮಾನ ಪತ್ರ ದಲ್ಲಿ ದಪ್ಪಕ್ಷರಗಳಲ್ಲಿ ಹಾಕಿದ್ದ ಮಾತುಗಳೂ ಭಾವಚಿತ್ರವೊಂದೂ ಕುತೂಹಲ ವನ್ನು ಹುಟ್ಟಿಸಿದುವು. ಬಲಗೈಯಲ್ಲಿದ್ದ ಬಟ್ಟಲಿಂದ ಕಾಫಿಯನ್ನು ಸವಿಯುತ್ತ ಎಡಗೈಯಲ್ಲಿ ಅದನ್ನು ತೆಗೆದುಕೊಂಡು ನೋಡತೊಡಗಿದಳು. ಅಂಥ ಸಂದರ್ಭಗಳಲ್ಲಿ ಸೇವಕರಿಗೆ ಸ್ವಾಭಾವಿಕವಾಗಿ ಹುಟ್ಟುವ ಶ್ರದ್ಧೆ ಭಟ್ಟನಲ್ಲಿಯೂ ಹುಟ್ಟಿತು.

“ನಮ್ಮ ಸಾಹುಕಾರ ಬಸಪ್ಪನನ್ನು ಕೊಲೆಮಾಡಿದವನು ತಾಯಿ ಅವನು. ಕೋರ್ಟಿನಲ್ಲಿ ನಿನ್ನೆ ಫಾಸಿಶಿಕ್ಷೆ ಕೊಟ್ಟಿದ್ದಾರೆ. ಅಂಥ ಸಾಹುಕಾರ ನನ್ನು ಕೊಂದರೆ ಗಲ್ಲಿಗೆಹಾಕದೆ ಬಿಡುತ್ತಾರೆಯೆ?” ಎಂದ.

ವಸಂತ ಕಾಫಿ ಕುಡಿಯುವುದನ್ನು ಮುಗಿಸಿ ಅವನ್ನೆಲ್ಲ ತೆಗೆದುಕೊಂಡು ಹೋಗುವಂತೆ ಭಟ್ಟನಿಗೆ ಸನ್ನೆ ಮಾಡಿದಳು. ಅವಳ ಆಸಕ್ತಿ ಈಗ ಪತ್ರಿಕೆಯ ಮೇಲಿತ್ತು. ಗಣಿಯ ಕೂಲಿ ಆಳು ನಟೇಶ—ಅಲ್ಲಿದ್ದ ಭಾವಚಿತ್ರದಲ್ಲಿ ಕಾಣು ವವನು—ಬಸಪ್ಪನನ್ನು ಕೊಲೆ ಮಾಡಿದ್ದಾನೆಂದು ಜಡ್ಜಿಯು ತೀರ್ಮಾನ ಕೊಟ್ಟಿದ್ದಾನೆ. ಇನ್ನು ಆರು ದಿನಕ್ಕೆ ಬರುವ ಸೋಮವಾರ ಬೆಳಿಗ್ಗೆ ಎಂಟು ಗಂಟೆಗೆ ಅವನನ್ನು ಗಲ್ಲಿಗೆ ಹಾಕುತ್ತಾರೆ.

ಪತ್ರಿಕೆಯಲ್ಲಿ ಕಂಡಸುದ್ದಿ ವಸಂತಳ ಹೃದಯದಲ್ಲಿ ಕಳೆದ ಒಂದು ದಿನ ದಿಂದ ನಡೆಯುತ್ತಿದ್ದ ವಿಚಾರ ತರಂಗಗಳನ್ನು ಹೊಡೆದೆಬ್ಬಿಸಿತ್ತು. ಕೊಳದ ಅಲೆಯಾಗಿದ್ದುದು ನದಿಯ ತೆರೆಯಾಗಿ ಸಮುದ್ರದ ಅಲೆಯಾಗಿತ್ತು. ಒಂದು ಗಂಡಿನ ಜೀವ ಇನ್ನು ಆರು ದಿನಕ್ಕೆ ಈ ಪ್ರಪಂಚದಿಂದ ಕಣ್ಮರೆಯಾಗುತ್ತದೆ. ಇರುವ ಈ ಆರುದಿನವೂ ಕಾರಾಗೃಹದಲ್ಲಿ ಒಬ್ಬರನ್ನು ನೋಡಲಾರದೆ, ಸ್ವತಂತ್ರವಾಗಿ ನಾಲ್ಕು ಹೆಜ್ಜೆ ತಿರುಗಾಡಲಾರದೆ, ಸ್ವೇಚ್ಛೆಯಾಗಿ ಒಬ್ಬರೊಡನೆ ಮಾತಾಡಲಾರದೆ ಇದ್ದು ಆರನೆಯದಿನ ತನ್ನ ಯಾತ್ರೆಯನ್ನು ಮುಗಿಸುತ್ತದೆ. ಇನ್ನು ಉಳಿದಿರುವಷ್ಟು ದಿನವೂ ಅವನಿಂದ ಯಾರಿಗೂ ಬಾಧೆಯಿಲ್ಲ; ಯಾರಿಗೂ ಉಪಯೋಗವಿಲ್ಲ. ಅವನನ್ನು ತಾನೇಕೆ ಮದುವೆಯಾಗ ಬಾರದು!!!

ಏನು? ವಸಂತಳು 32 ಲಕ್ಷ ರೂಪಾಯಿಗಳ ಶ್ರೀಮಂತಳು, ವಿದ್ಯಾವತಿ ರೂಪವತಿ, ಯುವತಿ—ಒಬ್ಬ ಕೊಲೆಗಡುಕನನ್ನು, ಕೊರಳಿಗೆ ನೇಣು ಬಿಗಿಸುವ ಕೂಲಿ ಆಳನ್ನು ಮದುವೆಯಾಗುವುದೇ? ರೂಪವಂತನೆ, ಹಣವಂತನೆ, ಗುಣವಂತನೆ, ವಿದ್ಯಾವಂತನೆ, ಹತ್ತುಜನರಲ್ಲಿ ಹೆಸರಾದವನೆ? ಅದೊಂದೂ ಇಲ್ಲ. ಆದರೆ ಅವನು ಗಂಡಸು. ತನಗೆ ಯಾವ ತೊಂದರೆಯನ್ನೂ ಕೊಡದೆ ಮದುವೆಯ ಸೆರೆಯಿಂದ ತನ್ನನ್ನು ಬಿಡಿಸಿ ತನ್ನ ಜೀವನ ಯಾತ್ರೆಯನ್ನು ಮುಗಿಸಿ ತನ್ನನ್ನು ಪುನಃ ಸ್ವತಂತ್ರಳಾಗಿ ಮಾಡಬಲ್ಲ ಒಬ್ಬನೇಒಬ್ಬ ಗಂಡ ನೆಂದರೆ ನಟೇಶ, ಅವನ ಐಶ್ವರ್ಯ ವಿದ್ಯೆ ಗುಣ ರೂಪು ಯೌವನಗಳಿಂದ

ತನಗೇನು ? ತನ್ನ ಗಂಡನಾಗಿದ್ದನೆಂಬ ಹೆಸರೊಂದೆ ಸಾಕು. ದೈವಾಯುಕ್ತ ವಾಗಿ ಇಂಥ ಸುಸಂಧಿ ದೊರೆಕಿದೆಯೆಂದು ವಸಂತಳು ಹಿಗ್ಗಿಹೋದಳು. ಪತ್ರಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಪಂಜರದಿಂದ ಹೊರಕ್ಕೆ ಹಾರುವ ಗಿಣಿಯಂತೆ ಹಾರುತ್ತ ನೆಗೆಯುತ್ತ ತನ್ನ ತಾತನ ಭಾವಚಿತ್ರದ ಬಳಿಗೆ ಬಂದು ಅವನನ್ನು ಅಣಕಿಸುತ್ತ,

'ಮದುವೆಯಾಗದಿದ್ದರೆ ನಿನ್ನ ಆಸ್ತಿಯನ್ನು ಕೊಡುವುದಿಲ್ಲ ಅಲ್ಲವೆ ತಾತಾ ? ಮದುವೆಯಾಗುತ್ತೇನೆ. ನಿನ್ನ ನೊಮ್ಮಗಳಾದುದಕ್ಕೆ ನೀನು ಉಪಯೋಗಿಸಿದಷ್ಟೇ ಬುದ್ಧಿಯನ್ನು ನಾನೂ ಉಪಯೋಗಿಸಿ ನಟೇಶನನ್ನು ಮದುವೆಯಾಗುತ್ತೇನೆ' ಎನ್ನುತ್ತ ಸೇವಕರನ್ನು ಕೂಗಿ ಸ್ನಾನಕ್ಕೆ ನೀರು ಸಿದ್ಧಮಾಡಿಕೊಂಡಳು.

ಸ್ನಾನ ಮಾಡುತ್ತಿದ್ದಾಗ ಈ ತನ್ನ ಯೋಜನೆಯನ್ನು ಗೌರಮ್ಮ ನಿಗೆ ಹೇಳಲೆ ಎಂದು ಒಂದುಸಲ ಮನಸಿಗೆ ಬಂತು. ಯಾರಿಗೆ ಹೇಳಿ ಮಾಡುವು ದೇನಿದೆ? ಇಂಥ ವಿಷಯಗಳಲ್ಲಿ ಗೌರಮ್ಮನಿಗೇನು ತಿಳಿಯುತ್ತದೆ. ಒಂದು ವೇಳೆ ಅವಳು ಬೇಡವೆಂದರೆ ಸುಮ್ಮನಿರಲು ಸಾಧ್ಯವೆ ? ತನ್ನ ಸಂಕಟವನ್ನು ನಿನ್ನೆಯಿಂದಲೂ ನೋಡಿದ ಅವಳು ಅದಕ್ಕೆ ಪರಿಹಾರವೇನನ್ನಾದರೂ ಹೇಳಿ ದಳೇ ? ತಾನು ಮಾಡಿದ ಯೋಜನೆ ಸರಿಯಿಲ್ಲವೆನ್ನುವವಳು ಬೇರೆ ಏನಾದರೂ ಹೇಳುವಹಾಗಿರಬೇಕು. ಅದಿಲ್ಲದ ಮೇಲೆ ಅವಳಿಗೆ ಹೇಳಿ ಪ್ರಯೋಜನ ವೇನು ? ಯಾರಿಗೂ ತಿಳಿಯದಂತೆ ಈ ಮದುವೆಯನ್ನು ಗುಟ್ಟಾಗಿಡಬೇಕು. ಸೋಮವಾರ ಬೆಳಿಗ್ಗೆ ಎಂಟು ಗಂಟೆ ಕಳೆದಮೇಲೆ ಯಾರಿಗೆ ಬೇಕಾದರೂ ತಿಳಿಯಲಿ. ಅದುವರೆಗೆ ಅವರಿವರಿಗೆ ಅದನ್ನು ತಿಳಿಸಿ ಗೊಂದಲಮಾಡಿ ಕೊಳ್ಳುವುದು ಸರಿಯಲ್ಲ. ಹೀಗೆಂದು ಯೋಚಿಸಿ ಅವಳು ಬೇಗಬೇಗ ಬಟ್ಟೆ ಹಾಕಿಕೊಂಡು ತಲೆಯನ್ನು ಅಂದವಾಗಿ ಗಂಟಿಕ್ಕಿ ಹೂ ಮುಡಿದು ಮುಖಕ್ಕೆ ತೆಳುವಾಗಿ ಸ್ನೋ ಪೌಡರ್ ಹಾಕಿಕೊಂಡು ಸಣ್ಣನೆ ಕುಂಕುಮದ ಬೊಟ್ಟ ನ್ನಿಟ್ಟು ಘಮಘಮಿಸುವ ಸೆಂಟನ್ನು ಚಿಮುಕಿಸಿ ಕನ್ನಡಿಯಲ್ಲಿ ತನ್ನ ನಿಲುವನ್ನು ನೋಡಿಕೊಳ್ಳುತ್ತ ತನ್ನ ರೂಪಿಗೆ ತಾನೇ ಹಿಗ್ಗುತ್ತ 'ನಟೇಶನೆಂಥ ರೂಪವತಿಯ ಕೈ ಹಿಡಿಯುತ್ತಾನೆ. ಅದೊಂದು ಗಳಿಗೆಯ ಸುಖಕ್ಕಾಗಿ ಸ್ವರ್ಗವನ್ನೇ ಸೂರೆಗೊಡುವ ತರುಣರಿರುವಾಗ ಆ ಪುಣ್ಯ ಪುರುಷನಿಗೆ ಅನಿರೀಕ್ಷಿತವಾಗಿ

ಅಪ್ರಾರ್ಥಿತವಾಗಿ, ಅನಾಯಾಸವಾಗಿ ಲಭಿಸುತ್ತಿದೆ' ಎಂದುಕೊಂಡು ತನ್ನ ಸ್ಟುಡಿಬೇಕರ್ ಕಾರಿನಲ್ಲಿ ಕುಳಿತು ಜೈಲಿನಕಡೆ ಹೊರಟಳು.

— ೬ —

'ಓ, ಮಿಸ್ ವಸಂತ! ಬನ್ನಿ ಬನ್ನಿ. ಕೂತುಕೊಳ್ಳಿ. ಇದೇನಮ್ಮ ಇಷ್ಟು ದೂರ?'

'ನಿಮ್ಮ ಜೈಲಿನಲ್ಲಿ ಒಬ್ಬ ಖೈದಿಯನ್ನು ನೋಡಬೇಕು, ಕೊಂಚ ಮಾತಾಡಬೇಕು. ಅಪ್ಪಣೆ ಕೊಡುತೀರ?'

'ಅಗತ್ಯವಾಗಿ, ಯಾರನ್ನು ನೋಡಬೇಕು?'

'ನಟೇಶ್ ಎಂಬವನನ್ನು.'

ಜೈಲಿನ ಅಧಿಕಾರಿಯು ಆ ಹೆಸರನ್ನು ಕೇಳುತ್ತಲೇ ಕ್ಷಣಕಾಲ ಹುಬ್ಬು ಕೂಡಿಸಿದವನು ಅದನ್ನು ಸಡಿಲ ಬಿಟ್ಟು,

'ನಿನ್ನೆ—ಫಾಸಿಗೆ ಶಿಕ್ಷೆ ಆಯಿತಲ್ಲ' ಎಂದು ಅನುಮಾನಿಸುತ್ತ ಕೇಳಿದ.

'ಹೌದು, ಅವನನ್ನೇ.'

'ನಾನೂ ಜೊತೇಲಿ ಬರಬಹುದೆ ತಾಯಿ?'

'ನಿಮ್ಮ ರೂಲ್ಸಿನ ಪ್ರಕಾರ ಅವಶ್ಯಕವಾದರೆ ಬನ್ನಿ, ಹಾಗೆ ಬರದಿದ್ದರೆ ಮೇಲು.'

ವಸಂತಳಂಥ ವ್ಯಕ್ತಿಯ ವಿಷಯದಲ್ಲಿ ಅಧಿಕಾರಿಯು ಏನೂ ಸಂದೇಹ ಪಡಬೇಕಾಗಿರಲಿಲ್ಲ. ಮೇಲಾಗಿ ಅವಳು ಅಪರಾಧಿಯನ್ನು ನೋಡಲು ಎಂದೂ ಬಂದವಳಲ್ಲ. ಪತ್ರಿಕೆಗಳಲ್ಲಿ ಅವನ ಸಮಾಚಾರವನ್ನು ತಿಳಿದು ಕುತೂಹಲದಿಂದ ಬಂದಿರಬಹುದು. ಬಂದವಳು ಅವನಿಗೆ ನಾಲ್ಕು ಒಳ್ಳೆಯ ಮಾತು ಹೇಳಿದರೆ ಹೇಳಿಕೊಳ್ಳಲಿ. ಯಾವ ಹಿತವಾದದಿಂದ ಅವನಿಗೆ ಇನ್ನು ಏನೂ ಆಗುವಂತಿಲ್ಲ. ಇದಕ್ಕೆ ತಾನೇಕೆ ಮಧ್ಯೆ ಸಾಕ್ಷಿಯಾಗಿ ಹೋಗಬೇಕೆಂದು ಅಧಿಕಾರಿಗೆ ತೋರಿ,

'ನಿಮ್ಮಲ್ಲಿ ನನಗೇನೂ ಸಂದೇಹವಿಲ್ಲ. ಬೇರೆಯವರಾದರೆ ಇಂಥ ಖೈದಿಗಳೊಡನೆ ಮಾತಾಡುವಾಗ ನಮ್ಮವರು ಹತ್ತಿರ ಇರಬೇಕಾಗುತ್ತದೆ. ನಿಮ್ಮ ವಿಷಯದಲ್ಲಿ ಅಂಥ ನಿರ್ಬಂಧವೇನೂ ಇಲ್ಲ, ನೀವು ಒಬ್ಬರೇ ನೋಡ

ಬಹುದು' ಎಂದು ತನ್ನ ಮೇಜಿನ ಮೇಲಿದ್ದ ಗಂಟೆಯನ್ನು ಬಾರಿಸಿ ಕಾವಲ ಸೇವಕನನ್ನು ಕರೆದು 'ಇವರಿಗೆ ನಂಬರ್ 630 ತೋರಿಸು. ದೂರ ನಿಂತಿರಬೇಕು; ಅವರು ಮಾತಾಡುತ್ತಿದ್ದರೆ ಮಧ್ಯೆ ಅವಸರಪಡಿಸಬೇಡ' ಎಂದು ಅಪ್ಪಣೆ ಮಾಡಿದರು. ಆ ಅಪ್ಪಣೆಯನ್ನು ಪಾಲಿಸುವ ಭರವಸೆಯೆಂಬಂತೆ ಸೇವಕನು ಒಂದು ಸೆಲ್ಯೂಟ್ ಹೊಡೆದ. ವಸಂತಳು ಎದ್ದು ಅಧಿಕಾರಿಗೆ ವಂದನೆಗಳನ್ನು ಹೇಳಿ ಸೇವಕನನ್ನು ಹಿಂಬಾಲಿಸಿದಳು.

ಜೈಲಿನ ಮಹಾದ್ವಾರದಲ್ಲಿದ್ದ ದಿಡ್ಡಿಯ ಬಾಗಿಲಿನಲ್ಲಿ ತಲೆ ತಗ್ಗಿಸಿಕೊಂಡು ಒಳಹೊಕ್ಕು ಎರಡು ಹೆಜ್ಜೆ ಮುಂದೆ ಹೋಗುವುದರೊಳಗಾಗಿ ತಾನು ಯಾವುದೋ ಬೇರೊಂದು ಪ್ರಪಂಚದಲ್ಲಿರುವಂತೆ ವಸಂತಳಿಗೆ ತೋರಿತು. ಅಲ್ಲಿಯ ವಾತಾವರಣವೆಲ್ಲವೂ ಕಹಿಯಾಗಿರುವಂತಿತ್ತು. ಹಿಂಸೆ, ಕ್ರೌರ್ಯ, ದುಷ್ಕೃತ್ಯ, ಪಾಪಗಳ ಔಪಾಸಕರ ಕ್ಷೇತ್ರವದು. ಎತ್ತಕಡೆ ನೋಡಿದರೂ ಬೋನಿನಲ್ಲಿಟ್ಟ ಕಾಡುಮೃಗಗಳಂತೆ ಸಲಾಕಿಗಳ ಹಿಂದೆ ಇದ್ದ ಖೈದಿಗಳ ಮುಖಗಳು ಕಾಣುತ್ತಿದ್ದುವು. ಸಾತ್ವಿಕತೆಯ ಸೊಂಕನ್ನೇ ಕಾಣದ ಅವರ ಕಣ್ಣುಗಳು ವಸಂತಳನ್ನು ಹೀರಿಕೊಳ್ಳುವಂತೆ ನೋಡುತ್ತಿದ್ದುವು. ಹೊಟ್ಟೆ ತುಂಬಿಕೊಳ್ಳಲು ಕಳವು ಮಾಡಿದವರು, ದ್ವೇಷದಿಂದ, ಆಕ್ರೋಶದಿಂದ ಹೊಡೆದಾಡಿ ಶಿಕ್ಷೆಗೆ ಗುರಿಯಾದವರು, ಮೋಸಗಾರರು, ದಗಾಕೋರರು, ಜೇಬುಗಳ್ಳರು, ಬೇರೊಬ್ಬರ ಜೀವ ತೆಗೆದವರು ಅಥವಾ ಜೀವ ತೆಗೆಯಲು ಯತ್ನಿಸಿ ವಿಫಲರಾದವರು, ಸಮಾಜದಲ್ಲಿ ನಡೆವ ಎಲ್ಲ ಪಾಪಕೃತ್ಯಗಳ ಪ್ರತಿನಿಧಿಗಳು ಸ್ವತಂತ್ರಳಾಗಿ ಹೋಗುತ್ತಿದ್ದ ಈ ಸೊಗಸುಗಾತಿಯನ್ನು ನುಂಗಿಬಿಡುವಂತೆ ನೋಡುತ್ತಿದ್ದರು. ತಾನು ಇಂಥ ಸ್ಥಳಕ್ಕೆ ಬಂದುದೇ ಸರಿಯಲ್ಲವೆಂದೂ ಜೈಲಿನ ಅಧಿಕಾರಿಯ ಕೋಣೆಗೇ ನಟೇಶನನ್ನು ಕರೆಸಿಕೊಳ್ಳಬೇಕಾಗಿತ್ತೆಂದೂ ವಸಂತಳಿಗೆ ತೋರಿತು. ಆದರೆ ಈಗ ಬಂದುದಾಗಿದೆ; ಹಿಂದಕ್ಕೆ ಹೋಗುವುದು ಸರಿಯಲ್ಲ ಎಂದು ಮನಸ್ಸನ್ನು ಗಟ್ಟಿಮಾಡಿಕೊಂಡು ಅತ್ತಿತ್ತ ನೋಡದೆ ಸೇವಕನನ್ನು ಹಿಂಬಾಲಿಸಿದಳು.

ನಟೇಶನನ್ನು ಇರಿಸಿದ್ದ ಕೋಣೆ ಇತರ ಕೋಣೆಗಳಿಗಿಂತ ಭದ್ರವಾದ ಸ್ಥಳದಲ್ಲಿತ್ತು. ದೀರ್ಘಾವಧಿಯ ಖೈದಿಗಳು, ಕೊಲೆ ಲೂಟಿ ಮುಂತಾದ ಹಿರಿಯ ಅಪರಾಧಗಳನ್ನು ಮಾಡಿದವರು ಇರತಕ್ಕ ಸ್ಥಳವದು. ನಟೇಶನ

ಕೋಣೆಯ ಪಕ್ಕದಲ್ಲಿ ಸ್ವಲ್ಪ ಓರೆಯಾಗಿದ್ದ ಮತ್ತೊಂದು ಕೋಣೆಯಲ್ಲಿ ಹದಿನಾಲ್ಕು ವರ್ಷ ಕಾರಾಗೃಹ ಶಿಕ್ಷೆಗೆ ಗುರಿಯಾಗಿದ್ದ ಖೈದಿಯೊಬ್ಬನಿದ್ದ. ಅದುವರೆಗೆ ಆಗಲೇ ಏಳು ವರ್ಷಗಳ ಅನುಭವ ಅವನಿಗೆ ಆಗಿತ್ತು. ಅಲ್ಲಿದ್ದ ಖೈದಿಗಳಲ್ಲೆಲ್ಲಾ ಅವನೇ ಹಳೆಯ ಖೈದಿಯಾಗಿದ್ದುದರಿಂದ ಇತರ ಹೊಸ ಜನರಿಗೆ ಅವನನ್ನು ಕಂಡರೆ ಹಿರಿಯತನದ ಗೌರವವಿತ್ತು. ಜೈಲಿನ ಅಧಿಕಾರಿಗಳನ್ನು ಕಾವಲವರನ್ನು ವಿರೋಧಿಸಿದರೆ ತನಗೆ ಸುಖವಿಲ್ಲವೆಂದು ತಿಳಿದ ಇವನು ಒಳ್ಳೆಯ ಮಾತಿನಲ್ಲೇ ಅವರ ಅನುರಾಗವನ್ನು ಸಂಪಾದಿಸಿಕೊಂಡು ತನ್ನ ಕೋಣೆಯನ್ನೇ ಸ್ವಂತ ಮನೆಯೆಂದು ಭಾವಿಸಿಕೊಂಡು ಸುಖವಾಗಿ ದಿನಗಳನ್ನು ಕಳೆಯುತ್ತಿದ್ದ. ಕಾಕತಾಳ ನ್ಯಾಯದಂತೆ ಅವನಿಗೆ ಜೈಲಿನಲ್ಲಿ 420ನೆಯ ನಂಬರು ದೊರೆತಿತ್ತು.

ನಟೇಶನು ಆ ಕೋಣೆಗೆ ಬಂದಾಗಿನಿಂದಲೂ 420ನೆಯ ಖೈದಿಗೆ ಅವನನ್ನು ಕಂಡರೆ ಒಂದು ರೀತಿಯ ಅಭಿಮಾನ ಬೆಳೆದಿತ್ತು; ಬಸಪ್ಪನಂಥ ಒಬ್ಬ ಸಮಾಜರಕ್ತೋಪಜೀವಿಯನ್ನು ಕೊನೆಗಾಣಿಸಿದ ಜನೋಪಕಾರಿ ಅವನೆಂಬ ಗೌರವ ಹುಟ್ಟಿತ್ತು. ಅದರಿಂದ ಏನಾದರೂ ನೆಪಮಾಡಿಕೊಂಡು ಅವನನ್ನು ಮಾತಾಡಿಸುವನು. ಕೆಲಸಕ್ಕಾಗಿ ಅಥವಾ ವಾರಕ್ಕೊಮ್ಮೆ ನಡೆಸುವ ದೇವತಾ ಪ್ರಾರ್ಥನೆಗಳಿಗಾಗಿ ಹೊರಗೆ ಬಿಟ್ಟಾಗ ಅವನೊಡನೆ ಸಮಾಧಾನಕರವಾದ ಮಾತುಗಳನ್ನು ಹೇಳುವನು; ಇತರ ಖೈದಿಗಳ ಮುಂದೆ ಅವನನ್ನು ಬಾಯಿ ತುಂಬ ಹೊಗಳುವನು. ಇದಾವುದೂ ನಟೇಶನಿಗೆ ಬೇಕಿರಲಿಲ್ಲ. ಇವನ ಸಾತ್ವಿಕತೆಯನ್ನು ಕಂಡು ಇಂಥ ಮನುಷ್ಯನು ಬಸಪ್ಪನನ್ನು ಹೇಗೆ ಕೊಲೆ ಮಾಡಿದನೆನ್ನುವಷ್ಟು ಇತರ ಖೈದಿಗಳಿಗೆ ಹಲವುವೇಳೆ ಸಂದೇಹ ಬರುತ್ತಿತ್ತು. ಏನಾದರೂ ಅವನು ತನ್ನ ಜೀವನದಲ್ಲಿ ನಡೆಸಿದ ಒಂದೇ ಒಂದು ಸಾಹಸದ ಕೆಲಸ ಅವನನ್ನು ಉನ್ನತ ಸ್ಥಾನಕ್ಕೆ ಒಯ್ದಿತ್ತು.

ನಟೇಶನ ಮೇಲೆ ಖೈದಿಗಳಿಗಿದ್ದ ಗೌರವವು ನಾನಾ ರೂಪುಗಳಲ್ಲಿ ಪ್ರದರ್ಶಿತವಾಗಿದ್ದುವು. ಅವನ ವಿಚಾರಣೆ ನಡೆಯುತ್ತಿದ್ದ ಕಾಲದಲ್ಲಿ ದಸರಾ ಹಬ್ಬ ಬಂದಿತ್ತು. ಮಹಾನವಮಿಯ ದಿನ ರಾತ್ರಿ ಊಟಮಾಡಿ ಎಲ್ಲರೂ ಮಲಗಲು ಗಂಟೆಯಾದ ಮೇಲೆ ಪಕ್ಕದ ಕೋಣೆಯ 420ನೆ ಮನುಷ್ಯನು ಪಿಸುಮಾತಿನಲ್ಲಿ ನಟೇಶನನ್ನು ಕೂಗಿ ಕರೆದು ನಾಲ್ಕು ಒಬ್ಬಟ್ಟುಗಳನ್ನು ತಿನ್ನಲು ಕೊಟ್ಟ.

ಅವನ ಸಹಾಯದಿಂದ ವಾರಕ್ಕೊಂದುಸಲ ನಟೇಶನ ತಂಗಿ ಬರೆದ ಕಾಗದ ಜೈಲು ಅಧಿಕಾರಿಗಳ ಗಮನಕ್ಕೆ ಬರದೆ ಇವನಿಗೆ ತಲುಪುತ್ತಿತ್ತು. ಒಂದು ದಿನ ರಾತ್ರಿ ಸರಿಹೊತ್ತಿನಲ್ಲಿ ಯಾರೋ ಬಂದು ನಟೇಶನಿಗೆ ಈರುಳ್ಳಿಹಾಕಿ ಮಾಡಿದ ಅಂಬೊಡೆಗಳ ಪೊಟ್ಟಣವೊಂದನ್ನು ಕೊಟ್ಟುಹೋದರು. ಇವೆಲ್ಲಾ ಜೈಲಿನೊಳಕ್ಕೆ ಹೇಗೆ ಬರುತ್ತವೆ, ಜೈಲು ಅಧಿಕಾರಿಗಳ ಕಣ್ಣು ತಪ್ಪಿಸಿ ರಾತ್ರಿಹೊತ್ತು ಇವನ್ನು ಯಾರು ತರುತ್ತಾರೆ ಎಂಬುದು ನಟೇಶನಿಗೆ ಅರ್ಥವಾಗಲಿಲ್ಲ. ಒಂದು ಸಲ ಅದನ್ನು ಕೇಳಿದ್ದಕ್ಕೆ ಅದೆಲ್ಲಾ ಬಹಳ ರಹಸ್ಯವೆಂದೂ ತನಗೆ ಯಾವ ವಸ್ತು ಯಾವ ಕಾಲದಲ್ಲಿ ಬೇಕಾದರೂ ದೊರೆಯಬಲ್ಲುದೆಂದೂ 420ನೆಯ ಮನುಷ್ಯನಿಂದ ಉತ್ತರ ಬಂತು. ಅವನಿಗೆ ಶಿಕ್ಷೆಯಾಯಿತೆಂದು ತಿಳಿದ ದಿನ ರಾತ್ರಿ ಖೈದಿಗಳಲ್ಲಿ ಅರ್ಧ ಜನರು ಊಟ ಮಾಡಲಿಲ್ಲ; ತಮ್ಮ ಪಾಲಿಗೆ ಜೈಲು ಅಧಿಕಾರಿಗಳು ಕೊಟ್ಟ ಹಿಟ್ಟನ್ನು ಹಾಗೆಯೇ ಬಿಟ್ಟರು. ಅದೇಕೆ ಊಟ ಮಾಡಲಿಲ್ಲವೆಂದು ಒಬ್ಬ ಅಧಿಕಾರಿಯು ಕೇಳಿದ್ದಕ್ಕೆ 'ಸರ್ಕಾರದವರು ಮಾಡಿದ ಈ ಅನ್ಯಾಯವಾದ ತೀರ್ಮಾನಕ್ಕಾಗಿ ನಾವು ಉಪವಾಸ ಮಾಡಿ ದೇವರಲ್ಲಿ ಪ್ರಾರ್ಥನೆ ಮಾಡಿದೆವು; ಇನ್ನುಮುಂದಾದರೂ ದೇವರು ನಿಮಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ' ಎಂದು 420 ಉತ್ತರ ಕೊಟ್ಟ.

ಸೇವಕನನ್ನು ಮುಂದಿಟ್ಟುಕೊಂಡು ಬರುತ್ತಿದ್ದ ವಸಂತಳನ್ನು ಮೊದಲು ನೋಡಿದವನು 420ನೆಯ ಖೈದಿ. ಶ್ರೀಮಂತಳಂತೆ ಕಾಣುತ್ತಿದ್ದ ಅಂಥ ಚೆಲುವೆಯೊಬ್ಬಳು ಇಲ್ಲೇಕೆ ಬರುತ್ತಿದ್ದಾಳೆಂಬು ಕುತೂಹಲದಿಂದ ಅವನು ನೋಡುತ್ತಿದ್ದ. ಸೇವಕನು ನಟೇಶನ ಕೋಣೆಯ ಬಳಿಗೆ ಬಂದು ದರ್ಪದಿಂದ ಅವನನ್ನು ಮಾತಾಡಿಸುತ್ತ ಅವನೊಡನೆ ಮಾತಾಡಲು ಆಕೆಯು ಬಂದಿರುವಳೆಂದು ಹೇಳಿ ದೂರಹೋಗಿ ನಿಂತ. ಅಪರಿಚಯಸ್ಥಳಾದ ಇವಳನ್ನು ನೋಡಿ ಮಾತಾಡಲು ಮನಸ್ಸಿಲ್ಲದಿದ್ದರೂ ನಟೇಶನು ಬಾಗಿಲಬಳಿಗೆ ಬಂದು ನಿಂತುಕೊಂಡ.

ತನ್ನ ಭಾವೀ ಪತಿದೇವನನ್ನು ವಸಂತಳು ಕಣ್ಣುತುಂಬ ಒಮ್ಮೆ ನೋಡಿದಳು. ಆಜಾನುಬಾಹುವಾದ ಮನುಷ್ಯ, ಬಹುವಾಗಿ ಬೆಳೆದ ಗಡ್ಡ ಮೀಸೆಗಳಿಂದ ಅರೆಮುಚ್ಚಿ ನೋಡಲು ಭಯಂಕರವಾಗಿದ್ದ ದುಂಡಾದ ವಿಶಾಲವಾದ ಮುಖ, ಗಂಡುತನವನ್ನು ಸೂಸುತ್ತಿದ್ದ ಹುಬ್ಬುಗಳ ಅಡಿಯಲ್ಲಿ ಫಳಫಳನೆ

ಹೊಳೆಯುತ್ತ ಚಂಚಲತೆಯ ಸೊಂಕನರಿಯದ ಕಣ್ಣುಗಳು, ಉಬ್ಬಿದ ಅಗಲ ವಾದ ಎದೆ, ಶ್ರಮದಿಂದ ಕಾಯಕಟ್ಟಿ ಕಲ್ಲಿನಂತೆ ಗಡುಸಾಗಿ ಕಾಣುತ್ತಿದ್ದ ತೋಳುಗಳು. ಜನರನ್ನು ಕೊಲೆ ಮಾಡಲು ತಕ್ಕ ಆಳು ಇವನೆಂಬ ಭಾವ ಮೊದಲ ನೋಟದಲ್ಲೇ ವಸಂತಳಿಗಾಯಿತು. ಅವನೊಡನೆ ಮದುವೆಯ ಮಾತಾ ಡುವುದಿರಲಿ, ಯಾವ ಮಾತನ್ನಾಡುವುದಕ್ಕೂ ಅವಳ ಮನಸ್ಸು ಹಿಂತೆಗೆಯಿತು. ವಸಂತಳು ಸುಮ್ಮನಿರುವುದನ್ನು ಕಂಡು ನಟೇಶನು 'ಏನಾಗಬೇಕು ನನ್ನಿಂದ' ಎಂದು ಕೇಳಿದ. ಅವನ ಮಾತು ಸಿಂಹ ಗರ್ಜನೆಯಂತೆ ಅವಳಿಗೆ ಕೇಳಿಸಿತು. ಆದರೆ ಈಗ ಹೆದರಿ ಸುಮ್ಮನಿದ್ದರೆ ಪ್ರಯೋಜನವೇನೆಂದು ಧೈರ್ಯ ತಂದು ಕೊಂಡು ಮೆಲ್ಲನೆ ಮಾತಿಗಾರಂಭಿಸಿದಳು. ಸಾಂಪ್ರದಾಯಕವಾದ ಒಂದೆರಡು ಮಾತುಗಳನ್ನು ಹೇಳಿ ಮದುವೆಯ ಮಾತನ್ನೆತ್ತಿದಳು. ಅವಳು ಕೇಳಿದ ಪ್ರಶ್ನೆಗಳಿಗೆ ಗಂಭೀರವಾಗಿ ಉತ್ತರ ಕೊಡುತ್ತಿದ್ದ ನಟೇಶನು ಮದುವೆಯ ಮಾತು ಬರುತ್ತಲೇ ಗಟ್ಟಿಯಾಗಿ ನಕ್ಕುಬಿಟ್ಟ. 420ನೆಯ ಖೈದಿಗೂ ನಗು ವನ್ನು ತಡೆಯಲಾಗಲಿಲ್ಲ; ನಟೇಶನನ್ನು ಹಾಸ್ಯಮಾಡುತ್ತ,

'ಗುಡ್‌ಲಕ್ ನಟೇಶ್, ಗುಡ್‌ಲಕ್' ಎಂದ.

ವಸಂತಳು ತಟ್ಟನೆ ಅತ್ತಕಡೆ ಮುಖ ತಿರುಗಿಸಿ 'ಮುಚ್ಚುಬಾಯಿ' ಎಂದು ಇಂಗ್ಲಿಷಿನಲ್ಲಿ ಗದರಿಸಿ ನಟೇಶನ ಕಡೆ ತಿರುಗಿ,

'ಏಕೆ ನಗುತ್ತೀಯೆ ?' ಎಂದು ಕೇಳಿದಳು.

'ನಿನ್ನನ್ನು—ನಾನು—ಮದುವೆಯಾಗಬೇಕೆ ?'

'ಹೌದು.'

'ನಿನಗೆ ಬೇರೆ ಯಾರೂ ಗಂಡು ಸಿಕ್ಕಲಿಲ್ಲವೆ? ಜೈಲಿನಲ್ಲಿದೇನೆ, ಇನ್ನೊಂದು ವಾರದೊಳಗೆ ಸಾಯುತ್ತೇನೆ. ಇಂಥವನೊಡನೆ ಮದುವೆಯೆ ?'

'ಅದು ನನ್ನ ಇಷ್ಟ.'

'ನಾನು ಅದಕ್ಕೊಪ್ಪುವುದಿಲ್ಲ.'

'ಏಕೆ ಒಪ್ಪುವುದಿಲ್ಲ? ಅದರಿಂದ ನಿನಗೇನು ಕಷ್ಟ? ಚಿಕ್ಕವಳಾದ ನಿನ್ನ ತಂಗಿಯ ಪೋಷಣೆಗೆ ಹಣ ಬೇಡವೆ? ನಾನು ಕೊಡುತ್ತೇನೆ.'

ಶ್ರೀಮಂತರೆಂದರೆ ತುಚ್ಛವಾಗಿ ಭಾವಿಸಿದ್ದ ಅವನಿಗೆ ಈ ಮಾತು ಕೇಳಿ ಅವಳಲ್ಲಿ ತಿರಸ್ಕಾರ ಹುಟ್ಟತೊಡಗಿತು.

'ಓ! ಮದುವೆಯನ್ನು ಕೊಂಡುಕೊಳ್ಳಲು ಬಂದಿದೀಯೊ? ನನ್ನ ಮದುವೆಗೆ ಎಷ್ಟು ಬೆಲೆ ಕಟ್ಟುತ್ತೀ?'

'ಎಷ್ಟು ಹಣ ಬೇಕು ಕೇಳು, ಕೊಡುತ್ತೇನೆ.'

ಇವಳ ನಡತೆ ನಟೇಶನಿಗೆ ಅರ್ಥವಾಗಲಿಲ್ಲ. ಅವಳು ತನ್ನನ್ನೇಕೆ ಮದುವೆಯಾಗಲು ಬಯಸುತ್ತಾಳೆ? ಇದೇನು ವಿನೋದಕ್ಕಾಗಿ ಆಡುವ ಮಾತಿರಬಹುದೆ; ಅಥವಾ ಇದೊಂದು ಹೊಸರೀತಿಯ ವ್ಯಾಪಾರವೆ? ಶ್ರೀಮಂತಿಕೆಯ ವಿಚಿತ್ರ ವ್ಯಾಪಾರ. ಸಾಯಲು ನಿಂತಿರುವನೊಡನೆ ಮದುವೆ, ಆ ಮದುವೆ ಮಾಡಿಕೊಳ್ಳುವುದಕಾಗಿ ಹಣ ಕೊಡುವುದು. ಇದರಿಂದ ಇವಳಿಗೆ ಬರುವ ಲಾಭವಾದರೂ ಏನಿರಬಹುದು? ಹೀಗೆ ಯೋಚಿಸುತ್ತ ನಟೇಶನು ಏನು ಹೇಳಬೇಕೆಂದು ತೋರದೆ ಸುಮ್ಮನಿದ್ದ. ವಸಂತಳು ಪುನಃ ಒತ್ತಾಯ ಪಡಿಸಿದಳು.

'ಕೇಳು, ಎಷ್ಟು ಹಣಬೇಕು?'

ವಿನೋದಕ್ಕಾಗಿಯೋ ಎಂಬಂತೆ ನಟೇಶನು ಕೇಳಿದ,

'ಒಂದು ಸಾವಿರ ರೂಪಾಯಿ ಕೇಳಿದರೆ ಕೊಡುತ್ತೀಯೊ?'

'ಖಂಡಿತ ಕೊಡುತ್ತೇನೆ' ಎಂದು ತಕ್ಷಣ ಅವಳಿಂದ ಉತ್ತರ ಬಂತು. ಒಂದು ಸಾವಿರ ರೂಪಾಯಿ! ಅಷ್ಟು ಹಣವನ್ನು ನಟೇಶನೆಂದೂ ಕಂಡಿರಲಿಲ್ಲ; ಕಾಣುವ ಭರವಸೆಯೂ ಇರಲಿಲ್ಲ. ಸಾವಿನ ಮುಂದೆ ನಿಂತಿರುವ ತನಗೆ ಇದಾವಳೋ ಬಂದು ಇಷ್ಟು ಹಣವನ್ನು ಕೊಡುತ್ತೇನೆನ್ನುತಾಳೆ. ಶ್ರೀಮಂತರಿಗೆ ತಮ್ಮ ಹಣವನ್ನು ಹೇಗೆ ವೆಚ್ಚಮಾಡಬೇಕೆಂಬುದೇ ತಿಳಿಯದೆ ಹೀಗೆಲ್ಲ ಅವನ್ನು ಕಳೆಯುತ್ತಿರಬಹುದೆ? ತಾನು ಬಡವನೆಂದು, ಹಣದಾಸೆಗಾಗಿ ಇಂಥ ದುಸ್ಥಿತಿಯಲ್ಲೂ ಮದುವೆಗೆ ಒಪ್ಪುವೆನೆಂದು ಹೀಯಾಳಿಸಿ ನಗುವುದಕ್ಕಾಗಿ ಇವಳು ಈ ಆಟ ಕಟ್ಟಿರಬಹುದೆ? ಯಾವುದೂ ಪರ್ಯವಸಾನದಲ್ಲಿ ಮಾತ್ರ ತಿಳಿಯಬೇಕು; ನೋಡೋಣ ಎಂದುಕೊಂಡು,

'ಹೇಗೆ, ಎಲ್ಲಿ ಮದುವೆಯಾಗುತ್ತೀ. ನಾನು ಖೈದಿ.'

'ಅದು ನನಗೆ ತಿಳಿದಿದೆ. ಆ ಏರ್ಪಾಡನ್ನು ನಾನು ನೋಡಿಕೊಳ್ಳುತ್ತೇನೆ.'

ಹೀಗೆನ್ನುತ್ತ ವಸಂತಳು ತನ್ನ ಕೈಚೀಲವನ್ನು ತೆಗೆದು ಅದರಲ್ಲಿದ್ದ ಚೆಕ್ ಪುಸ್ತಕವನ್ನೂ ಫೌಂಟೇನಪೆನ್ನನ್ನೂ ತೆಗೆದುಕೊಂಡು ನಟೇಶನ ಹೆಸರಿಗೆ ಒಂದು ಸಾವಿರ ರೂಪಾಯಿಗಳ ಚೆಕ್ ಬರೆದು ಅವನ ಕೈಗೆ ಅದನ್ನು ಕೊಡುತ್ತ,

'ಸಾಧ್ಯವಾದರೆ ನಾಳೆ ಬೆಳಿಗ್ಗೆ ಈ ವೇಳೆಗೆ ಬರುತ್ತೇನೆ. ಮದುವೆಗೆ ಸಿದ್ಧವಾಗಿರು' ಎನ್ನುತ್ತ ಉತ್ತರಕ್ಕಾಗಿ ಕಾಯದೆ ಹೊರಟುಹೋದಳು. ಅದು ವರೆಗೆ ದೂರದಲ್ಲಿ ನಿಂತು ಎಲ್ಲವನ್ನೂ ನೋಡುತ್ತಿದ್ದ ಮತ್ತು ಕಿವಿಗೆ ಬಿದ್ದಷ್ಟು ಮಾತನ್ನು ಕೇಳುತ್ತಿದ್ದ ಸೇವಕನು ಅವಳನ್ನು ಹಿಂಬಾಲಿಸಿದ. ನಟೇಶನೂ ಕೈಯಲ್ಲಿ ಚೆಕ್ಕನ್ನು ಹಿಡಿದುಕೊಂಡು ಭ್ರಾಂತನಾಗಿ ಅವಳಕಡೆ ನೋಡುತ್ತಿದ್ದ. ಎಲ್ಲ ಸಂಭಾಷಣೆಯನ್ನೂ ಕೇಳುತ್ತಿದ್ದ 420,

'ನಿನ್ನ ಅದೃಷ್ಟ ಖುಲಾಯಿಸಿತು ನಟೇಶ್. ಯಾವುದೋಭಾರಿ ಷಿಕಾರಿ ಬಿದ್ದಿದೆ. ನಿನ್ನನ್ನು ಬಿಡಿಸಿಕೊಂಡರೂ ಬಿಡಿಸಿಕೊಳ್ಳಬಹುದಯ್ಯ! ನೀನು ಸಾಹುಕಾರನಾದಾಗ ಈ ಬಡಪಾಯಿಯನ್ನು ಮರೆಯಬೇಡಮ್ಮಾ' ಎಂದ.

— ೭ —

ಒಂದು ಸಾವಿರ ರೂಪಾಯಿಗಳ ಚೆಕ್ಕನ್ನು ಕೈಯಲ್ಲಿ ಹಿಡಿದುಕೊಂಡು ನಟೇಶ ಅದನ್ನೇ ನೋಡುತ್ತಿದ್ದ. ತನ್ನ ಮದುವೆಯ ಬೆಲೆಯ ಹಣ ಅದು, ಯಾವಳೋ ಒಬ್ಬ ಅವಿವೇಕಿ ಶ್ರೀಮಂತಳು ಏನೋ ಒಂದು ಹುಚ್ಚು ಯೋಚನೆ ಯಿಂದ ಕೊಟ್ಟು ಹೋಗಿರುವುದು. ತಾನು ಕಷ್ಟಪಟ್ಟು ದುಡಿದುದಲ್ಲ; ತನ್ನ ತಂದೆತಾಯಿಗಳು ತನಗಾಗಿ ಬಿಟ್ಟುಹೋದುದಲ್ಲ; ತನ್ನ ಮೇಲಿನ ಅಭಿಮಾನ ದಿಂದ ಅಥವಾ ತನ್ನ ಕೆಲಸದ ಮೆಚ್ಚಿಕೆಯಿಂದ ಯಾರೂ ಬಳುವಳಿಯಾಗಿ ಕೊಟ್ಟುದಲ್ಲ. ತನ್ನ ಅಪೇಕ್ಷೆಯಿಲ್ಲದೆ, ಪ್ರಯತ್ನವಿಲ್ಲದೆ, ಶ್ರಮವಿಲ್ಲದೆ ಸುಲಭ ವಾಗಿ ಕೈಗೆ ಸಿಕ್ಕಿರುವ ಹಣ. ಇದನ್ನೇನು ಮಾಡಬೇಕು?

ತನ್ನ ತಂಗಿ ಇಂದಿರೆಯ ಪೋಷಣೆಗೆಂದು ಇದನ್ನವಳು ಕೊಟ್ಟು ಹೋದಳು. ಬಡವರಲ್ಲಿ ಅಷ್ಟು ದಯೆಯಿರುವವಳಾದರೆ ಸುಮ್ಮನೆ ಕೊಟ್ಟು ಹೋಗಲಿಲ್ಲವೇಕೆ? ಇಂದಿರೆಯನ್ನೇ ಕಂಡು ಅವಳ ದುಃಖವನ್ನು ಸಮಾಧಾನ ಗೊಳಿಸಿ ಅವಳಿಗೇ ಇದನ್ನು ಕೊಡಲಿಲ್ಲವೇಕೆ? ಈ ಹಣಕ್ಕೆ ಬದಲಾಗಿ ಅವ ಳನ್ನು ತಾನು ಮದುವೆಯಾಗಬೇಕೆಂದು ಬಯಸಿದಳೇಕೆ? ಸಾಯಲು ಸಿದ್ಧ

ನಾಗುತ್ತಿರುವ ಖೈದಿಯನ್ನು ಮದುವೆಯಾಗುವ ಅರ್ಥವೇನು? ತನ್ನಿಂದ ಅವಳಿಗೆ ಯಾವ ಸುಖವಾದರೂ ದೊರೆಯುವುದು ಹೋಗಲಿ ಒಂದು ದಿನ ಜೊತೆಯಲ್ಲಾದರೂ ಇರಬಹುದೆ, ಹತ್ತು ಮಾತುಗಳನ್ನು ಸ್ವತಂತ್ರವಾಗಿ ಆಡ ಬಹುದೆ? ಯಾವ ಸುಖಕ್ಕಾಗಿ ಅವಳು ಈ ಮದುವೆಯನ್ನು ಬಯಸಿ ಅದ ಕ್ಕಾಗಿ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟುಹೋದಳು? ಶ್ರೀಮಂತ ರಿಗೆ ತಮ್ಮ ಹಣವನ್ನು ಹೀಗೆ ಚೆಲ್ಲಾಡುವುದು ಒಂದು ಆಟವಾಗಿರಬೇಕು. ಖೈದಿಯೊಡನೆ ಮದುವೆಯಾದರೆ ಮನಸ್ಸಿನಲ್ಲಿ ಯಾವ ಭಾವನೆ ಹುಟ್ಟುತ್ತ ದೆಂದು ಅನುಭವಿಸುವುದಕ್ಕಾಗಿ ಅವಳು ನನ್ನನ್ನು ಕುರಿತು ಯೋಚಿಸಿರಬೇಕು.

ಅವಳು ಏನೇ ಕಾರಣದಿಂದ ಕೊಟ್ಟಿರಲಿ ಒಂದು ಸಾವಿರ ರೂಪಾಯಿ ಗಳಂತೂ ತನ್ನ ಕೈಯಲ್ಲಿವೆ. ಇದನ್ನು ಏನು ಮಾಡುವುದು?

ನಟೇಶನ ಮೊದಲ ಯೋಚನೆ ಅವನ ತಂಗಿಯಕಡೆ ಹೋಯಿತು. ಅವಳಿಗಾಗಿ ಹೆಸರುಹೇಳಿ ಕೊಟ್ಟ ಹಣ, ಅವಳಿಗೇ ಸೇರಿದರೆ ತಪ್ಪೇನು? ಬೇರೆ ಯಾವ ಆಧಾರವೂ ಇಲ್ಲದ ಅವಳಿಗೆ ಈ ಹಣದಿಂದ ಪ್ರಯೋಜನವಾಗ ಬಹುದು. ಈ ಹಣದಾಸೆಗೆ ಯಾರಾದರೂ ಸರಿಯಾದ ಗಂಡು ಅವಳನ್ನು ಮದುವೆಯಾದರೆ ಅವಳು ನಿಶ್ಚಿಂತೆಯಾಗಿರಬಹುದು.

ಆದರೆ ಹಾಗೇ ಆಗುತ್ತದೆಂಬ ನಂಬಿಕೆಯೇನು? ಒಳ್ಳೆಯ ಫಲವನ್ನು ಕೊಡಬೇಕಾದರೆ ಹಾಕಿದ ಬೀಜ ಒಳ್ಳೆಯದಾಗಿರಬೇಕು. ಬೇವಿನ ಬೀಜ ವನ್ನು ಬಿತ್ತಿ ಮಾವಿನ ಹಣ್ಣನ್ನು ಪಡೆಯುವುದು ಸಾಧ್ಯವೆ? ಇಂದಿರೆಗೆ ಒಳ್ಳೆಯ ಫಲವನ್ನು ಕೊಡಬೇಕಾದರೆ ಇದರಲ್ಲಿ ಅಂಥ ಉತ್ತಮಶಕ್ತಿ ಇರಬೇಕು, ಅಂಥ ಶಕ್ತಿಯಿದೆಯೇ? ಶ್ರೀಮಂತಳ ಕೈಯಿಂದ ಬರುತ್ತಿರುವ ಹಣವಿದು; ಎಷ್ಟು ಬಡಸಂಸಾರಗಳ ಕಣ್ಣೀರು ಇದರಲ್ಲಿ ಸೇರಿದೆಯೋ; ಎಷ್ಟುಜನ ಬಡ ಮುತ್ತೈದೆಯರ ಮಾಂಗಲ್ಯವನ್ನು ಈ ಹಣ ಕಡಿದಿದೆಯೋ. ಪಾಪ ಕೂಪ ದಿಂದ ಅನ್ಯಾಯಾರ್ಜಿತವಾಗಿ ಬಂದಿರುವ ಈ ಹಣ ಇಂದಿರೆಗೆ ಒಳ್ಳೆಯದನ್ನು ಹೇಗೆ ಮಾಡೀತು? ಇದರಿಂದ ಅವಳಿಗೆ ಅನಿಷ್ಟ ಸಂಭವಿಸುವುದಾದರೆ!

ಬೇಡ ಈ ಕೆಟ್ಟಹಣವನ್ನು ಅವಳ ಕೈ ಮುಟ್ಟಿಸುವುದು ಬೇಡ. ಕೆರೆಯ ನೀರು ಕೆರೆಗೆ ಸೇರಲಿ. ಬಡವರಿಂದ ಅನಾಥರಿಂದ ಬಂದು ಸೇರಿದ ಹಣ ಅವರಿಗೇ ವಿನಿಯೋಗವಾಗಲಿ.

ಹೀಗೆಂದು ನಿರ್ಧರಿಸಿ ನಟೇಶನು ಅಲ್ಲಿ ಪಹರೆ ತಿರುಗುತ್ತಿದ್ದ ಸಿಪಾಯನ್ನು ಕೂಗಿ ತಾನು ಜೈಲಿನ ಅಧಿಕಾರಿಗಳನ್ನು ನೋಡಬೇಕೆಂದು ಹೇಳಿದ. ಅವನನ್ನು ಕಂಡರೆ ಕನಿಕರದಿಂದಿದ್ದ ಅಧಿಕಾರಿಯು ಕೂಡಲೇಬಂದು ಸಮಾಚಾರವೇನೆಂದು ಕೇಳಿದ.

ವಸಂತಳು ಮದುವೆಯ ಮಾತನ್ನಾಡಿದುದೂ ಒಂದು ಸಾವಿರ ರೂಪಾಯಿಗಳ ಚೆಕ್ಕನ್ನು ನಟೇಶನಿಗೆ ಕೊಟ್ಟುದುದೂ ಅಧಿಕಾರಿಗೆ ತಿಳಿದಿತ್ತು. ಅವಳು ಹಿಂತಿರುಗುವಾಗ್ಗೆ ಅಧಿಕಾರಿಯನ್ನು ಮತ್ತೆ ಕಂಡು ತನ್ನ ಭೇಟಿಯ ಉದ್ದೇಶವನ್ನು ಹೇಳಿ ತಾನು ನಟೇಶನನ್ನು ಮದುವೆಯಾಗುವುದಕ್ಕೆ ಅವಕಾಶ ಕೊಡಬೇಕೆಂದೂ ಮೂರನೆಯ ದಿನ ತಾನು ರಿಜಿಸ್ಟ್ರಾರ್‌ರವರನ್ನು ಅಲ್ಲಿಗೇ ಕರೆತಂದು 'ಸಿವಿಲ್ ಮ್ಯಾರಿಯೇಜಸ್ ಆಕ್ಟ್' ಪ್ರಕಾರ ಮದುವೆಯಾಗುವುದಾಗಿಯೂ ಹೇಳಿದ್ದಳು. ವೈಯುಕ್ತಿಕವಾಗಿ ಅಧಿಕಾರಿಯು ಅವಳಿಗೆ ಕೆಲವು ಬುದ್ಧಿ ಮಾತುಗಳನ್ನು ಹೇಳಿ ಅವಳ ನಿರ್ಧಾರವನ್ನು ಬದಲಾಯಿಸಲಾರದೆ ಅದಕ್ಕೆ ಒಪ್ಪಿಗೆ ಕೊಟ್ಟಿದ್ದ. ಈಗ ನಟೇಶನು ಹೇಳಿಕಳಿಸಿದಾಗ ಅದೇ ಸಂಬಂಧದಲ್ಲಿ ಏನೋ ಮಾತಿರಬೇಕೆಂದು ತಿಳಿದುಬಂದಿದ್ದ.

ಸ್ವಲ್ಪ ಹೊತ್ತಿಗೆ ಮುಂಚೆ ವಸಂತಳು ತನ್ನೊಡನೆ ಮಾತನಾಡಿದಾಗ ಅಧಿಕಾರಿಯ ಮೆದುಳು ಅರ್ಧ ಕೆಟ್ಟಿತ್ತು. ಇದೆಂತಹ ಹುಚ್ಚು ಇವಳದು ಎಂದುಕೊಂಡು ಆ ಹುಚ್ಚಿನ ಆಳವನ್ನು ತಿಳಿಯಲಾರದೆ ತನ್ನ ತಲೆ ಕೆಡಿಸಿಕೊಂಡಿದ್ದ. ಈಗ ನಟೇಶನು ಆ ಹಣ ತನಗೆ ಬೇಡವೆಂದೂ ತಮ್ಮ ಕೇರಿಯಲ್ಲಿರುವ ಅನಾಥ ಪೋಷಕ ಸಂಘಕ್ಕೆ ಅದನ್ನು ಕಳಿಸಿಕೊಡಿರೆಂದೂ ಕೇಳಿದಾಗ ಅವನ ತಲೆ ಪೂರಾ ಕೆಟ್ಟುಹೋಯಿತು. ತಾನೇನು ಜೈಲಿನ ಅಧಿಕಾರಿಯಾಗಿದ್ದೇನೋ ಅಥವಾ ದಾರಿತಪ್ಪಿ ಭ್ರಾಂತಿಯಿಂದ ಹುಚ್ಚರ ಆಸ್ಪತ್ರೆಯಲ್ಲಿದ್ದೇನೋ ಎಂದು ಯೋಚಿಸಿದ. ವಸಂತಳ ನಡತೆ, ನಟೇಶನ ನಡತೆ ಎರಡೂ ಅವನಿಗೆ ಅರ್ಥವಾಗಲಿಲ್ಲ. ಇವರಿಬ್ಬರ ನಡುವೆ ಏನೋ ರಹಸ್ಯವಿರಬಹುದೆ, ಬಸಪ್ಪನ ಕೊಲೆಗೂ ಇದಕ್ಕೂ ಏನಾದರೂ ಸಂಬಂಧವಿರಬಹುದೆ, ನಟೇಶನನ್ನು ಅವಳು ನೋಡುತ್ತಿರುವುದು ಇದು ಮೊದಲನೆಯ ಸಲವೆ ಅಥವಾ ಏನಾದರೂ ಹಿಂದಿನ ಸಂಬಂಧವಿದೆಯೆ ? ಈಗಿನ ಕಾಲದ ಹುಡುಗಿ, ವಿದ್ಯಾವತಿ, ಶ್ರೀಮಂತಳು, ಯಾರ ಅಡ್ಡಿ ಆತಂಕ

ಗಳೂ ಇಲ್ಲದೆ ಬೆಳೆದವಳು; ಹೊರಗಿನ ಜನರಿಗೆ ತಿಳಿಯದಂತೆ ಏನೇನು ನಡೆದಿದೆಯೋ ಹೇಗೆ ಹೇಳುವುದು. ಆದರೆ ಇವನಿಗೆ ಒಂದುಸಾವಿರ ರೂಪಾಯಿ ಗಳನ್ನೇಕೆ ಅವಳು ಕೊಟ್ಟಳು, ಇವನು ತನ್ನ ತಂಗಿಗೆ ಕೊಡದೆ ಯಾವುದೋ ಧರ್ಮಸಂಸ್ಥೆಗೆ ಏಕೆ ಕಳಿಸುತ್ತಿದಾನೆ; ಇವರ ಮದುವೆಗೂ ಆ ಸಂಸ್ಥೆಗೂ ಏನಾದರೂ ಸಂಬಂಧವಿದೆಯೆ'? ಹೀಗೆ ನೂರಾರು ಪ್ರಶ್ನೆಗಳು ಬಿಳಿಯ ತಲೆಯ ಆ ಅಧಿಕಾರಿಯ ಬುದ್ಧಿಯನ್ನು ಕೆಡಿಸುತ್ತಿದ್ದುವು. ಅವುಗಳಿಗೆ ಸಮಾಧಾನ ದೊರೆಯದೆ ತನ್ನ ಕರ್ತವ್ಯವೊಂದರಕಡೆಗೆ ಗಮನವಿಟ್ಟು ಖೈದಿಯುಕೊಟ್ಟ ಚೆಕ್ಕನ್ನು ತೆಗೆದುಕೊಂಡು ಅದರಹಿಂದೆ ಅವನ ರುಜು ಹಾಕಿಸಿ ಚಿನ್ನದಗಣಿಯ ಕೂಲಿಗಾರರ ಕೇರಿಯಲ್ಲಿದ್ದ ಅನಾಥ ಪೋಷಕ ಸಂಘಕ್ಕೆ ಕಳುಹಿಸಿದ.

ಎಲ್ಲವನ್ನೂ ನೋಡುತ್ತಿದ್ದ 420ನೆಯ ಖೈದಿಯು ನಟೇಶನು ಸಾಮಾನ್ಯನಲ್ಲವೆಂದು ಮೆಚ್ಚಿಕೊಂಡ.

— ೮ —

ವಸಂತಳು ತನ್ನ ಮಾತಿನಂತೆ ಮಾರನೆಯದಿನ ಬೆಳಗ್ಗೆ ಎಂಟು ಗಂಟೆಗೆ ರಿಜಿಸ್ಟ್ರಾರರನ್ನೂ ಅವರ ಗುಮಾಸ್ತೆಯನ್ನೂ ಕರೆದುಕೊಂಡು ಬಂದಳು. ಜೈಲಿನ ಅಧಿಕಾರಿಯ ಕೊಟಡಿಯಲ್ಲಿ ಮದುವೆಗೆ ಸಿದ್ಧತೆ ನಡೆಯಿತು. ಅಧಿಕಾರಿಯ ಮೇಜಿನ ಸುತ್ತ ನಾಲ್ಕೈದು ಕುರ್ಚಿಗಳನ್ನು ಹಾಕಿದರು. ಮಧ್ಯದ ಕುರ್ಚಿ ಯಲ್ಲಿ ರಿಜಿಸ್ಟ್ರಾರ್‌ರವರು ಕುಳಿತು ಗುಮಾಸ್ತೆಯು ತನ್ನ ಮುಂದಿಟ್ಟ ರಿಜಿಸ್ಟ ರನ್ನು ತೆರೆದು ವಧೂವರರ ವಿಳಾಸಗಳು ವಯಸ್ಸು ಇತ್ಯಾದಿ ವಿವರಗಳನ್ನು ಬರೆಯಲು ಸಿದ್ಧತೆ ಮಾಡಿಕೊಂಡು ವರನನ್ನು ಕರೆತರಹೇಳಿದರು. ಜೈಲು ಅಧಿಕಾರಿಯ ಅಪ್ಪಣೆಯಂತೆ ಕಾವಲ ಸಿಪಾಯಿಯೊಬ್ಬನು ನಟೇಶನನ್ನು ಕರೆ ತರಲು ಒಳಕ್ಕೆ ಹೋದ.

ನಟೇಶನ ಮದುವೆಯ ಸುದ್ದಿಯು ಅದುವರೆಗೆ ಜೈಲಿನಲ್ಲಿದ್ದ ಖೈದಿಗಳಿಗೆಲ್ಲ ತಿಳಿದಿತ್ತು. ಖೈದಿಗಳ ಇತಿಹಾಸದಲ್ಲಿ ಇದೇ ಮೊದಲು ಮತ್ತು ಬಹುಶಃ ಇದೇ ಕೊನೆಯದಾಗಿ ಇಂಥ ಮದುವೆ ನಡೆಯುತ್ತಿರುವುದು. ಅವರಿಗೆಲ್ಲಾ ಏನೋ ಒಂದು ರೀತಿಯ ಸಂತೋಷ. 420ನೆಯ ಖೈದಿಯಂತೂ ಹಿಗ್ಗಿ

ಹೀರೇಕಾಯಿಯಾಗಿದ್ದ. ನಟೇಶನ ಮದುವೆಯನ್ನು ಜೈಲಿನ ಪ್ರಾರ್ಥನಾ ಮಂದಿರದಲ್ಲಿ ನಡೆಸಬೇಕೆಂದೂ ಎಲ್ಲ ಖೈದಿಗಳನ್ನೂ ಮದುವೆಗೆ ಕರೆಯ ಬೇಕೆಂದೂ ಜೈಲು ಅಧಿಕಾರಿಯನ್ನು ಕೇಳಿಕೊಂಡಿದ್ದ. ಅದು ಸಾಧ್ಯವಿಲ್ಲ ವೆಂದು ತಿಳಿದಮೇಲೆ ಮದುವೆಯಾದ ಗಂಡು ಹೆಣ್ಣನ್ನು ಎಲ್ಲರೂ ನೋಡು ವಂತೆ ಒಂದುಸಲ ಜೈಲಿನ ಎಲ್ಲ ಸ್ಥಳಗಳಿಗೂ ಕರೆತರಬೇಕೆಂದು ಕೇಳಿದ. ಅವರ ಸಂತೋಷವನ್ನು ಮುರಿಯಲಾರದೆ ಆದರೆ ಅವರ ಕೋರಿಕೆಯನ್ನು ಈಡೇರಿಸಲಾರದೆ ಅಧಿಕಾರಿಯು ಅವನಿಗೆ ಸಮಾಧಾನ ಹೇಳಿದ್ದ. ತಮ್ಮ ಈ ಬಯಕೆ ಯಾವುದಕ್ಕೂ ಅವಕಾಶ ಸಿಕ್ಕದೆಹೋದುದರಿಂದ ಖಿನ್ನರಾದ ಖೈದಿ ಗಳು ತಮ್ಮ ಪರವಾಗಿ ಗಂಡು ಹೆಣ್ಣುಗಳಿಗೆ ಎರಡು ಹೂವಿನ ಹಾರಗಳ ನ್ನಾದರೂ ಕೊಡಬೇಕೆಂದು ಕೇಳಿಕೊಂಡರು. ಅಧಿಕಾರಿಯು ಅದಕ್ಕೆ ಒಪ್ಪಿ ಕೊಂಡು ತಾನೇ ಹಾರಗಳನ್ನು ತರಿಸುವುದಾಗಿಯೂ ಖೈದಿಗಳ ಪ್ರತಿನಿಧಿಯಾಗಿ ಅವುಗಳನ್ನು ವಧೂರರಿಗೆ ಕೊಡುವುದಾಗಿಯೂ ಹೇಳಿದ್ದ. ಹಾರಗಳ ಖರ್ಚನ್ನು ತಾವೇ ಕೊಡುತ್ತೇವೆಂದು ಖೈದಿಗಳು ಹೇಳಿದರು ; ಅಧಿಕಾರಿಯು ಅದಕ್ಕೊಪ್ಪ ಲಿಲ್ಲ. ಕಡೆಗೆ ಯಾವಯಾವ ಮಾತುಗಳೋ ಚರ್ಚೆಯಾಗಿ ಮದುವೆಯದಿನ ಮಧ್ಯಾಹ್ನದ ಊಟಕ್ಕೆ ಪಾಯಸ ಮಾಡಿಸಿ ಎಲ್ಲ ಖೈದಿಗಳಿಗೂ ಬಡಿಸ ಬೇಕೆಂದೂ ಅದರ ಖರ್ಚನ್ನು ಸರ್ಕಾರದಮೇಲೆ ಹಾಕದೆ ತಾವೇ ವಹಿಸಿ ಕೊಳ್ಳುವುದಾಗಿಯೂ ಖೈದಿಗಳು ಹಟಹಿಡಿದರು. ಇದು ಕಾನೂನಿಗೆ ಸ್ವಲ್ಪ ಮಟ್ಟಿಗೆ ವಿರೋಧವಾಗಿದ್ದರೂ ಅವರ ಸಂತೋಷಕ್ಕೆ ಸಾಕಷ್ಟು ಅಡ್ಡಿ ಹಾಕಿದ್ದ ಅಧಿಕಾರಿಯು ಆ ಮಾತಿಗೆ ಒಪ್ಪಿದ್ದ. ಸಮಯ ನಿರೀಕ್ಷೆಮಾಡುತ್ತಿದ್ದ ಖೈದಿ ಗಳು ಮದುವಣಿಗನನ್ನು ನೋಡಲು ಆತುರರಾಗಿ ತಮ್ಮತಮ್ಮ ಕೋಣೆಗಳ ಬಾಗಿಲುಗಳ ಬಳಿನಿಂತು ಸಲಾಕೆಗಳ ಮಧ್ಯದಿಂದ ನೋಡುತ್ತಿದ್ದರು.

ನಟೇಶನನ್ನು ಕರೆತರುತ್ತಿರುವ ಈ ವೇಳೆಯಲ್ಲಿ ವಸಂತಳ ಮೆದುಳು ಹಲವು ಕಾಲ್ಪನಿಕ ಚಿತ್ರಗಳನ್ನು ಕಾಣುತ್ತಿತ್ತು. ಜೀವನದಲ್ಲಿ ಅತಿಮುಖ್ಯ ವಾದೊಂದು ಘಟನೆ ಇನ್ನು ಕೆಲವು ನಿಮಿಷಗಳಲ್ಲಿ ನಡೆದುಹೋಗುವುದರಲ್ಲಿತ್ತು. ಹೆಣ್ಣಿನ ಜೀವನದಲ್ಲಂತೂ ಅದು ನಡೆಯುವುದು ಒಂದೇಸಲ. ಈ ಸಮಾ ರಂಭಕ್ಕಾಗಿ ಜನ ಪಡುವ ಸಡಗರವೆಷ್ಟು, ಸಂಭ್ರಮವೆಷ್ಟು ; ವೈಭವ ವಿಲಾಸ ಗಳೆಷ್ಟು ? ತನ್ನ ತಾತನು ಬದುಕಿದ್ದರೆ ತನ್ನ ಮದುವೆ ಹೇಗೆ ನಡೆಯುತ್ತಿತ್ತು !

ಮದುವೆಯಮಾತು ಬಂದಾಗ ತನ್ನ ಸಾಕುತಾಯಿ ಗೌರಮ್ಮನಾಡುತ್ತಿದ್ದ ಮಾತುಗಳೇನು? ತಮ್ಮ ಶ್ರೀಮಂತಿಕೆಗೆ ತಕ್ಕ ವೈಭವದಿಂದ ಮದುವೆಯಾಗ ಬೇಕು, ಮಂತ್ರಿಗಳು ದೊಡ್ಡದೊಡ್ಡ ಅಧಿಕಾರಿಗಳು ರಾಜಸನ್ಮಾನಿತರು ಶ್ರೀಮಂತರು ಕಾಲೇಜಿನ ತನ್ನ ಗೆಳತಿಯರು ಗೆಳೆಯರು ಉಪಾಧ್ಯಾಯರು ಸಹಸ್ರ ಸಹಸ್ರ ಸಂಖ್ಯೆಯ ಆಹ್ವಾನಿತರು ಮದುವೆಗೆ ಬರಬೇಕು, ಎಂಟು ದಿನಗಳು ಸಂಗೀತ ನಾಟ್ಯಗಳ ವೃಷ್ಟಿಯಾಗಬೇಕು, ಹತ್ತಾರುಸಾವಿರ ಜನರು ಊಟಮಾಡಿ ದಣಿಯಬೇಕು; ತನಗೆ ಬಳುವಳಿಯಾಗಿ ಬರುವ ಉಡುಗೊರೆ ಗಳ ರಾಶಿಯೇ ಸಾಮಾನ್ಯರಿಗೆ ಒಂದು ಐಶ್ವರ್ಯವಾಗುವಷ್ಟು; ತನ್ನ ಮದುವೆ ಯಲ್ಲಿ ಕೊಡುವ ತಾಂಬೂಲವೊಂದರಲ್ಲೇ ಸಾಮಾನ್ಯಜನರ ಮದುವೆ ಮಾಡ ಬಹುದು; ತಮ್ಮ ಮೆರವಣಿಗೆಯು ಮೈಸೂರು ಮಹಾರಾಜರ ಮನೆಯ ಮೆರವಣಿಗೆಯಂತೆ ನಡೆಯುತ್ತದೆ. ಈ ಮಾತುಗಳನ್ನು ಕೇಳುವಾಗ ಮನ ಸ್ಸೆಷ್ಟು ಹಿಗ್ಗುತ್ತಿತ್ತು? ಇಷ್ಟು ಸುಖದಾಯಕವಾದ ರಸನಿಮಿಷಗಳನ್ನೆದುರು ನೋಡಲು ಮನಸ್ಸೆಷ್ಟು ಹಾತೊರೆಯುತ್ತಿತ್ತು? ಕನ್ನಿಕಾವಸ್ಥೆಯಿಂದ ಗೃಹಿಣಿಯ ಪಟ್ಟವೇರುವ ಈ ಸಮಾರಂಭವು ಎಷ್ಟು ಹಿತವಾದುದು, ಹರ್ಷಮಯ ವಾದುದು? ಆ ನಿರೀಕ್ಷೆಯೆಲ್ಲ ಈಗೇನಾಯಿತು? ಅರಮನೆಯಲ್ಲಿ ನಡೆಯ ಬೇಕಾಗಿದ್ದ ತನ್ನ ಮದುವೆ ಸೆರೆಮನೆಯಲ್ಲಿ ನಡೆಯುತ್ತಿದೆ. ತಾನು ಏನೋ ಅವಿವೇಕ ಕೆಲಸವನ್ನು ಮಾಡುತ್ತಿದ್ದೇನೆಂದು ವಸಂತಳಿಗೆ ತೋರುತ್ತಿತ್ತು. ಅವಳ ತಲೆ ದಿಮ್ಮೆಂದು ತಿರುಗತೊಡಗಿತು. ರಿಜಿಸ್ಟ್ರಾರ್‌ರವರು ಏನೋ ಪ್ರಶ್ನೆ ಹಾಕಿದರು; ಅದೇನೆಂದು ತಿಳಿಯದೆ ವಸಂತಳು "ಹೌದು" ಎಂದಳು. ಗುಮಾ ಸ್ತೆಯು ಕೈಯಲ್ಲಿ ಪೇನಾವನ್ನು ಕೊಟ್ಟು ರುಜುಹಾಕಿರೆಂದು ರಿಜಿಸ್ಟರನ್ನು ಮುಂದಿಟ್ಟ. ಯಂತ್ರದ ಬೊಂಬೆಯಂತೆ ವಸಂತ ರುಜು ಹಾಕಿದಳು. ತಾನು ಏನು ಮಾಡುತ್ತಿದ್ದೇನೆನ್ನುವುದರ ಅರಿವಾಗುವುದರೊಳಗೆ ವಸಂತಳ ಕೊರಳಲ್ಲಿ ಹಾರಬಿದ್ದಿತ್ತು; ಅವಳು ನಟೇಶನ ಕೊರಳಿಗೆ ಹಾರ ಹಾಕಿದ್ದಳು. ರಿಜಿಸ್ಟ್ರಾರ್ ರವರು ವಧೂವರರಿಗೆ ಅಭಿನಂದನೆಗಳನ್ನು ಹೇಳಿದರು.

ಅದುವರೆಗೆ ಗುಮಾಸ್ತೆಯು ತಯಾರಿಸಿದ್ದ ಮದುವೆಯ ಸರ್ಟಿಫಿಕೇಟು ಗಳ ಎರಡು ಪ್ರತಿಗಳನ್ನು ರುಜುಮಾಡಿ ದಂಪತಿಗಳ ಕೈಗೆಕೊಟ್ಟು ರಿಜಿಸ್ಟ್ರಾರರು ನಗುಮುಖದಿಂದ ಅಲ್ಲಿಂದ ಹೊರಟುಹೋದರು.

ಮದುವೆಯಾದ ಹೆಣ್ಣು ಏನೋ ಮಹಾಪರಾಧ ಮಾಡಿದವಳಂತೆ, ಜನರಿಗೆ ಮುಖ ತೋರಿಸಲಾರದವಳಂತೆ ತಟ್ಟನೆ ಮೇಲಕ್ಕೆದ್ದು ಸರಸರನೆ ಹೊರಟು ಬಾಗಿಲಬಳಿ ಬಂದಮೇಲೆ ನೆನಪು ಮಾಡಿಕೊಂಡು ಹಿಂತಿರುಗಿ ಜೈಲು ಅಧಿಕಾರಿಗೆ ಅಲ್ಲಿಂದಲೇ ವಂದನೆಗಳನ್ನು ಹೇಳಿ ನಾಲ್ಕುಹೆಜ್ಜೆಯಲ್ಲಿ ತನ್ನ ಕಾರನ್ನು ಸೇರಿ ಹೊರಟುಬಿಟ್ಟಳು.

ಮದುವೆಯ ಸಂತೋಷವನ್ನನುಭವಿಸುವ ಸ್ಥಿತಿಯನ್ನು ಮೀರಿದ್ದ ನಟೇಶನು ತನ್ನ ಕೋಣೆಯನ್ನು ಸೇರಲು ಹಿಂತಿರುಗಿದ. ಕೊರಳಲ್ಲಿ ಹಾರ ಹಾಕಿಕೊಂಡು ಸಂತೋಷದ ರೇಖೆಯನ್ನೇ ಕಾಣದೆ ಬಾಡಿದ ಮುಖದಿಂದ ಕಾಲೆಳೆಯುತ್ತ ಹೋಗುತ್ತಿದ್ದ ತಮ್ಮ ಸಹವಾಸಿಯನ್ನು ಕಂಡು ಖೈದಿಗಳು ಯಾವುದೂ ಅರ್ಥವಾಗದೆ ಮರುಕ ತೋರಿದರು.

ಈ ಘಟನೆಯು ಮುಂದೆ ಯಾವುದೋ ಬೇರೊಂದು ಘಟನೆಗೆ ಪೀಠಿಕೆಯೆಂದೂ ಸೋಮವಾರದೊಳಗೇ ಅದೇನೆಂದು ತಿಳಿಯಬಹುದೆಂದೂ ಜೈಲು ಅಧಿಕಾರಿಯು ಊಹಿಸಿದ.

ಕಾರು ಕಬ್ಬನ್‌ಪಾರ್ಕಿನೊಳಕ್ಕೆ ಬರುವಷ್ಟರಲ್ಲಿ ವಸಂತಳು ತನ್ನ ಮನಸ್ಸನ್ನು ಹಿಡಿತಕ್ಕೆ ತರತೊಡಗಿದಳು ; ಪಕ್ಕದಲ್ಲಿಟ್ಟಿದ್ದ ಹಾರವನ್ನು ಬೀದಿಗೆಸೆದು ತಾವು ಮಾಮೂಲಾಗಿ ನಿಲ್ಲಿಸುತ್ತಿದ್ದ ಕಡೆಗೆ ಕಾರನ್ನೊಯ್ದು ನಿಲ್ಲಿಸಿ ಹೋಟೇಲಿನ ಮಾಣಿಗೆ ಕಾಫಿಯನ್ನು ತರಹೇಳಿದಳು. ಸರಿಯಾಗಲಿ ತಪ್ಪಾಗಲಿ ತಾನು ಉದ್ದೇಶಿಸಿದ ಕೆಲಸವನ್ನಂತೂ ನಡೆಸಿದ್ದಾಯಿತು. ತನ್ನ ಮದುವೆಯಾದ ಸರ್ಟಿಫಿಕೇಟು ಕೈಗೆಬಂತು. ಅದರ ಕೆಲಸ ತನ್ನನ್ನು ತನ್ನ ತಾತನ ಉಯಿಲಿನ ಪ್ರಕಾರ ಆಸ್ತಿಯ ಅಧಿಕಾರಿಣಿಯನ್ನಾಗಿ ಮಾಡುವುದಷ್ಟೇ. ತಾನಾಗಿ ಅದನ್ನು ಅವರಿವರಲ್ಲಿ ಪ್ರಚಾರಮಾಡಿ ಇಲ್ಲದ ಗಲಾಟೆಗೆ ಗುರಿಯಾಗುವುದೇಕೆ? ಸೋಮವಾರ ಕಳೆಯುವವರೆಗೆ ಏನೂ ಪುಕಾರಮಾಡದೆ ಇದ್ದು ಅನಂತರ ಟ್ರಸ್ಟಿಗಳಿಗೆ ಇದನ್ನು ತಿಳಿಸಬೇಕು.

ಸೋಮವಾರದ ನೆನಪು ಬರುತ್ತಲೇ ಅಂದು ತಾನು ವಿಧವೆಯಾಗುವೆನೆಂಬ ಅಪ್ರಿಯ ಸತ್ಯವು ಮನಸ್ಸಿಗೆ ಬಂತು. ಎರಡು ಮಾತಾಡಲಿಲ್ಲ ಎರಡು ಗಳಿಗೆ ಜೊತೆಯಲ್ಲಿರಲಿಲ್ಲ, ಕಡೆಗೆ ಕಣ್ಣುತುಂಬ ನೋಡಲಿಲ್ಲ, ನೆನಸಿಕೊಂಡರೆ ಅವನ ರೂಪವು ಸಹ ಮನಸ್ಸಿಗೆ ಬರದು ; ಆದರೂ ಅವನು ತನ್ನ ಗಂಡ.

ಎಲ್ಲಿಯೋ ಹುಟ್ಟಿ ಬೆಳೆದವನು, ತನ್ನ ಯಾವ ಸುಖಸಂತೋಷಗಳಿಗೂ ಏನೂ ಸಂಬಂಧಪಡದವನು, ಪುನಃ ಎಂದೆಂದಿಗೂ ತಾನು ನೋಡಲಾರದ ಅವನು ಗಂಡನೆಂಬ ಎರಡಕ್ಷರವನ್ನು ಪಡೆದಮಾತ್ರಕ್ಕೇ ತನ್ನ ಮನಸಿನಮೇಲೆ ಎಂಥ ಅಧಿಕಾರ ಮಾಡುತ್ತಿದ್ದಾನೆ! ತನ್ನ ಜೀವನವನ್ನು ಎಷ್ಟು ಬದಲಾಯಿಸು ತ್ತಿದ್ದಾನೆ! ಮನಸ್ಸಿನ ದೌರ್ಬಲ್ಯವಿದು; ಅದನ್ನು ನಿಗ್ರಹಿಸಬೇಕು. ಬೇರೆ ಕೆಲಸವಿಲ್ಲದಿದ್ದರೆ ಮನಸಿಗೆ ಇಲ್ಲದ ಯೋಚನೆಗಳು ಬರುತ್ತವೆ. ಅದರಿಂದ ಯಾವ ಯೋಚನೆಗೂ ಎಡೆಗೊಡದಷ್ಟು ಕೆಲಸವನ್ನು ತಾನಿಟ್ಟುಕೊಳ್ಳಬೇಕು. ಸೋಮವಾರ ಕಳೆಯುವವರೆಗೂ ಈ ಮದುವೆ, ಈ ಗಂಡ ಇದಾವುದೂ ತನ್ನ ನೆನಪಿಗೆ ಬರದಂತೆ ಮಾಡಬೇಕು.

ವಸಂತಳಿಗೆ ಒಂದು ಉಪಾಯ ಹೊಳೆಯಿತು. ತಾನು ಹದಿನೆಂಟನೆಯ ವಯಸ್ಸನ್ನು ದಾಟಿದ ಸಮಾರಂಭವಿನ್ನೂ ನಡೆದಿರಲಿಲ್ಲ, ಆ ದಿನ ಮನೆಯವರು ಮಾತ್ರ ತನಗೆ ಎಣ್ಣೆ ನೀರು ಹಾಕಿ ಹಬ್ಬದಅಡಿಗೆ ಮಾಡಿದ್ದರು. ತನ್ನ ಹುಟ್ಟಿದ ಹಬ್ಬದ ಆಚರಣೆಗೆಂದು ತನ್ನ ಸ್ನೇಹಿತರನ್ನೆಲ್ಲ ಏಕೆ ಕರೆಯಬಾರದು? ಸೋಮವಾರ ಅದನ್ನಿಟ್ಟುಕೊಂಡರೆ ಅನುಕೂಲ; ಇನ್ನು ಐದು ದಿನವಿದೆ. ಆಹ್ವಾನ ಪತ್ರಿಕೆಗಳನ್ನು ಅಚ್ಚು ಮಾಡಿಸುವುದು ಮೊದಲುಗೊಂಡು ಅಂದಿನ ಸಮಾರಂಭದ ಔತಣದವರೆಗೆ ತನಗೆ ವಿರಾಮವೇ ಇಲ್ಲದಷ್ಟು ಕೆಲಸವಿರುತ್ತದೆ. ಇದೇ ಸರಿಯೆಂದು ವಸಂತಳಿಗೆ ತೋರಿತು.

ಮಾಣಿಯು ತಂದುಕೊಟ್ಟ ಕಾಫಿಯನ್ನು ಅದುವರೆಗೆ ಕುಡಿದಾಗಿತ್ತು. ಅದರ ಹಣಕೊಟ್ಟು ಸಂತೋಷದಿಂದ ತನ್ನಷ್ಟಕ್ಕೆ ಹಾಡಿಕೊಳ್ಳುತ್ತ ಮನೆಗೆ ಬಂದು ತನ್ನ ಓದುವ ಕೋಣೆಯಲ್ಲಿನ ಮೇಜಿನಲ್ಲಿ ಮದುವೆಯ ಸರ್ಟಿಫಿಕೇಟನ್ನು ಭದ್ರಪಡಿಸಿ ಗೌರಮ್ಮನನ್ನು ಕರೆಯುವಂತೆ ಸೇವಕನಿಗೆ ಹೇಳಿದಳು.

— ೯ —

ಹುಟ್ಟಿದ ಹಬ್ಬದ ಸಮಾರಂಭಕ್ಕಾಗಿ ಸಿದ್ಧತೆಗಳು ಬಹು ಜೋರಿನಿಂದ ನಡೆಯತೊಡಗಿದುವು. ಹಿಂದಿನ ಎಲ್ಲ ಹುಟ್ಟಿದ ಹಬ್ಬಗಳಿಗಿಂತ ಇದರಲ್ಲಿ ಒಂದು ವಿಶೇಷವಿತ್ತು. ಕಾನೂನಿನ ದೃಷ್ಟಿಯಲ್ಲಿ ಇಂದು ತಾನು ಬಾಲ್ಯವನ್ನು ದಾಟಿ ಯೌವನದ ಹೊಸ್ತಿಲನ್ನು ಮೆಟ್ಟಿದ್ದಳು. ತಾತನು ತನ್ನ ಉಯಿಲಿನಲ್ಲಿ ಬರೆದ

ಆ ಹುಚ್ಚು ನಿಬಂಧನೆಯೊಂದಿಲ್ಲದಿದ್ದರೆ ಇಂದೇ ತಾನು 32 ಲಕ್ಷ ರೂಪಾಯಿಗಳ ಆಸ್ತಿಗೆ ಅಧಿಕಾರಿಣಿ. ಜನರ ದೃಷ್ಟಿಯಲ್ಲಿ ತಾನಾಗಲೇ ಆ ಆಸ್ತಿಯನ್ನು ಕೈಗೆ ತೆಗೆದುಕೊಂಡಂತೆಯೇ ಸರಿ. ಇಂದಿನಿಂದ ತಾನು ಸ್ವತಂತ್ರಳು, ಸ್ವೇಚ್ಛಾನುವರ್ತಿ; ಯಾರ ಪೋಷಣೆಗೂ, ಯಾರ ಅಧೀನತೆಗೂ ಒಳಪಟ್ಟ ಹೆಣ್ಣಲ್ಲ. ಅದನ್ನು ಈ ಸಮಾರಂಭ ಜಗತ್ತಿಗೆ ಸಾರುತ್ತದೆ.

ಈ ಸಮಾರಂಭದ ಕರೆಯೋಲೆಯು ಕೈಗೆ ಸೇರಿದಾಗ ವಸಂತಳ ಮಿತ್ರರು ಕೆಲವರು ಇನ್ನೊಂದು ಯೋಚನೆಯನ್ನೂ ಮಾಡಿದರು. ಕರೆಯೋಲೆ ಮುದ್ರಿತವಾಗಿರುವ ರೀತಿಯನ್ನೂ ವೈಭವವನ್ನೂ ಕಂಡು ಇದು ಬರಿಯ ಹುಟ್ಟಿದ ಹಬ್ಬದ ಸಮಾರಂಭವೇ ಆಗಿರಲಾರದೆಂದೂ ಬಹುಶಃ ಅದೇ ದಿನ ವಸಂತ ಮತ್ತು ಸ್ವಾಮಿಯರ ಮದುವೆಯ ನಿಶ್ಚಿತಾರ್ಥವಾಗಬಹುದೆಂದೂ ಟೀಕೆ ಮಾಡಿದರು. ಕರೆಯಲು ಅವಳು ಎಷ್ಟು ಉತ್ಸಾಹ ತೋರಿದ್ದಳೋ ಅಷ್ಟೇ ಆತುರದಿಂದ ಸಮಾರಂಭಕ್ಕೆ ಹೋಗಲು ಅವರೂ ಸೋಮವಾರವನ್ನಿದಿರು ನೋಡುತ್ತಿದ್ದರು.

ಇಷ್ಟು ಉತ್ಸವಕ್ಕೆ ಕಾರಣನಾದ ನಟೇಶ ಜೈಲಿನ ತನ್ನ ಕೋಣೆಯಲ್ಲಿ ಕ್ಷಣಗಳನ್ನೆಣಿಸುತ್ತಿದ್ದ. ಇದುವರೆಗೆ ತಾನು ಒಂದು ಜೀವಕ್ಕಾಗಿ ಯೋಚಿಸುತ್ತಿದ್ದ—ಅದು ತನ್ನ ತಂಗಿ ಇಂದಿರೆ. ತಾನು ಹೋದಮೇಲೆ ಅವಳ ಗತಿಯೇನು, ಅವಳನ್ನು ಬೆಳೆಸಿ ತಕ್ಕ ಒಬ್ಬ ವರನ ಕೈಲಿಡುವವರಾರು ಎಂಬ ಯೋಚನೆಯೊಂದೇ ಅವನಿಗಿದ್ದುದು. ಅವಳ ಜೊತೆಗೆ ಈಗ ಇನ್ನೊಂದು ಜೀವದ ಹೊಣೆ ತನ್ನ ತಲೆಯಲ್ಲಿ ಹೊಕ್ಕಂತೆ ಅವನಿಗೆ ತೋರುತ್ತಿತ್ತು. ಅವಳು ಶ್ರೀಮಂತಳಿರಬಹುದು, ವಿದ್ಯಾವತಿಯಿರಬಹುದು, ಬೇರೊಬ್ಬರ ಸಹಾಯವಿಲ್ಲದೆ ಜೀವಿಸಬಲ್ಲ ಸಾಮರ್ಥ್ಯವಿರಬಹುದು ; ಆದರೂ ಅವಳು ಹೆಂಗಸು. ಒಂವಲ್ಲ ಒಂದುವೇಳೆ ಗಂಡಸಿನ ನೆರಳು ಅವಳಿಗೆ ಬೇಕಾಗುತ್ತದೆ. ಅಂಥ ದಾವುದೋ ಇಕ್ಕಟ್ಟಿಗೆ ಸಿಕ್ಕಿದಾಗ ಅವಳನ್ನು ಅಲ್ಲಿಂದ ಪಾರುಮಾಡುವುದಕ್ಕೆ ಯಾರಿರುತ್ತಾರೆ. ಅವಳಿಂದ ತನಗೆ ಏನೇ ಉಪಯೋಗ, ಉಪಕಾರವಿಲ್ಲದಿದ್ದರೂ ಹೆಂಡತಿಯೆಂಬ ಅಭಿಮಾನ ಅವನನ್ನು ಬಾಧಿಸತೊಡಗಿತ್ತು. ಬೆಳಗಾದರೆ ಸಂಜೆಯಾದರೆ ಅವಳು ಬಂದಾಳೆಂದು ಬಾಗಿಲ ಬಳಿ ನಿಂತು ಸಲಾಕೆಗಳ ಸಂದಿಯಿಂದ ದಾರಿ ನೋಡುತ್ತಿದ್ದ.

ವ್ಯರ್ಥ ನಿರೀಕ್ಷೆಯಲ್ಲಿ ಮೂರು ದಿನಗಳು ಕಳೆದುವು. ಮದುವೆಯಾದ ದಿನ ನವುರಾದ ಒಂದು ಆಸೆಯು ನಟೇಶನಲ್ಲಿ ಹುಟ್ಟಿತ್ತು. ಈ ಮದುವೆಯು ಕಾರಣದಿಂದ ತನಗೆ ಫಾಸಿ ಶಿಕ್ಷೆಯು ರದ್ದಾಗಿ ಬಿಡುಗಡೆಯಾಗಲು ಸಾಧ್ಯವಿಲ್ಲವೆ ಎಂದು. ತಾನು ಬಸಪ್ಪನನ್ನು ಕೊಲೆ ಮಾಡಿದವನಲ್ಲ; ಆದರೆ ತಾನು ನಿರಪರಾಧಿಯೆಂದು ರುಜುವಾತುಪಡಿಸಲು ತಕ್ಕ ಶಕ್ತಿ ತನ್ನಲ್ಲಿರಲಿಲ್ಲ. ಪಕ್ಷನಾದ ವಕೀಲನು ತನ್ನಪರವಾಗಿ ಇದ್ದಿದ್ದರೆ ತನಗೆ ಶಿಕ್ಷೆಯಾಗುತ್ತಿರಲಿಲ್ಲ. ಹಣವಂತನ ಕೊಲೆಯಾಗಿದ್ದಿತು; ಹಣವನ್ನು ಚೆಲ್ಲಿ ಅನ್ಯಾಯವನ್ನು ನ್ಯಾಯವಾಗಿ ಮಾಡಿ ಜನ ತನಗೆ ಶಿಕ್ಷೆ ಕೊಡಿಸಿತು. ಈಗ ತಾನು ಹಣವಂತಳ ಕೈ ಹಿಡಿದಿದೇನೆ. ನಿಜವನ್ನು ಅವಳು ತಿಳಿದರೆ ತನ್ನ ಹಣವನ್ನು ವಿನಿಯೋಗಿಸಿ ಮತ್ತೆ ಈ ಮೊಕದ್ದಮೆಯನ್ನು ಮೇಲಕ್ಕೊಯ್ದು ತನ್ನನ್ನು ಬಿಡಿಸಲಾರಳೆ? ಸಾಯುತ್ತಿರುವ ತನಗೆ ಸಾವಿರ ರೂಪಾಯಿಗಳನ್ನು ಕೊಟ್ಟವಳು ತಾನು ಬದುಕುವುದಕ್ಕಾಗಿ ಇನ್ನಷ್ಟು ಹಣವನ್ನು ಖರ್ಚುಮಾಡಲಾರಳೆ?

ಒಂದು ಗಳಿಗೆ ಮನಸಿಗೆ ಬಂದ ಈ ಯೋಚನೆಯು ಒಂದೆಯೇ ಅಳಿಸಿ ಹೋಗಿತ್ತು. ಹಣವಂತರಲ್ಲಿ ಔದಾರ್ಯದ ಸೊಂಕನ್ನೇ ನಟೇಶನು ಕಂಡಿರಲಿಲ್ಲ. ದಾನ, ಧರ್ಮ, ದಯೆ, ಪರೋಪಕಾರ, ನ್ಯಾಯ, ನೀತಿ ಇವೆಲ್ಲ ಹಣವಂತರ ಕೇರಿಯೊಳಕ್ಕೆ ಸಹ ಹೋಗುವಂತಿಲ್ಲ. ಕಾಲುಮುರಿದು ಕುಪ್ಪಳಿಸಲಾರದೆ ಬಿದ್ದಿರುವ ಕಪ್ಪೆಯನ್ನು ಮುತ್ತಿಕೊಂಡು ಕಲ್ಲೆಸೆಯುತ್ತ ನೋವಿನಿಂದ ಅದು ಕೂಗುತ್ತಿದ್ದರೆ ನಗುವ ಹುಡುಗರಂತೆ ಬಡವರ ಶ್ರೀಮಂತರ ಸಂಬಂಧ. ಇಂಥವರಿಂದ ಇಂಥವಳ ಹಣದಿಂದ ತನಗೆ ಒಳ್ಳೆಯದು ಹೇಗಾದೀತು! ವಸಂತಳು ತನ್ನನ್ನು ನೋಡಲು ಬರಲಿಲ್ಲವಲ್ಲಾ ಎಂಬ ಬೇಸರ ತೋರಿದಾಗ ಇಂಥ ಯೋಚನೆಗಳು ನಟೇಶನ ಮನಸ್ಸನ್ನು ಗಟ್ಟಿಮಾಡುತ್ತಿದ್ದುವು. ಸ್ವಭಾವ ಸಹಜವಾಗಿ ಅವನಲ್ಲಿ ಇದ್ದ ಹಣವಂತರ ಮೇಲಿನ ತಾತ್ಸಾರವನ್ನು ಪುಷ್ಟಿಗೊಳಿಸುತ್ತಿದ್ದುವು.

ಕಳೆದ ಎಲ್ಲ ದಿನಗಳಿಗಿಂತಲೂ ಭಾನುವಾರ ನಟೇಶನ ಮನಸ್ಸು ಬಹುವಾಗಿ ಕಲಕಿತ್ತು. ವಸಂತಳು ಬರುವ ಆಸೆಯಂತೂ ಅವನಿಗೆ ಲೇಶವೂ ಇರಲಿಲ್ಲ; ಆದರೆ ಕಡೆಯಬಾರಿ ತನ್ನ ತಂಗಿಯನ್ನು ನೋಡಬೇಕೆಂಬ ಬಯಕೆ ಇತ್ತು. ಬಂಗಾರದ ಗಣಿಯಿಂದ ಅವಳು ಇಲ್ಲಿಗೆ ಬರುವುದು ಹೇಗೆ, ತನ್ನನ್ನು

ನೋಡಲು ಸರ್ಕಾರದವರು ಅವಕಾಶ ಕೊಡುತ್ತಾರೋ ಇಲ್ಲವೋ; ಬೇರೆ ಯಾರೂ ದಿಕ್ಕಿಲ್ಲದ ಆ ಹಸುಳೆ ಎಷ್ಟು ದುಃಖಿಸುತ್ತಿದೆಯೋ, ಎಷ್ಟು ದಿಗಲು ಗೊಂಡಿದೆಯೋ. ಹಸಿವಾದರೆ ಅವಳಿಗೆ ಅನ್ನ ಹಾಕುವರಾರು, ಉಡಲು ಬಟ್ಟೆ ಕೊಡುವರಾರು, ಅತ್ತರೆ ಸಂತೈಸುವರಾರು ? ತನಗಾಗಿ ಅಲ್ಲದಿದ್ದರೆ ಆ ಹಸುಳೆಗಾಗಿಯಾದರೂ ದೈವಕ್ಕೆ ಕರುಣೆ ಬರಲಿಲ್ಲವಲ್ಲ! ನ್ಯಾಯ ಹೀಗೇ ಇದೆ ಎಂದು ನ್ಯಾಯಾಧೀಶರ ಮನಸ್ಸಿಗೆ ಆ ವಿಧಿ ತೋರಗೊಡಲಿಲ್ಲವಲ್ಲ! ಇನ್ನು ದೇವರು ಅನ್ಯಾಯಮಾಡುವುದಿಲ್ಲವೆಂದು ಹೇಳುವುದು ಹೇಗೆ?

ಬಾಗಿಲ ಸಲಾಕೆಗಳನ್ನು ಹಿಡಿದು ನಿಂತಿದ್ದ ನಟೇಶನ ಯೋಚನೆ ಎಲ್ಲೆಲ್ಲಿಯೋ ಹೋಗಿತ್ತು. ಇವನ ನೋವಿನಲ್ಲಿ ಸಹಾನುಭೂತಿಯಿಂದ 120ನೆಯ ಖೈದಿ,

'ಗುಡ್‌ಮಾರ್ನಿಂಗ್ ಬ್ರದರ್. ಯಾರಿಗಾಗಿ ನೋಡುತಿದ್ದಿ ?' ಎಂದ. ಮೆಲ್ಲನೆ ಮಾತನ್ನೆತ್ತಿ ಸಮಾಧಾನ ಮಾಡಬೇಕೆಂದು ಅವನ ಉದ್ದೇಶ. ನಟೇಶನಿಗೆ ಯಾರ ಮಾತೂ ಬೇಕಿರಲಿಲ್ಲ. ಬೇಸರದಿಂದ,

'ಯಮದೂತರಿಗಾಗಿ, ಮೃತ್ಯುವಿಗಾಗಿ' ಎಂದು ಉತ್ತರ ಕೊಟ್ಟ.

'ಬೇಸರವಾಗಬೇಡ ನಟೇಶ್. ಈ ಪ್ರಪಂಚದ ರೀತಿಯೇ ಹೀಗೆ. 'ಯಾರಿಗೆ ಯಾರುಂಟು ಎರವಿನ ಸಂಸಾರ' ಎಂದು ದಾಸರು ಅದಕ್ಕಾಗಿಯೇ ಹೇಳಿರುವುದು. ಆದರೆ ಲೌಕಿಕಕ್ಕಾದರೂ ಹೆಂಡತಿಯಾದವಳು ಇಂಥ ಸಮಯ ದಲ್ಲಿ ಬರುತ್ತಾಳೆಂದಿದ್ದೆ.'

ಹೆಂಡತಿಯೆನ್ನುತ್ತಲೇ ನಟೇಶನ ಕೋಪ ಕೆರಳಿತು.

'ಹೆಂಡತಿಯೆ ? ಶ್ರೀಮಂತಿಕೆಯ ಸೊಕ್ಕಿನಿಂದ ಮದುವೆಯ ಚೆಲ್ಲಾಟ ಮಾಡಿದ ಒಂದು ಹೆಣ್ಣು. ಬಡವರೆಂದರೆ ಬಲ್ಲಿದರಿಗೆ ಆಟದ ಗೊಂಬೆಗಳಂತೆ. ಅವರಲ್ಲಿ ಹುಟ್ಟಿ ಬೆಳೆದ ಅವಳು ಇಲ್ಲಿಗೆ ಬರುವುದುಂಟೆ ?'

ನಟೇಶನು ಈ ಮಾತುಗಳನ್ನು ಹೇಳುತ್ತಿದ್ದ ಹಾಗೇ ಕಾವಲ ಸಿಪಾಯಿ ಯೊಬ್ಬನು ಇಂದಿರೆಯನ್ನು ಹಿಂದಿಟ್ಟುಕೊಂಡು ಬರುತ್ತಿರುವುದು ಕಾಣಿಸಿತು. ಮಾತನ್ನು ನಿಲ್ಲಿಸಿ ನಟೇಶನು ಅತ್ತಕಡೆಯೇ ನೋಡತೊಡಗಿದ. ಸಂತೋಷ ದಿಂದ ಅವನ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯತೊಡಗಿತು.

ನಟೇಶನನ್ನು ಕಾಣುತ್ತಲೇ ಇಂದಿರೆಯು 'ಅಣ್ಣಾ' ಎಂದು ಕೂಗುತ್ತ ಒಂದೇ ನೆಗೆತಕ್ಕೆ ಬಾಗಿಲ ಬಳಿಗೆ ಬಂದು ನಿಂತಳು. ಅವಳ ಕಣ್ಣುಗಳಲ್ಲೂ ನೀರು ಧಾರಾಳವಾಗಿ ಸುರಿಯುತ್ತಿತ್ತು. ಸಲಾಕೆಗಳ ಸಂದಿಯಲ್ಲಿ ಕೈಗಳ ನ್ನಿಟ್ಟು ನಟೇಶನು ತಂಗಿಯ ತಲೆ ಸವರುತ್ತ ಗಲ್ಲವನ್ನು ನೇವರಿಸುತ್ತ ಸಂತೈಸು ತ್ತಿದ್ದ. ಮಾತಾಡಲು ಗಂಟಲು ಕಟ್ಟಿತ್ತು. ಉದ್ವೇಗ ಸ್ವಲ್ಪ ಕಡಮೆಯಾಗು ತ್ತಲೇ

'ಈಗಲಾದರೂ ಬಂದೆಯಲ್ಲ ತಾಯಿ ? ನಿನ್ನನ್ನು ನೋಡುತ್ತೇನೋ ಇಲ್ಲವೋ ಎಂದಿದ್ದೆ. ನಿನ್ನನ್ನು ಯಾರು ಕರೆತಂದರಮ್ಮಾ' ಎಂದ.

'ಜೈಲಿನ ದೊಡ್ಡ ಸಾಹೇಬರು ಯಾರನ್ನೋ ಕಳಿಸಿದ್ದರಣ್ಣಾ. ಅವರ ಸಹಾಯದಿಂದ ಬಂದೆ.'

ಜೈಲು ಅಧಿಕಾರಿಯು ಎಂಥ ಉಪಕಾರ ಮಾಡಿದ!

'ಅವರ ಮನೆ ಬೆಳೆಯಲಿ ತಾಯಿ. ಅವರ ಮಕ್ಕಳು ಮರಿ ಸುಖವಾಗಿ ಬಾಳಲಿ. ನನ್ನ ತಂಗಿಯನ್ನು ಇಂದು ಕಾಣಿಸಿದ ಪುಣ್ಯ ಅವರನ್ನು ಸದಾ ಕಾಪಾಡಲಿ.'

ತುಂಬು ಮನಸಿನಿಂದ ನಟೇಶನು ಅವರನ್ನು ಹರಸುತ್ತಿದ್ದ. ನೊಂದ ಜೀವದಿಂದ ಬರುವ ಮಾತುಗಳಲ್ಲಿರುವ ಅಸಾಧಾರಣ ಶಕ್ತಿಯನ್ನು ನಾವು ಕಾಣುವುದು ಇಂಥ ವೇಳೆಗಳಲ್ಲಿ. ಅಸಹಾಯರಾಗಿ, ಬೇರಾವ ಬಲವೂ ಇಲ್ಲದೆ ಆರ್ತತೆಯಿಂದ ಜೀವ ನುಡಿದ ನುಡಿ ಸತ್ಯವಾಗುತ್ತದೆ. ಉಳಿದ ವೇಳೆ ಗಳಲ್ಲಿ ಉದಾಸೀನನಾಗಿರುವ ದೇವರು ತಾನೇ ಹೃದಯದಲ್ಲಿ ನಿಂತು ನುಡಿಸು ತ್ತಿರುವ ಇಂಥ ಮಾತುಗಳನ್ನು ನಡೆಸಿಕೊಡುತ್ತಾನೆ. ನಟೇಶನು ಆಡಿದ ಮಾತುಗಳಲ್ಲಿ ಆ ಸತ್ವವಿತ್ತು, ಸಂಕಲ್ಪವಿತ್ತು. ದುಃಖದಿಂದ, ನೋವಿನಿಂದ ಆಡಿದ ಮಾತುಗಳಾದರೆ ಶಾಪವಾಗಬಲ್ಲ ಸನ್ನಿವೇಶವದು; ಕೃತಜ್ಞತೆಯಿಂದ ಆಡಿದ ಮಾತುಗಳಾಗಿ ಹರಕೆಯಾದುವು.

420ನೆಯ ಖೈದಿಯು ಅಣ್ಣ ತಂಗಿಯರ ಈ ಸಮಾಗಮವನ್ನು ಸಂತೋ ಷದಿಂದ ನೋಡುತ್ತಿದ್ದ. ನಟೇಶನು ಅವನನ್ನು ತಂಗಿಗೆ ತೋರಿಸಿ,

'ಅವರಿಗೆ ಕೈಮುಗಿಯಮ್ಮಾ, ಅವರ ಸಹಾಯದಿಂದ ನಿನ್ನ ಕಾಗದ ಗಳು ನನಗೆ ತಲುಪಿ ಮನಸ್ಸಿಗೆ ಸಮಾಧಾನವಾಗುತ್ತಿತ್ತು. ನಿನ್ನ ಅಣ್ಣನ ಈ ಕಷ್ಟದೆಸೆಯಲ್ಲಿ ಅವರು ಬಹಳ ಉಪಕಾರ ಮಾಡಿದ್ದಾರೆ' ಎಂದ.

ಇಂದಿರೆಯು ಪಕ್ಕದ ಕೋಣೆಯ ಬಳಿಗೆ ಹೋಗಿ ಕೃತಜ್ಞತೆಯಿಂದ ಬಗ್ಗಿ ಖೈದಿಯ ಕಾಲನ್ನು ಮುಟ್ಟಿದಳು. ಖೈದಿಯು ಕಣ್ಣಲ್ಲಿ ನೀರು ತುಂಬಿದವನಾಗಿ

'ಏಳು ಮಗು; ಏಳಮ್ಮ. ನಿನ್ನ ಅಣ್ಣ ಚಿನ್ನದಂಥ ಮನುಷ್ಯ, ಅಂಥ ಮನುಷ್ಯನಿಗಾಗಿ ನಾವು ಈ ಸೆರೆಮನೆಯ ಬಂಧನದಲ್ಲಿ ಏನುತಾನೇಮಾಡಿಯೇ ವಮ್ಮ. ದೇವರು ಅವನಿಗೆ ಒಳ್ಳೆಯದನ್ನು ಮಾಡಬೇಕು' ಎಂದ.

ಇಂದಿರೆಯು ಪುನಃ ಅಣ್ಣನ ಬಳಿಗೆ ಬಂದು

'ನಿನಗೆ ಮದುವೆಯಾಯಿತೆಂದು ಕೇಳಿದೆ ಅಣ್ಣ' ಎಂದಳು.

'ಆ ಸುದ್ದಿ ಎತ್ತಬೇಡಮ್ಮ.'

'ಆಕೆ ಯಾರು ಹೇಳಣ್ಣ. ಅತ್ತಿಗೆಯ ಜೊತೆಯಲ್ಲಿ........'

ನಟೇಶನು ಅವಳ ಮಾತನ್ನು ಕತ್ತರಿಸಿ ಹೇಳಿದ,

'ಬೇಡ ತಂಗಿ. ಅವಳು ಶ್ರೀಮಂತಳು, ಅವಳ ಸಹವಾಸ ನಿನಗೆ ಬೇಡ, ಬಡವರ ನಡುವೆ ಬಡವಳಾಗಿಯೇ ಬೆಳೆ. ನಿನ್ನ ವಂಶಕ್ಕೆ, ನಿನ್ನ ಅಣ್ಣನಿಗೆ ಕೀರ್ತಿ ತರುವಂತೆ ಮರ್ಯಾದೆಯಿಂದ ಬಾಳು, ಶ್ರೀಮಂತರ ಸಹವಾಸ ಎಂದಿಗೂ–ಎಂದಿಗೂ–ಬೇಡ.'

ಸಮೀಪದಲ್ಲಿ ನಿಂತಿದ್ದ ಸಿಪಾಯಿಯು ವೇಳೆಯಾಯಿತೆಂದು ಎಚ್ಚರಿಸಿದ. ಇನ್ನು ಸ್ವಲ್ಪಹೊತ್ತು ಅವಕಾಶ ಕೊಡಿರೆಂದು ಇಂದಿರೆಯು ಅವನನ್ನು ಬೇಡಿಕೊಂಡು ಅಳುತ್ತ,

'ನಿನ್ನನ್ನು ಬಿಟ್ಟು ಹೇಗಿರಲಿ ಅಣ್ಣ' ಎಂದಳು.

'ಅಳಬೇಡ ಇಂದಿರಾ; ಸಮಾಧಾನ ತಂದುಕೋ. ನೀನು ಅಳುತ್ತಿದ್ದರೆ ನನ್ನ ಹೃದಯವೇ ಬಿಚ್ಚಿಹೋಗುತ್ತದೆ. ಈ ಜಗತ್ತಿನಲ್ಲಿ ದೇವರೆಂಬುವನೊಬ್ಬ ನಿದ್ದರೆ ಅನಾಥೆಯಾದ ನಿನ್ನನ್ನು ಅವನು ಕೈಬಿಡುವುದಿಲ್ಲ. ಇನ್ನುಮೇಲೆ ನಮ್ಮ ಕೇರಿಯ ಬಡಕೂಲಿಯವರೇ ನಿನ್ನ ತಂದೆ ತಾಯಿ ಅಣ್ಣ ಎಲ್ಲ ಬಂಧು ಬಳಗ ಎಂದು ತಿಳಿಯಮ್ಮ. ನಾನು ಹೋದ ದುಃಖದಲ್ಲಿ ಓದುವುದನ್ನು ಬಿಡ ಬೇಡ ತಾಯಿ; ಮುಂದೆ ನೀನು ಎಂಥವನ ಕೈಹಿಡಿಯಬೇಕೋ ಏನು ಕಷ

ಪಡಬೇಕೋ ಕಾಣೆ, ನಾಲ್ಕು ಅಕ್ಷರವನ್ನಾದರೂ ಕಲಿತಿದ್ದರೆ ನಿನಗೆ ಸಹಾಯವಾಗುತ್ತದೆ. ಏನೇ ಕಷ್ಟವಾಗಲಿ ಓದುವುದನ್ನು ಬಿಡಬೇಡಮ್ಮಾ, ನೀನು ವಿದ್ಯಾವಂತಳಾಗುವುದೇ ನನ್ನ ಕಡೆಯ ಅಪೇಕ್ಷೆ ತಾಯಿ, ಅದನ್ನು ನಡೆಸಿಕೊಡು.'

'ಆಗಲಿ ಅಣ್ಣ.'

ಕಾವಲವನು ಪುನಃ ಎಚ್ಚರಿಸಿದ. ನಟೇಶನು,

'ಹೋಗಿ ಬಾ ತಂಗೀ. ಜೈಲು ಅಧಿಕಾರಿಗಳಿಗೆ ಆಕ್ಷೇಪಣೆ ಬಂದೀತು. ದೊಡ್ಡ ಸಾಹೇಬರನ್ನು ಕಂಡು ನಮಸ್ಕರಿಸಿ ಅವರಿಂದ ಉಪಕಾರ ಬಹಳ ಆಯಿತೆಂದು ಹೇಳಿಹೋಗಮ್ಮ.' ಎಂದು ಅವಳ ತಲೆಯನ್ನು ಸವರಿ ಮನೆಸಾರ ಹರಸಿ ಬೀಳ್ಕೊಟ್ಟ. ಕಾವಲ ಸಿಪಾಯಿಯು ಕೈಹಿಡಿದು ಕರೆದೊಯ್ಯುತ್ತಿರಲು ಬಿಕ್ಕಿಬಿಕ್ಕಿ ಅಳುತ್ತ ಪುನಃ ಪುನಃ ಅಣ್ಣನಕಡೆ ತಿರುಗಿ ನೋಡುತ್ತ ಇಂದಿರೆಯು ಹೋದಳು. ಅವಳ ಕಡೆಯೇ ನೋಡುತ್ತಿದ್ದ ನಟೇಶನು

'ಮನಸಿನ ಭಾರ ಇನ್ನು ಕಳೆಯಿತು. ನಾಳೆ ಬೆಳಗ್ಗೆ ಏಕೆ ಈಗಲೇ ನನ್ನ ಜೀವ ತೆಗೆದರೂ ನನ್ನ ಅಡ್ಡಿಯಿಲ್ಲ, ಆದರೆ ಸಾಯುವುದಕ್ಕೆ ಮುಂಚೆ ದೊಡ್ಡ ಸಾಹೇಬರನ್ನೊಮ್ಮೆ ಕಾಣಬೇಕು' ಎಂದ. ಇವನ ಮಾತುಗಳನ್ನು ಕೇಳುತ್ತಿದ್ದ ಪಕ್ಕದ ಖೈದಿಯು 'ಹೌದು, ಬಹಳ ಒಳ್ಳೆಯ ಅಧಿಕಾರಿ' ಎಂದ.

'ಒಳ್ಳೆಯ ಅಧಿಕಾರಿ ಎಂದೆಯ? ನಾನಿಲ್ಲಿಗೆ ಬಂದ ದಿನ ಬಹಳವಾಗಿ ವ್ಯಥೆಪಟ್ಟೆ. ಇದು ಪಾಪ ಕೂಪವೆಂದು ಹೆದರಿದೆ. ಈಗ ನೋಡಿದರೆ ಹೊರಗಿನ ಜನರಿಗಿಂತ ಇಲ್ಲಿಯವರೇ ಉತ್ತಮರೆಂದು ತೋರುತ್ತಿದೆ, ನಿಮ್ಮಿಂದ ಅಧಿಕಾರಿಗಳಲ್ಲಿ ಒಳ್ಳೆಯ ಗುಣ ಬಂತೋ ಅಥವಾ ಅಂಥ ಒಳ್ಳೆಯ ಅಧಿಕಾರಿಯಿಂದ ನೀವು ಒಳ್ಳೆಯವರಾಗಿದೀರೋ ಗೊತ್ತಿಲ್ಲ, ನರಕವನ್ನು ಸ್ವರ್ಗವನ್ನಾಗಿ ಮಾಡಬಲ್ಲ ಮಹಾನುಭಾವ ನಿಮ್ಮ ಜೈಲು ಅಧಿಕಾರಿ. ಅವನಿಗೆ ನಮಸ್ಕರಿಸಿ ನಾನು ಪ್ರಾಣ ಬಿಡಬೇಕು.'

ಕಷ್ಟದಲ್ಲಿರುವ ಜೀವಿಗೆ ಮಾಡಿದ ಒಂದು ಚಿಕ್ಕ ಉಪಕಾರ ಮಹತ್ತರವಾದ ಫಲ ಕೊಡುತ್ತದೆಂಬ ಮಾತು ನಿಜ.

— ೧೦ —

ಭಕ್ತರ ಕಥೆಗಳಲ್ಲಿ ಒಂದು ಈರೀತಿ ಇದೆ. ಸದಾ ಭಗವಧ್ಯಾನ ನಿರತರಾಗಿದ್ದ ಒಬ್ಬ ಭಕ್ತರು ಬಡತನದಲ್ಲಿ ಬಹಳ ಕಷ್ಟ ಪಡುತ್ತಿದ್ದರಂತೆ. ಎಷ್ಟೋ

ದಿನಗಳು ಉಪವಾಸ ಮಾಡಬೇಕಾಗಿ ಬರುತ್ತಿತ್ತು; ಆದರೂ ಅವರು ಭಗವಂತನ ಪೂಜೆ, ಧ್ಯಾನ, ಗೀತೆಯ ಪಾರಾಯಣಗಳನ್ನು ಬಿಟ್ಟವರಲ್ಲ. ಒಮ್ಮೆ ಹೀಗೆಯೇ ಮೂರು ದಿನವಾದರೂ ಅವರಿಗೆ ಏನೂ ದೊರೆಯದೆಹೋಯಿತು. ಭಕ್ತರು ದೇವರ ಪೂಜೆಮಾಡಿ ಪಾರಾಯಣಮಾಡಿ ಗೀತೆಯನ್ನು ಹಾಗೆಯೇ ವ್ಯಾಸ ಪೀಠದ ಮೇಲಿಟ್ಟು ಹೆಂಡತಿ ಮಕ್ಕಳಿಗಾಗಿ ಏನಾದರೂ ತರೋಣವೆಂದು ಪೇಟೆಯಕಡೆ ಹೋದರು. ಉಪವಾಸದಿಂದ ಖಿನ್ನನಾಗಿದ್ದ ಅವರ ಮಗನಿಗೆ ಶ್ರೀಕೃಷ್ಣನು ಗೀತೆಯಲ್ಲಿ ಸುಳ್ಳು ಹೇಳಿದ್ದಾನೆಂದೂ ಅಂಥ ಸುಳ್ಳು ವಾಕ್ಯ ಗಳನ್ನು ಗೀತೆಯಲ್ಲಿ ಬರೆದಿಟ್ಟು ಪಾರಾಯಣ ಮಾಡುವುದು ಸರಿಯಲ್ಲವೆಂದೂ ತೋರಿ ಲೇಖನಿಯನ್ನು ತೆಗೆದುಕೊಂಡು ಗೀತೆಯಲ್ಲಿನ

ಅನನ್ಯಾಶ್ಚಿಂತಯಂತೋಮಾಂ ಏಜನಾಃ ಪರ್ಯುಪಾಸತೇ || ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ || ಎನ್ನುವ ಶ್ಲೋಕವನ್ನು ಹೊಡೆದುಹಾಕಿ ಬಿಟ್ಟನಂತೆ. ಸ್ವಲ್ಪ ಹೊತ್ತಿನೊಳಗಾಗಿ ಆಳೊಬ್ಬನು ಆಹಾರ ಪದಾರ್ಥಗಳ ಮೂಟೆಯೊಂದನ್ನು ಹೊತ್ತುತಂದು ಭಕ್ತನ ಮನೆಯಲ್ಲಿ ಕೊಡು ತ್ತಾನೆ. ಅವನ ನಾಲಗೆಯು ಸೀಳಿ ರಕ್ತ ಸುರಿಯುತ್ತಿತ್ತು. ಭಕ್ತನು ಪೇಟೆ ಯಿಂದ ಬಂದು ಈ ಸಾಮಗ್ರಿಗಳನ್ನು ನೋಡಿ ಎಲ್ಲ ವಿಷಯವನ್ನೂ ವಿಚಾರಿಸಿ ಪರಮಾತ್ಮನೇ ಆಳಿನಂತೆ ತನ್ನ ಮನೆಗೆ ಬಂದಿದ್ದನೆಂದೂ ಗೀತೆಯಲ್ಲಿನ ಮಾತನ್ನು ಸುಳ್ಳೆಂದು ಹೊಡೆದುಹಾಕಿದುದು ಮಹಾಪರಾಧವಾಯಿತೆಂದೂ ಪರಿತಪಿಸುತ್ತಾನೆ. ಉಪವಾಸದ ಬೇಗೆಯಿಂದ ನೊಂದ ಹುಡುಗ ಸಿಟ್ಟು ಗೊಂಡು ನಿಂದಿಸಿದಾಗ ದೇವರು ಸಾಮಾಗ್ರಿಗಳನ್ನು ಹೊತ್ತುತಂದಂತೆ ಅನ್ಯಾ ಯಕ್ಕೆ ಬಲಿಯಾಗಿ ವಧಾಸ್ಥಾನವನ್ನೆದುರಿಸಲು ಹೊರಟ ಬಡಪಾಯಿಯೊಬ್ಬನ ಹೃದಯದ ಆರ್ತನಾದವು ದೇವರನ್ನು ಮುಟ್ಟಿತೆಂದು ಕಾಣುತ್ತದೆ.

ಭಾನುವಾರ ರಾತ್ರಿ ಸರಿಹೊತ್ತು ಮೀರಿದ ಸಮಯ. ಗಣಿಯ ಪ್ರದೇಶ ದಲ್ಲಿ ಪೋಲೀಸಿನವರಿಬ್ಬರು ಗಸ್ತು ತಿರುಗುತ್ತಿದ್ದಾರೆ. ಎಲ್ಲೆಲ್ಲಿಯೂ ನಿಶ್ಶಬ್ದ; ಮುನಿಸಿಪಾಲಿಟಿಯ ದೀಪಗಳು ಬೆಳಕನ್ನು ಕಾಣಿಸುತ್ತಿದ್ದಷ್ಟು ಪ್ರದೇಶ ಹೊರತು ಉಳಿದ ಎಲ್ಲೆಡೆಯೂ ಗಾಂಢಾಂಧಕಾರ. ಅಷ್ಟು ಹೊತ್ತಿನಲ್ಲಿ ಆ ಕತ್ತಲಲ್ಲಿ ಏನೋ ಚಲಿಸುತ್ತಿರುವಂತೆ ಗಸ್ತು ತಿರುಗುತ್ತಿದ್ದವರಿಗೆ ತೋರಿ ಕೈಯಲ್ಲಿದ್ದ "ಟಾರ್ಚ್" ಹಚ್ಚಿ ಬೆಳಕನ್ನು ಅತ್ತಕಡೆ ಬಿಡುತ್ತ ಹೋದರು.

ಬೆಳಕು ತನ್ನ ಕಡೆ ಬರುತ್ತಲೇ ಕತ್ತಲಲ್ಲಿ ಸರಿಯುತ್ತಿದ್ದ ಒಬ್ಬ ಮನುಷ್ಯನು, ಮೈತುಂಬ ಕರಿಯಬಟ್ಟೆ ಹಾಕಿದ್ದವನು, ಓಡತೊಡಗಿದ. ಪೋಲೀಸಿನವರು ಅವನು ಕಳ್ಳನೆಂದು ನಿರ್ಧರಿಸಿ ಸೀಟಿಗಳನ್ನೂದುತ್ತ ಅವನನ್ನು ಹಿಂಬಾಲಿಸಿದರು. ಕಳ್ಳನು ಬಹಳ ಚುರುಕಾದ ಮನುಷ್ಯನಂತೆ ಕಂಡ; ಜಿಂಕೆಯ ಮರಿಯಂತೆ ಓಡುತ್ತಿದ್ದ; ಕತ್ತಲಲ್ಲಿ ಎರಡುಮೂರು ಸಲ ಕಣ್ಣಿಗೆ ತಪ್ಪಿಸಿಕೊಂಡ; ಅವನನ್ನು ಪತ್ತೆಹಚ್ಚಿ ಪೋಲೀಸಿನವರು ಅವನನ್ನು ಎಚ್ಚರಿಸುವಂತೆ ಒಂದುಸಲ ಬಂದೂಕು ಹಾರಿಸಿದರು. ಆ ವೇಳೆಯಲ್ಲಿ ಪೋಲೀಸಿನವರ ಸೀಟಿಗಳನ್ನೂ ದಡದಡನೆ ಓಡುತ್ತಿರುವ ಸದ್ದನ್ನೂ ಬಂದೂಕು ಹಾರಿದ ಸದ್ದನ್ನೂ ಕೇಳಿ ಹತ್ತಾರುಜನರು ಎದ್ದು ಓಡಿಬಂದು ಕಳ್ಳನನ್ನು ಹಿಡಿಯಲು ಪ್ರಯತ್ನ ಪಟ್ಟರು. ಯಾಗಿಗೂ ಸಿಕ್ಕದೆ ಕಳ್ಳನು ತಪ್ಪಿಸಿಕೊಂಡು ದೂರ ಹೋಗಿಬಿಟ್ಟದ್ದ. ಅವನಿನ್ನು ಕೈಗೆ ಸಿಕ್ಕುವುದಿಲ್ಲವೆಂದು ತಿಳಿದ ಪೋಲೀಸಿನವನು ಆದದ್ದಾಗಲೆಂದು ಗುರಿಯಿಟ್ಟು ಗುಂಡುಹಾರಿಸಿದ.

ದೈವದರಕ್ಷಣೆ ತಪ್ಪಿದ ಕಳ್ಳನಿಗೆ ಗುಂಡುತಗಲಿ ಅಲ್ಲಿಯೇ ಅವನು ಕುಸಿದು ಬಿದ್ದ. ಜನರು ಒಂದು ಗಳಿಗೆಯಲ್ಲಿ ಅವನನ್ನು ಮುತ್ತಿಕೊಂಡರು. ಗಾಯವಾದ ಸ್ಥಳದಿಂದ ರಕ್ತ ಹರಿಯುತ್ತಿತ್ತು. ಜನ ತಮಗೆ ತಿಳಿದ ಪ್ರಥಮ ಚಿಕಿತ್ಸೆಯನ್ನು ನಡೆಸಿ ಹತ್ತಿರದಲ್ಲಿದ್ದ ಡಾಕ್ಟರೊಬ್ಬರನ್ನು ಕರೆತಂದರು. ಡಾಕ್ಟರು ರೋಗಿಯ ಸ್ಥಿತಿಯನ್ನು ನೋಡಿ ಅವನನ್ನು ಆಸ್ಪತ್ರೆಗೆ ಕಳಿಸುವುದು ಮೇಲೆಂದರು. ಯಾವುದೋ ಒಂದು ಕುದುರೆ ಗಾಡಿಯನ್ನು ತಂದು ಕಳ್ಳನನ್ನು ಅದರಲ್ಲಿ ಹಾಕಿಕೊಂಡು ಪೋಲೀಸಿನವರು ಆಸ್ಪತ್ರೆಗೆ ಹೋದರು. ಅದುವರೆಗೆ ಅವನಿಗೆ ಪ್ರಜ್ಞೆ ತಪ್ಪಿತ್ತು.

ಆಸ್ಪತ್ರೆಯ ಡಾಕ್ಟರು ರೋಗಿಯನ್ನು ಪರೀಕ್ಷೆಮಾಡಿದರು. ಗುಂಡಿನ ಏಟು ಬಲವಾಗಿ ತಗುಲಿತ್ತು. ಅದುವರೆಗೆ ರಕ್ತಸ್ರಾವವು ಬಹಳವಾಗಿ ನಡೆದಿತ್ತು. ಆ ಸ್ಥಿತಿಯಲ್ಲಿ ಅವನ ದೇಹದಲ್ಲಿರುವ ಗುಂಡನ್ನು ತೆಗೆಯುವುದು ಅಪಾಯಕರ; ಅದನ್ನು ಹಾಗೇ ಬಿಟ್ಟಿರುವುದೂ ಅಪಾಯ. ಹೇಗೂ ಅವನು ಉಳಿಯುವ ಭರವಸೆ ಕಡಮೆ. ಅವನು ಕಳ್ಳನಾದುದರಿಂದ ಸಾಯುವಮುನ್ನ ಏನನ್ನಾದರೂ ಪೋಲೀಸಿನವರು ತಿಳಿದುಕೊಳ್ಳಲು ಬಯಸಿದರೆ ಅವನ ಹೇಳಿಕೆ

ಯನ್ನು ತೆಗೆದುಕೊಳ್ಳುವುದು ಉತ್ತಮ. ಚಿಕಿತ್ಸೆ ನಡೆಸುವಮುನ್ನ ಹೇಳಿಕೆ ತೆಗೆದುಕೊಳ್ಳಬೇಕು. ಯಾವುದಕ್ಕೂ ವೇಳೆ ಕಳೆಯಬಾರದು.

ಪೋಲೀಸಿನವನೊಬ್ಬನು ಅದುವರೆಗೆ ಟೆಲಿಫೋನಿನಲ್ಲಿ ಮಾತನಾಡಿ ತನ್ನ ಮೇಲಧಿಕಾರಿಯಾದ ಇನ್ಸ್ಪೆಕ್ಟರಿಗೆ ನಡೆದ ವಿಷಯವನ್ನು ತಿಳಿಸಿದ್ದ. ಐದು ನಿಮಿಷಗಳೊಳಗೆ ತಾನು ಬರುವುದಾಗಿಯೂ ಅದುವರೆಗೆ ಏನೂ ಮಾಡಬಾರದೆಂದು ಡಾಕ್ಟರನ್ನು ಕೇಳಿಕೊಳ್ಳುವಂತೆಯೂ ಆತ ಹೇಳಿದ್ದ. ಗಾಯದಿಂದ ಹರಿಯುತ್ತಿದ್ದ ರಕ್ತವನ್ನು ನಿಲ್ಲಿಸಿ ರೋಗಿಗೆ ಪ್ರಜ್ಞೆ ಬರಲು ಡಾಕ್ಟರು ಒಂದು ಇಂಜಕ್ಷನ್ ಕೊಟ್ಟರು. ರೋಗಿಯು ಸ್ವಲ್ಪ ಹೊತ್ತಿನೊಳಗಾಗಿ ಕಣ್ಣು ತೆರೆದ.

ತಾನು ಮಲಗಿರುವ ಸ್ಥಳವನ್ನೂ ಸುತ್ತಲೂ ಇದ್ದ ಜನರನ್ನೂ ನೋಡುತ್ತಲೇ ಕಳ್ಳನಿಗೆ ಪರಿಸ್ಥಿತಿಯ ಅರಿವಾಗಿರಬೇಕು. ಸನ್ನೆಮಾಡಿ ಡಾಕ್ಟರನ್ನು ಹತ್ತಿರಕ್ಕೆ ಕರೆದು

'ನಿಮ್ಮನ್ನು ಒಂದು ಮಾತು ಕೇಳುತ್ತೇನೆ. ನಿಜವಾಗಿ ಹೇಳುವಿರಾ?'

'ಏನು ಕೇಳು.'

'ನಾನು ಬದುಕುವ ಭರವಸೆ ಇದೆಯೆ ಇಲ್ಲವೆ?'

'ಅದನ್ನು ಹೇಳಲು ಸಾಧ್ಯವಿಲ್ಲ.'

'ನೀವದನ್ನು ಹೇಳಬೇಕು. ನಾನು ಇತರ ರೋಗಿಗಳಂತಲ್ಲ. ನನ್ನ ಮನಸ್ಸಿನಲ್ಲಿ ಎಷ್ಟೋ ರಹಸ್ಯಗಳಿರುತ್ತವೆ. ನಾನು ಸಾಯುವಹಾಗಿದ್ದರೆ ಆ ರಹಸ್ಯಗಳು ನನ್ನೊಳಗೆ ಇರುವುದು ಸರಿಯಲ್ಲ. ಅದರಿಂದ ನೀವು ನಿಜವನ್ನು ಹೇಳಬೇಕು.'

ರೋಗಿಯು ಬಹಳ ಕಷ್ಟದಿಂದಲೇ ಮಾತಾಡುತ್ತಿದ್ದ. ಅವನಿಗೆ ಶಕ್ತಿ ಬರಲೆಂದು ಡಾಕ್ಟರು ಔಷಧಿಯೊಂದನ್ನು ಕುಡಿಸಿ

'ನಿನ್ನ ಮನಸ್ಸಿನಲ್ಲಿರುವುದನ್ನು ಹೇಳಿಬಿಡುವುದು ಒಳ್ಳೆಯದು. ನಿನ್ನನ್ನು ಬದುಕಿಸಲು ನಾನು ನನ್ನ ಕೈಲಾದ ಪ್ರಯತ್ನ ಮಾಡುತ್ತೇನೆ. ನೀನು ಎಂಥ ಕೆಟ್ಟಕೆಲಸಗಳನ್ನು ಮಾಡಿದ್ದರೂ ನನ್ನಮಟ್ಟಿಗೆ ನೀನೊಬ್ಬ ರೋಗಿ; ನಿನ್ನನ್ನು ಉಳಿಸುವುದು ನನ್ನಧರ್ಮ. ಆದರೆ ಚಿಕಿತ್ಸೆಯ ಪರಿಣಾಮ ಹೀಗೇ ಆಗುತ್ತದೆಂದು ನಾನೂ ಹೇಳಲಾರೆ.'

'ಹಾಗಿದ್ದರೆ ನನ್ನ ಹೇಳಿಕೆಯನ್ನು ಬರೆದುಕೊಳ್ಳಿ.'

ಈ ವೇಳೆಗೆ ಇಸ್ಪೆಕ್ಟರು ಮ್ಯಾಜಿಸ್ಟ್ರೇಟರನ್ನು ಕರೆದುಕೊಂಡು ಒಂದು ಮೋಟಾರುಕಾರಿನಲ್ಲಿ ಆಸ್ಪತ್ರೆಗೆ ಬಂದರು. ಹೇಳಿಕೆ ಕೊಡುವವನು ಕಳ್ಳನಾದುದರಿಂದ ಯಾವಯಾವ ಅಪರಾಧಗಳು ಅವನಿಂದ ನಡೆದಿವೆಯೋ ಅವನ ಹೇಳಿಕೆಯು ಯಾವ ಮೊಕದ್ದಮೆಯಲ್ಲಿ ಬೇಕಾಗುತ್ತದೆಯೋ ಎಂದು ಮುನ್ನೆಚ್ಚರಿಕೆ ತೆಗೆದುಕೊಂಡು ಇಸ್ಪೆಕ್ಟರು ಮ್ಯಾಜಿಸ್ಟ್ರೇಟರನ್ನು ಜೊತೆಗೆ ಕರೆತಂದಿದ್ದರು.

ಸಾಯಲಿರುವ ರೋಗಿಯ ಹೇಳಿಕೆಯನ್ನು ಮ್ಯಾಜಿಸ್ಟ್ರೇಟರು ಬರೆದುಕೊಳ್ಳ ತೊಡಗಿದರು.

ರೋಗಿಯ ಹೆಸರು ಕುಲ ವಯಸ್ಸು ಇತ್ಯಾದಿ ವಿವರಗಳನ್ನು ಬರೆದುಕೊಳ್ಳುವವೇಳೆಗೆ ಅವನಿಗೆ ಪುನಃ ಪ್ರಜ್ಞೆ ತಪ್ಪುವಂತಾಯಿತು. ಡಾಕ್ಟರು ಮತ್ತೊಂದು ಇಂಜಕ್ಷನ್ ಕೊಟ್ಟು ಅವನಲ್ಲಿ ಚೈತನ್ಯವುಂಟುಮಾಡಿದರು. ರೋಗಿಯು ಮಾತನ್ನು ಮುಂದುವರಿಸಿ

'ಒಂದು ಮಾತನ್ನು ಮೊದಲು ಬರೆದುಕೊಳ್ಳಿ. ಸಾಹುಕಾರ ಬಸಪ್ಪನನ್ನು ಕೊಂದವನು ನಾನು. ಅವನನ್ನು ಕೊಲ್ಲಬೇಕೆಂದು ಬಹುದಿನ ಪ್ರಯತ್ನಿಸಿ ಕಡೆಗೊಂದುದಿನ ಕತ್ತಲಲ್ಲಿ ಒಬ್ಬನೇ ಬರುತ್ತಿದ್ದುದನ್ನು ಕಂಡು ಚೂರಿಯಿಂದಿರಿದು ನನ್ನಹಗೆ ತೀರಿಸಿಕೊಂಡೆ' ಎಂದ.

ಹತ್ತಿರ ನಿಂತಿದ್ದ ಪೋಲೀಸ್ ಇಸ್ಪೆಕ್ಟರಿಗೆ ಕುತೂಹಲ ಕೆರಳಿತು. ಅದರ ವಿವರವನ್ನು ಅವನಿಂದ ಹೇಳಿಸಬೇಕೆಂದು ಮ್ಯಾಜಿಸ್ಟ್ರೇಟರನ್ನು ಕೇಳಿಕೊಂಡರು. ಅವರ ಅಪೇಕ್ಷೆಯಮೇರೆಗೆ ರೋಗಿಯು ತನ್ನ ಹಗೆತನದ ಕಾರಣವನ್ನೂ ತಾನು ಹಗೆತೀರಿಸಿಕೊಂಡ ರೀತಿಯನ್ನೂ ನಿದಾನವಾಗಿ ವಿವರಿಸಿದ. ಅವನ ಹೇಳಿಕೆಯಕಡೆ ಗಮನಕೊಟ್ಟಿದ್ದ ಜನ ಅವನ ಗಾಯದಿಂದ ಮತ್ತೆ ರಕ್ತ ಹರಿಯುತ್ತಿರುವುದನ್ನು ಗಮನಿಸಿರಲಿಲ್ಲ. ಅದರಮೇಲೆ ಹಾಕಿದ್ದ ಹತ್ತಿಯೆಲ್ಲಾ ತೊಯ್ದು ರಕ್ತ ಈಚೆ ಬರುತ್ತಿತ್ತು. ಪುನಃ ಅವನಿಗೆ ಪ್ರಜ್ಞೆತಪ್ಪಿತು.

ಡಾಕ್ಟರು ಪುನಃಬಂದು ಇಂಜಕ್ಷನ್‌ಕೊಟ್ಟರು. ದೇಹಕ್ಕೆ ಅದು ಹಿಡಿಯಲಿಲ್ಲ! ಆಗಲೇ ಅದು ಮೊಂಡಾಗಿತ್ತು. ತಮಗೆ ತಿಳಿದ ಬೇರೆ ಎಲ್ಲ ಚಿಕಿತ್ಸೆಗಳನ್ನೂ ಮಾಡಿದರು. ಯಾವುದೂ ಪುನಃ ಅವನಿಗೆ ಪ್ರಜ್ಞೆತರಲಿಲ್ಲ. ಅವನ

ಹೃದಯದಲ್ಲಿ ಅಡಗಿದ್ದ ಉಳಿದ ಎಲ್ಲ ರಹಸ್ಯಗಳೂ ಅವನಲ್ಲಿಯೇ ನಿಂತು ಹೋದವು.

ಕಳ್ಳನುಕೊಟ್ಟ ಇದೊಂದು ಹೇಳಿಕೆಯೇ ಬಹಳ ಮಹತ್ವವುಳ್ಳದಾಗಿತ್ತು. ನಿರಪರಾಧಿಯಾದೊಬ್ಬ ಮನುಷ್ಯನಿಗೆ ಈ ಕೊಲೆಯ ಸಲುವಾಗಿಯೇ ಮಾರನೆಯದಿನ ಬೆಳಗ್ಗೆ 8 ಗಂಟೆಗೆ ಫಾಸಿ ಶಿಕ್ಷೆಯಾಗುವುದಿತ್ತು. ಇನ್‌ಸ್ಪೆಕ್ಟರಿಗೆ ಬುದ್ಧಿಯು ವಿದ್ಯುಚ್ಛಕ್ತಿಯ ವೇಗದಲ್ಲಿ ಕೆಲಸಮಾಡತೊಡಗಿತು. ನಟೇಶನನ್ನು ಶಿಕ್ಷೆಗೆ ಗುರಿಪಡಿಸುವಾಗ ಎಷ್ಟು ಶ್ರದ್ಧೆತೋರಿದರೋ ಅದರ ಹತ್ತುಪಾಲು ಹೆಚ್ಚುಶ್ರದ್ಧೆ ತೋರಿ ಈಗ ಅವನನ್ನು ಉಳಿಸಬೇಕು. ಕಾಲ ಬಹಳ ಕಡಿಮೆಯಿದೆ. ಅವನನ್ನು ಉಳಿಸುವುದು ಸಾಧ್ಯವೆ?

ಇನ್‌ಸ್ಪೆಕ್ಟರು ಟೆಲಿಫೋನಿನ ಬಳಿಗೆಹೋಗಿ ತನ್ನ ಮೇಲಧಿಕಾರಿಗಳಿಗೆ ಈ ವಿವರವನ್ನೆಲ್ಲ ತಿಳಿಸಿದರು. ಇದನ್ನು ಕೇಳಿ ಅವರೂ ಚಕಿತರಾದರು. ನಿರಪರಾಧಿಯೆಂದು ತಿಳಿದಮೇಲೆ ಅವನ ಶಿಕ್ಷೆಯನ್ನು ತಪ್ಪಿಸಬೇಕಾದುದು ತಮ್ಮ ಕರ್ತವ್ಯ. ಆದರೆ ಕಾಲ ಬಹಳ ಕಡಿಮೆಯಿದೆಯಲ್ಲ!

ಆರಾತ್ರಿ ಟೆಲಿಫೋನು ಬಂಗಾರಪೇಟೆಯಿಂದ ಬೆಂಗಳೂರಿಗೆ ಬೆಂಗಳೂರಿಂದ ಬಂಗಾರಪೇಟೆಗೆ ಸಂಭಾಷಣೆಗಳನ್ನು ಲೆಕ್ಕವಿಲ್ಲದಷ್ಟುಸಲ ಒಯ್ದಿತು. ಪೋಲೀಸು ಅಧಿಕಾರಿವರ್ಗ ಮತ್ತು ನ್ಯಾಯಾಂಗಶಾಖೆ ನಿದ್ರೆಮಾಡದೆ ಒಂದು ಕ್ಷಣವೂ ವಿರಾಮ ತೆಗೆದುಕೊಳ್ಳದೆ ಕೆಲಸಮಾಡಿತು.

— ೧೧ —

ಸಮಾರಂಭದ ಏರ್ಪಾಡುಗಳ ಸಡಗರದಲ್ಲಿ ವಸಂತಳು ಹಗಲೆಲ್ಲಾ ಬೇರೆ ಯೋಚನೆಗೆ ಎಡಗೊಡದೆ ಇದ್ದಳು. ನಾಲ್ಕು ದಿನಗಳಿಂದ ನಟೇಶನನ್ನೂ ತಮ್ಮಿಬ್ಬರ ಮದುವೆಯ ಸಂಬಂಧವನ್ನೂ ಮನಸಿನಿಂದ ದೂರ ಇರಿಸುವುದರಲ್ಲಿ ಯಶಸ್ವಿಯಾಗಿದ್ದಳು. ಭಾನುವಾರ ರಾತ್ರಿ ಊಟಮಾಡಿ ಮಲಗುವುದಕ್ಕೆ ತನ್ನ ಕೋಣೆಗೆ ಹೋದಾಗ ಮೂಲೆಯಲ್ಲಿದ್ದ ಒಂದು ಮೇಜಿನಮೇಲೆ ಮರುದಿನದ ಉಪಯೋಗಕ್ಕಾಗಿ ತಾನು ತಂದಿದ್ದ ಹೊಸ ಸೀರೆಯನ್ನು ಕಟ್ಟಿದ್ದ ಹಳೆಯ ವೃತ್ತಪತ್ರಿಕೆ ಕಣ್ಣಿಗೆಬಿತ್ತು. ಪತ್ರಿಕೆಯಲ್ಲಿ ನಟೇಶನ ಭಾವಚಿತ್ರವಿತ್ತು.

ನಾಲ್ಕು ದಿನದಿಂದ ಮರೆತಿದ್ದ ನೆನಪು ಒಂದುಗೂಡಿ ಹಠಾತ್ತಾಗಿ ವಸಂತಳ ಹೃದಯವನ್ನು ಆಕ್ರಮಿಸಿಬಿಟ್ಟಿತು. ಸಿಟ್ಟಿನಿಂದ ಆ ಭಾವಚಿತ್ರವನ್ನು ಹರಿದು ಚೂರುಮಾಡಿದಳು. ಆದರೆ ಅದು ನಿರ್ಜೀವವಾಗಿದ್ದ ಕಾಗದವನ್ನು ಬಿಟ್ಟು ಬಿಸಿಯಾಗಿದ್ದ ವಸಂತಳ ಹೃದಯದೊಳಗೆ ಸೇರಿಬಿಟ್ಟಿತು. ಅಲ್ಲಿಂದ ಆಚೆಗೆ ಅದನ್ನು ಕಿತ್ತೆಳೆಯಲು ಪ್ರಯತ್ನಿಸಿದಷ್ಟೂ ಅದು ಹೆಚ್ಚು ಹೆಚ್ಚು ಭದ್ರವಾಗತೊಡಗಿತು.

ನಟೇಶನ ನೆನಪುಬಂದು ವಸಂತಳ ನಿದ್ರೆಕೆಟ್ಟಿತು. ಕಣ್ಣು ಮುಚ್ಚಿದರೆ ಯಾವ ಯಾವ ಕಂಡು ಕಾಣದ ದೃಶ್ಯಗಳೋ ಎದುರಿಗೆ ನಿಂತಂತೆ ತೋರುವುದು. ಹಾಸಿಗೆಯಲ್ಲಿ ಹೊರಳಾಡಿ ಸಾಕಾಗಿ ಎದ್ದುಕುಳಿತು ದೊಡ್ಡ ದೀಪವನ್ನು ಹತ್ತಿಸಿ ಕಾದಂಬರಿಯೊಂದನ್ನು ಓದುತ್ತ ಕುಳಿತಳು. ಹತ್ತು ಪುಟಗಳು ಓದಲಾಗಲಿಲ್ಲ. ರಾತ್ರಿ ಹನ್ನೆರಡು ಗಂಟೆಯಾದರೂ ವಸಂತಳ ಕೋಣೆಯಲ್ಲಿ ದೀಪವುರಿಯುತ್ತಿದ್ದುದನ್ನು ಕಂಡು ಗೌರಮ್ಮನು ಕೋಣೆಯೊಳಕ್ಕೆ ಬಂದು ವಸಂತಳು ಓದುತ್ತಿರುವುದನ್ನು ನೋಡಿ

'ಇದೇಕೆ ಮಗೂ ಇನ್ನೂ ಎದ್ದಿದೀಯೇ ?' ಎಂದಳು.

'ನಿದ್ದೆ ಬರಲಿಲ್ಲಮ್ಮ.'

'ಈದಿನ ರಾತ್ರಿ ನಿದ್ದೆಕಟ್ಟದರೆ ಹೇಗೆ ಮಗು ? ನಾಳೆಯೆಲ್ಲಾ ಖಂಡುಗದಷ್ಟು ಕೆಲಸ ಇದೆ. ಈಗ ನಿದ್ದೆಕಟ್ಟ ತಲೆನೋವಿನಿಂದ ನಾಳೆ ಮಲಗಿಬಿಟ್ಟರೆ ಹೇಗಮ್ಮಾ. ಕಣ್ಣು ಮುಚ್ಚಿಕೊಂಡು ಹಾಸಿಗೆಯಲ್ಲಿ ಸ್ವಲ್ಪಹೊತ್ತು ಮಲಗಿದ್ದರೆ ನಿದ್ದೆಬರುತ್ತೆ. ಮಲಗಿಕೋಮ್ಮ' ಎನ್ನುತ್ತ ಗೌರಮ್ಮ ಕಾದಂಬರಿಯನ್ನು ಅವಳ ಕೈಯಿಂದ ಕಿತ್ತು ದೂರ ಇಟ್ಟು ಚಿಕ್ಕಮಗುವನ್ನು ಕರೆದೊಯ್ಯುವಂತೆ ವಸಂತಳನ್ನು ಕರೆದೊಯ್ದು ಹಾಸಿಗೆಯ ಮೇಲೆ ಮಲಗಿಸಿ ಹೊದಿಕೆಯನ್ನು ಹೊದಿಸಿ ದೊಡ್ಡ ದೀಪವನ್ನಾರಿಸಿದಳು. ವಸಂತಳು ಹೇಳಲಾರದೆ ಹೇಳದೆ ಇರಲಾರದೆ 'ಸ್ವಲ್ಪಹೊತ್ತು ಇಲ್ಲೇ ಕುಳಿತುಕೊಂಡಿರಮ್ಮ. ನನಗೇಕೋ ದಿಗಲಾಗುತ್ತದೆ' ಎಂದಳು.

'ದಿಗಲೇಕೆ ಮಗು ; ದೇವರನ್ನು ಸ್ಮರಿಸುತ್ತ ಮಲಗು. ನಿನಗೆ ನಿದ್ದೆ ಬರುವವರೆಗೂ ನಾನೂ ಹತ್ತಿರವೇ ಕುಳಿತಿರುತ್ತೇನೆ.'

ಗೌರವ್ಮು ಮಂಚದ ಪಕ್ಕದಲ್ಲೇ ಒಂದು ಕುರ್ಚಿಯನ್ನು ಹಾಕಿಕೊಂಡು ಕುಳಿತಳು. ವಸಂತಳು ತನ್ನ ಬಲಗೈಯನ್ನು ಗೌರಮ್ಮನ ತೊಡೆಯ ಮೇಲಿಟ್ಟುಕೊಂಡು ಕಣ್ಣುಮುಚ್ಚಿದಳು. ಅವಳಿಗೆ ನಿದ್ದೆ ಚೆನ್ನಾಗಿ ಬಂತೇದು ತಿಳಿದಾಗ ಗೌರಮ್ಮ ತನ್ನ ಕೋಣೆಗೆ ಹೋಗಿ ಮಲಗಿಕೊಂಡಳು.

ಮಲಗಿದ್ದ ವಸಂತಳ ಜೀವ ಹುರಿವ ಬಾಣಲೆಯಲ್ಲಿ ಹಾಕಿದ ಹುಳುವಿನಂತೆ ರಾತ್ರಿಯೆಲ್ಲ ಒದ್ದಾಡುತ್ತಿತ್ತು. ಏನೇನೋ ಕನಸುಗಳು ಬಿದ್ದವು; ಒಂದಕ್ಕು ಮತ್ತೊಂದಕ್ಕು ಹೊಂದಿಕೆಯಿಲ್ಲ. ಜಾಗ್ರತಾವಸ್ಥೆಯಲ್ಲಿ ಕಾಣಬಯಸುವ ಅನೇಕ ದೃಶ್ಯಗಳನ್ನು ಅನುಭವಿಸಲಪೇಕ್ಷಿಸಿ ಕೈಗೆ ಎಟುಕಲಾರದ ಅನೇಕ ಸುಖಸಂತೋಷಗಳನ್ನು ಜೀವ ನಿದ್ರಿಸುವಾಗ ಸ್ವಪ್ನದಲ್ಲಿ ಕಂಡು ತೃಪ್ತಿಪಡುತ್ತದೆ. ಮನಸು ಸಂತೋಷವಾಗಿರುವಾಗ ಸಮಾಧಾನವಾಗಿರುವಾಗ ಬೀಳುವ ಇಂಥ ಸ್ವಪ್ನಗಳು ಸುಖದಾಯಕವಾಗಿರುವುದಾದರೆ ಅದು ಶೋಕ ಭಯ ತಪ್ತವಾಗಿರುವಾಗ ಅವು ಘೋರರೂಪವನ್ನು ತಾಳಿರುತ್ತವೆ. ಇಂಥ ಸಣ್ಣಪುಟ್ಟ ಹಲವಾರು ಸ್ವಪ್ನಗಳು ವಸಂತಳ ತಲೆಯಲ್ಲಿ ಸುಳಿದುಹೋದವು. ಇನ್ನೇನು ತೀರ ಬೆಳಕು ಹರಿಯಿತೆನ್ನುವ ಸಮಯದಲ್ಲಿ ಅವಳು ಗಂಧರ್ವ ಕನ್ಯೆಯಂತೆ ಸಿಂಗರಿಸಿಕೊಂಡು ಯಾವುದೋ ಅತಿರಮಣೀಯವಾದ ಉದ್ಯಾನ ವನದಲ್ಲಿ ಹಾಡುತ್ತ ಕುಣಿಯುತ್ತ ಮರದಿಂದ ಮರಕ್ಕೆ ಲತೆಯಿಂದ ಲತೆಗೆ ಹಾರುತ್ತ ವಿವಿಧಬಣ್ಣದ ಹೂಗಳನ್ನು ಕಿತ್ತು ಅದಾವುದೋ ಮಾಯೆಯಲ್ಲಿ ಅವುಗಳನ್ನು ಮಾಲೆಯಾಗಿ ಪರಿವರ್ತಿಸಿ ಕೈಯಲ್ಲಿ ಹಿಡಿದು ಕೊರಳಲ್ಲಿ ಹಾಕಿ ತೂಗಾಡುತ್ತ ವನವೆಲ್ಲ ಸಂಚರಿಸುತ್ತಿರುವಂತೆ, ಮೋಡಗಳ ಮರೆಯಿಂದ ಭೂಮಿಗಿಳಿದು ದೇವನೊಬ್ಬನು ತನ್ನನ್ನು ಅರಸುತ್ತಬಂದು ತನ್ನ ಪಾದದಡಿ ಕುಳಿತು ತನ್ನ ಪ್ರೇಮಭಿಕ್ಷೆ ಬೇಡುತ್ತಿರುವಂತೆ, ಗಂಧರ್ವನೋ ವಿದ್ಯಾಧರನೋ ಕಿನ್ನರನೋ ಇವನಾರೆಂದು ಯೋಚಿಸುತ್ತ ಅವನ ಸೌಂದರ್ಯವನ್ನು ಕಂಡು ಹಿಗ್ಗುತ್ತ ಅವನ ನಗೆಮುಗುಳನ್ನು ವಿಕಸಿತಗೊಳಿಸುವಂತೆ ತನ್ನ ಕಣ್ಗಳಿಂದ ಪ್ರೇಮಕಿರಣಗಳನ್ನು ಬೀರುತ್ತ ಅವನ ಕೈಗಳನ್ನು ಹಿಡಿದು ಮೇಲಕ್ಕೆತ್ತಿ ವನದಲ್ಲಿ ಜಲದಲ್ಲಿ ಗಗನದಲ್ಲಿ ವಿಶ್ವವನ್ನೇ ಮರೆತು ವಿಹರಿಸುತ್ತ ಆಡುತ್ತ ಪಾಡುತ್ತ ಕುಣಿಯುತ್ತ ಸುಖದ ಸಾಮ್ರಾಜ್ಯದಲ್ಲಿ ಮೆರೆಯುತ್ತಿರುವಂತೆ, ಆಗ ಒಮ್ಮಿಂದೊಮ್ಮೆಯೇ ಯಾವುದೋ ಅತಿಕರ್ಕಶವಾದ ಕರ್ಣಕಠೋರವಾದ

ಬ್ರಹ್ಮಾಂಡವೇ ಒಡೆದು ಚೂರಾದಂತೆ ತೋರುವ ಶಬ್ದವೊಂದು ಕೇಳಿ ಪ್ರಪಂಚ ವೆಲ್ಲವೂ ಗಾಢಾಂಧಕಾರದಲ್ಲಿ ಮುಳುಗಿದಂತೆ ಬಿರುಗಾಳಿ ತನ್ನನ್ನು ತನ್ನ ಪ್ರಿಯತಮನಿಂದ ಬೇರೆಮಾಡಿ ಎತ್ತಲೋ ಒಯ್ದಂತೆ ನಿಲ್ಲುವುದಕ್ಕೆ ನೆಲ ನಿಲುಕದೆ ಹಿಡಿದುಕೊಳ್ಳಲು ಆಶ್ರಯ ದೊರಕದೆ ತಾನು ಆ ಕತ್ತಲಲ್ಲಿ ತತ್ತರಿಸುತ್ತಿರುವಂತೆ ವಸಂತಳಿಗೆ ತೋರತೊಡಗಿತು.

ಆ ಕತ್ತಲಲ್ಲಿ ಅವಳ ಕಣ್ಣಿಗೆ ಕಾಣುತ್ತಿದ್ದುದು ಒಂದೇವಸ್ತು—ಅದು ನಟೇಶನ ತಲೆ; ಅವನ ಕುತ್ತಿಗೆಗೆ ಹಾಕಿದ್ದ ನೇಣು ಸಮೇತ ಅಂಧಕಾರದಲ್ಲಿ ತೂಗಾಡುತ್ತಿದ್ದ ನಟೇಶನತಲೆ. ತನ್ನನ್ನು ಕಂಡು ಅದು ಕಟಕಟನೆ ಹಲ್ಲು ಕಡಿದು ಕಣ್ಣುಗಳನ್ನು ಅರಳಿಸಿ ವಿಶ್ವವೆಲ್ಲವೂ ಸಿಡಿದುಹೋಗುವಂತೆ ವಿಕಟವಾಗಿ ನಗುತ್ತಿದೆ. ಸಹಾಯಕ್ಕೆ ಯಾರನ್ನಾದರೂ ಕೂಗೋಣವೆಂದು ಪ್ರಯತ್ನಿಸಿ ದಳು, ಬಾಯಲ್ಲಿ ಧ್ವನಿ ಹೊರಡದು; ಏಳಬೇಕೆಂದು ಅಲ್ಲಿಂದ, ಓಡಬೇಕೆಂದು ಪ್ರಯತ್ನಿಸಿದಳು, ಅಂಗಗಳಲ್ಲಿ ಚೈತನ್ಯವಿರಲಿಲ್ಲ. ಜೀವ ಆ ಯಾತನೆಯನ್ನನು ಭವಿಸಲಾರದೆ ಬಹಳಹೊತ್ತು ತೊಳಲಿತು. ಕಡೆಗೊಮ್ಮೆ ಅವಳು ಧೈರ್ಯ ಮಾಡಿ ಸಾಹಸಮಾಡಿ 'ಅಮ್ಮಾ' ಎಂದು ಕಿರಿಚಿಕೊಂಡುಬಿಟ್ಟಳು.

ಪಕ್ಕದ ಕೋಣೆಯಲ್ಲಿ ಮಲಗಿದ್ದ ಗೌರಮ್ಮನಿಗೆ ಎಚ್ಚರವಾಗಿತ್ತು. ವಸಂತಳು ಕಿರಿಚಿಕೊಂಡ ಸದ್ದನ್ನು ಕೇಳಿ ಒಡನೆಯೇ ಅವಳ ಕೋಣೆಯೊಳಕ್ಕೆ ಬಂದು ಇನ್ನೂ ಕನವರಿಸುತ್ತ ಯಾತನೆ ಪಡುತ್ತಿದ್ದ ವಸಂತಳನ್ನು ಎಚ್ಚರ ಗೊಳಿಸಿ

'ಏಕೆಮಗು, ಏನಾಯಿತು.' ಎಂದು ಕೇಳಿದಳು. ಎಚ್ಚರಿಕೆಗೊಂಡ ವಸಂತಳು ಗೌರಮ್ಮನನ್ನು ಗಟ್ಟಿಯಾಗಿ ಅಪ್ಪಿಕೊಂಡು

'ನನಗೆ ಭಯವಾಗುತ್ತಿದೆ ಅಮ್ಮ; ನನ್ನನ್ನು ಬಿಟ್ಟುಹೋಗಬೇಡ' ಎಂದಳು.

'ಏಕಮ್ಮ ಇಷ್ಟು ದಿಗಲುಪಡುತ್ತೀ?'

'ಏನೇನೋ ಕೆಟ್ಟ ಕನಸಾಯಿತು.'

'ಹಾಗಿಯ ಕನಸು, ಅದೇನುಮಾಡುತ್ತೆ ಬಿಡು. ಆಗಲೇ ಬೆಳಕೂ ಹರಿಯಿತು. ದೇವರಿಗೆ ಕೈಮುಗಿದು ಏಳು. ಐದುಗಂಟೆ ಹೊತ್ತಾಯಿತು.'

ಐದು ಗಂಟೆ! ಗಂಟೆಯ ಅರಿವು ಪುನಃ ನಟೇಶನ ನೆನಪುಕೊಟ್ಟಿತು. ಇನ್ನು ಮೂರು ಗಂಟೆಗೆ ಅವನನ್ನು ಗಲ್ಲಿಗೆಹಾಕುತ್ತಾರೆ. ತನ್ನ ಗಂಡ—ಗಂಡತನದ ಯಾವುದೊಂದು ಸಂಬಂಧವೂ ಇಲ್ಲದೆ ತನ್ನ ಅನುಕೂಲಕ್ಕಾಗಿ ಒದಗಿದ ಗಂಡ—ತನ್ನದಲ್ಲದ ಈ ಜಗತ್ತನ್ನು ತನ್ನವಳಲ್ಲದ ಈ ಹೆಂಡತಿಯನ್ನು ಬಿಟ್ಟುಹೋಗುತ್ತಾನೆ. ರೈಲು ಪ್ರಯಾಣದಲ್ಲಿ ಒಂದು ಸ್ಟೇಷನ್ನಿನವರೆಗೆ ಗಾಡಿಯಲ್ಲಿ ಕುಳಿತು ಗುರುತಾಗಿ ಇಳಿದುಹೋಗುವ ಪ್ರಯಾಣಿಕನಂತೆ ತನ್ನ ಜೀವನಯಾತ್ರೆಯಲ್ಲಿ ಒಮ್ಮೆ ಗುರುತಾಗಿ ತನ್ನಿಂದಾದಷ್ಟು ಉಪಕಾರಮಾಡಿ ಕಣ್ಮರೆಯಾಗುತ್ತಾನೆ. ಉಪಕಾರವೇನು? ತಾನು ಒಂದುಸಾವಿರ ರೂಪಾಯಿಗಳನ್ನು ಕೊಟ್ಟು ಅದನ್ನು ಕೊಂಡುಕೊಂಡೆ. ಹಣದ ಆಸೆಗಾಗಿ ಅವನು ನನ್ನನ್ನು ಮದುವೆಯಾದ; ಅಲ್ಲಿಗೆ ತನ್ನ ಅವನ ಸಂಬಂಧ ತೀರಿತು. ಹಾಗಿದ್ದರೂ ಅವನ ಯೋಚನೆ ತನಗೇಕೆ?

ಗಂಡ! ಗಂಡ! ಗಂಡ! ಆ ಎರಡು ಅಕ್ಷರಗಳಲ್ಲಿ ಇಷ್ಟು ಶಕ್ತಿಯಿದೆ ಯೆಂಬ ಕಲ್ಪನೆ ವಸಂತಳಿಗೆ ಇರಲಿಲ್ಲ. ಅವನು ಯಾರೇ ಆಗಲಿ ಏನೇ ಆಗಿರಲಿ ತನ್ನ ಗಂಡ; ಜೀವನದಲ್ಲಿ ತನಗೆ ಮುತ್ತೈದೆತನದ ಒಂದು ಸಂಪತ್ತನ್ನು ಒಂದು ಅಂತಸ್ತನ್ನು ಗೌರವವನ್ನು ಕೊಟ್ಟಿರುವ ಗಂಡ. ಉಳಿದವರು ಎಷ್ಟೇ ಹಿತರಾದರೂ, ವಿದ್ಯೆ, ಧನ, ಯೌವನ ಚತುರತೆಗಳಲ್ಲಿ ಎಷ್ಟೇ ಹೆಚ್ಚಿನವರಾದರೂ ಅವನಿಗೆ ಸರಿಬರಲಾರರು.

ಅಯ್ಯೋ! ತಾನೆಂಥ ತಪ್ಪುಮಾಡಿದೆ! ಆಸ್ತಿಯನ್ನು ಪಡೆಯುವುದಕ್ಕೆ ಬೇರೆ ಏನಾದರೂ ಆಲೋಚನೆ ಮಾಡಬೇಕಾಗಿತ್ತು. ಅವನು ಯಾರೆಂದು ತನ್ನ ಸ್ನೇಹಿತರಿಗೆ ತಿಳಿಯದೆ ಇರುತ್ತದೆಯೆ; ತಾನು ವಿಧವೆಯೆಂದು ಅವರು ತಿಳಿದಾಗ ಅವರಿಗೆ ಮುಖ ತೋರಿಸುವುದು ಹೇಗೆ?

ಮುಖ ತೊಳೆಯುತ್ತ ವಸಂತಳು ಇದೆಲ್ಲ ಯೋಚನೆಗಳನ್ನೂ ಮಾಡುತ್ತಿದ್ದಳು. ಅವಳು ಅನ್ಯಮನಸ್ಕಳಾಗಿದ್ದಾಳೆಂದು ಗೌರಮ್ಮನಿಗೆ ಹೊಳೆಯಿತು. ಆದರೆ ಇತರ ಹೆಂಗಸರಂತೆ ಯಾವ ಮಾತನ್ನೂ ಕೆಣಕಿ ಮೇಲಕ್ಕೆಳೆಯುವ ಸ್ವಭಾವ ಅವಳದಲ್ಲ. ತನಗೆ ತಿಳಿಸಬಹುದಾದ ವಿಷಯವಾದರೆ ವಸಂತಳೇ ತಿಳಿಸುತ್ತಾಳೆ; ಹಾಗಿಲ್ಲದೆ ಅದು ಮರೆಮಾಚುವ ಮಾತಾಗಿದ್ದರೆ ಅದರ ಚಿಂತೆ ತನಗೇಕೆ ಎನ್ನುವ ಸ್ವಭಾವ ಅವಳದು. ಆದರೂ ಸಾಕಿದ ಮಮತೆಯಿಂದ

ವಸಂತಳ ಹೃದಯದಲ್ಲಿ ಆಗುತ್ತಿದ್ದ ಈ ತಳಮಳವನ್ನು ಸಮಾಧಾನಗೊಳಿಸಲು ಸಮಯ ನೋಡುತ್ತಿದ್ದಳು.

ವಸಂತಳು ಮುಖ ತೊಳೆಯುವ ವೇಳೆಗೆ ಭಟ್ಟನು ಕಾಫಿ ತಂದಿಟ್ಟ. ಕೋಣೆಯಲ್ಲಿ ತಗಲುಹಾಕಿದ್ದ ಗಡಿಯಾರದಲ್ಲಿ ಅರ್ಧಗಂಟೆ ಹೊಡೆಯಿತು. ವಸಂತಳು ಬೆಚ್ಚಿಬಿದ್ದಳು.

'ಬೆಚ್ಚಿದೆಯೇಕೆಮಗು ? ಗಡಿಯಾರ ಗಂಟೆ ಹೊಡೆಯಿತು.'

'ಥೂ ಹಾಳು ಗಡಿಯಾರ, ಎದೆಯಮೇಲೆ ಹೊಡೆದಹಾಗೆ ಗಂಟೆ ಹೊಡೆಯುತ್ತೆ. ಸ್ವಲ್ಪವಾದರೂ ನಯವೇ ಇಲ್ಲ.'

'ನಿಮ್ಮ ತಾತನ ಕಾಲದ್ದಮ್ಮ, ಬಹಳ ಗಟ್ಟಿಯಾದ್ದು. ಹಿಂದಿನ ಕಾಲದವರ ಕೆಲಸವೆಲ್ಲಾ ಹೀಗೇ ತಾಯಿ, ಬಹಳ ಬಂದೋಬಸ್ತಾದ್ದು.'

ಎಂದರೆ ! ಗೌರಮ್ಮ ಹೇಳಿದ್ದು ವಸಂತಳ ತಾತನು ಬರೆದಿಟ್ಟ ಉಯಿಲಿನ ಮಾತೆ ?

ವಸಂತಳ ಮನಸ್ಸು ಪುನಃ ಯೋಚನೆಯಲ್ಲಿ ಮುಳುಗುವುದಕ್ಕೆ ಬಿಡದೆ ಗೌರಮ್ಮನು ಅವಳನ್ನು ಸ್ನಾನಕ್ಕಾಗಿ ಕರೆದೊಯ್ದಳು. ಆ ದಿನ ಮಾಡ ಬೇಕಾದ ಕೆಲಸ ಬಹಳ ಇತ್ತು. ಅಂದಿನ ಸಮಾರಂಭಕ್ಕಾಗಿ ಪೇಟೆಯಲ್ಲಿ ಕರಬೇಕಾದ ಸಾಮಾನುಗಳು ಇನ್ನೂ ಕೆಲವಿದ್ದುವು. ಬೇಗ ಸ್ನಾನ ಫಲಾ ಹಾರಗಳನ್ನು ಮುಗಿಸಿಕೊಂಡು ಎಂಟೂವರೆಗಂಟೆಯೊಳಗಾಗಿ ಪೇಟೆಗೆ ಹೋಗ ಬೇಕೆಂದು ಹಿಂದಿನದಿನವೇ ಮಾತಾಗಿತ್ತು. ಅದರಿಂದ ಕಾಲ ಕಳೆಯದೆ ವಸಂತಳನ್ನು ಸ್ನಾನಕ್ಕೆ ಕರೆದೊಯ್ದು ಗೌರಮ್ಮನು ಬೇರೆ ಯಾವುದೋ ಸಣ್ಣ ಪುಟ್ಟ ಕೆಲಸಗಳ ಕಡೆಗೆ ಹೊರಟಳು.

ಸ್ನಾನ ಮುಗಿಸಿಕೊಂಡು ಶುಭ್ರವಾದ ಸೀರೆಯನ್ನುಟ್ಟು ವಸಂತಳು ಫಲಾಹಾರಕ್ಕಾಗಿ ಕುಳಿತಳು. ತಿಂಡಿ ಅದೇಕೋ ರುಚಿಸುತ್ತಿರಲಿಲ್ಲ ; ಅಲ್ಲದೆ ತುತ್ತು ತುತ್ತಿಗೂ ಅದು ಗಂಟಲಲ್ಲಿ ಹಿಡಿಯುತ್ತಿತ್ತು. ತಿಂಡಿ ಏನೇನೂ ಚೆನ್ನಾಗಿಲ್ಲವೆಂದು ಭಟ್ಟನನ್ನು ಬಯ್ಯುತ್ತ ಅದನ್ನಷ್ಟುದೂರ ತಳ್ಳಿದಳು. ಬೈಸಿಕೊಂಡ ಭಟ್ಟ ಬದಲು ಮಾತಾಡದೆ ಯಜಮಾನಿಗೆ ಕಾಫಿ ಬೆರೆಸಿಕೊಟ್ಟು ದೂರದಲ್ಲಿ ಹೋಗಿನಿಂತು ಅದಕ್ಕಿನ್ನೇನು ಆಶೀರ್ವಾದವಾಗುವುದೋ ಎಂದು ನಿರೀಕ್ಷಿಸುತ್ತಿದ್ದ. ವಸಂತಳ ಮನಸ್ಸು ಅಪ್ರಯತ್ನವಾಗಿ ನಟೇಶನ ಕಡೆಗೆ

ಹರಿದಿತ್ತು. ಆಗಲೇ ಏಳುಗಂಟೆಯಾಗಿತ್ತು. ಇನ್ನೊಂದು ಗಂಟೆಯಲ್ಲಿ ಅವನಿಗೆ ಫಾಸಿಯಾಗುತ್ತದೆ. ಆ ಯೋಚನೆಯಿಂದ ಮನಸ್ಸನ್ನು ತಿರುಗಿಸ ಬೇಕೆಂದು ಬೆಳಗಿನಿಂದ ಹಲವುಬಾರಿ ವಸಂತಳು ಪ್ರಯತ್ನಿಸಿದ್ದಳು; ಅವಳು ಪ್ರಯತ್ನಿಸಿದಷ್ಟೂ ಅದು ಅತ್ತಕಡೆಗೇ ಹೋಗುತ್ತಿತ್ತು. ಅದು ಕಂಡಾಗಲೆಲ್ಲ ಮೈ ಅದುರುವುದು; ಮುಖ ಕಾಂತಿಹೀನವಾಗುವುದು; ಶರೀರವೆಲ್ಲ ನಿರ್ಬಲ ವಾಗುವುದು.

ಬೆಳ್ಳಿಯ ಬಟ್ಟಲಲ್ಲಿ ಹದವಾಗಿ ಬೆರೆಸಿಟ್ಟಿದ್ದ ಕಾಫಿಯನ್ನು ಕುಡಿಯುತ್ತ ವಸಂತಳ ಮನಸ್ಸು ಮತ್ತೆ ನಟೇಶನಕಡೆಗೆ ಹೋಗಿತ್ತು. ಅದೇ ಭ್ರಾಂತಿ ಯಲ್ಲಿದ್ದ ಅವಳಿಗೆ ರಾತ್ರಿ ಸ್ವಪ್ನದಲ್ಲಿ ಕಂಡ ನಟೇಶನ ತಲೆ ಘೋರವಾಗಿ ವಿಕಟವಾಗಿ ವಿಕಾರವಾಗಿ ಕಾಫಿಯಲ್ಲಿ ಕಾಣಿಸಿತು. ವಸಂತಳು 'ನಟೇಶ್, ನಟೇಶ್' ಎಂದು ಚೀರಿ ಬಟ್ಟಲನ್ನು ಕೈಯಿಂದ ಕೆಳಕ್ಕೆ ಬಿಟ್ಟುಬಿಟ್ಟಳು. ಕಾಫಿಯು ಕೆಳಗೆ ಚೆಲ್ಲಿ ಉಟ್ಟಿದ್ದ ಬಟ್ಟೆಯೆಲ್ಲ ಕೊಳೆಯಾಯಿತು. ಬಟ್ಟಲು ಬಿದ್ದ ಶಬ್ದ ಅವಳನ್ನು ಎಚ್ಚರಿಸಿತ್ತು. ಭಟ್ಟನು ದೂರದಲ್ಲೇ ನಿಂತಿದ್ದ. ಅಡಿಗೆಯ ಆಳಿನಮುಂದೆ ತಾನು ಹೀಗೆ ಚೀರಿದುದಕ್ಕೆ ಅವಳಿಗೆ ನಾಚಿಕೆಯಾಗಿ ಮುಖವು ಕೆಂಪಾಯಿತು. ಭಟ್ಟನು ಹತ್ತಿರಬಂದು ಕೆಳಗೆ ಬಿದ್ದಿದ್ದ ಬಟ್ಟಲನ್ನು ಮೇಲಕ್ಕೆ ಎತ್ತಿಡುತ್ತ 'ಬೇರೆ ಕಾಫಿ ತರಲೆ ತಾಯಿ' ಎಂದ. ವಸಂತಳಿಗೆ ಯಾವುದೂ ಬೇಡವಾಗಿತ್ತು. ಕೈಯ ಸಂಜ್ಞೆಯಿಂದ ಬೇಡವೆಂದು ಹೇಳಿ ಅವನನ್ನು ಅಲ್ಲಿಂದ ಹೊರಡ ಹೇಳಿದಳು. ಯಜಮಾನಿಯ ಮನಸ್ಸು ಏಕೋ ಸರಿಯಾಗಿಲ್ಲವೆಂದು ಅವನು ಮನಸಿನಲ್ಲೇ ಮರುಗುತ್ತ ಅಲ್ಲಿನ ತಟ್ಟೆ ಬಟ್ಟಲುಗಳನ್ನು ತೆಗೆದುಕೊಂಡು ಹೊರಕ್ಕೆಹೋದ. ಚೆಲ್ಲಿದ್ದ ಕಾಫಿಯನ್ನು ಒರಸುವುದಕ್ಕಾಗಿ ಆಳು ರಂಗ ಒಂದು ಬಟ್ಟೆಯನ್ನು ತಂದು ಒರಸುತ್ತಿದ್ದ. ಬರುತ್ತ ರೇಡಿಯೋ ಸಂಗೀತ ಬರುವ ವೇಳೆಯಾಯಿತೆಂದು ಸ್ವಿಚ್‌ಹಾಕಿ ನೆಲವನ್ನು ಒರಸುತ್ತಿದ್ದ.

ವಸಂತಳ ಮನಸ್ಸು ಶಾಂತಿಯನ್ನು ಬಯಸುತ್ತಿತ್ತು. ಪ್ರಪಂಚದಲ್ಲೆಲ್ಲ ಏನೋ ಒಂದು ದೊಡ್ಡ ಆಂದೋಲನವು ನಡೆಯುತ್ತಿದ್ದಹಾಗೆ, ಯಾವುದೋ ಮಹಾಯುದ್ಧ ನಡೆಯುತ್ತಿರುವೆಡೆ ಕಿವಿಗೆ ಬೀಳದೆ ಮನಸಿನಮೇಲೆ ಮಾತ್ರ ಪರಿಣಾಮ ಮಾಡುತ್ತಿರುವ ಬಾಂಬು ಫಿರಂಗಿಗಳ ಆರ್ಭಟ ದಮುಥ್ಯೆ ಕಾನಿರು

ವಂತೆ ಅವಳಿಗೆ ತೋರುತ್ತಿತ್ತು. ಕಾಫಿಯ ಕರೆಯಿಂದ ಮಲಿನವಾಗಿದ್ದ ಸೀರೆಯನ್ನು ಸಹ ಬದಲಾಯಿಸದೆ ಕಿಟಕಿಯಬಳಿಗೆ ಹೋಗಿ ಅತ್ತ ಕಡೆಯಿಂದ ಶಾಂತಿಯೇನಾದರೋ ಬರುವುದೇನೋ ಎಂದು ನೋಡುತ್ತಿರುವಳಂತೆ ನಿಂತಿದ್ದಳು. ಆಚೆ ಬೀದಿಯಲ್ಲಿ ಬೆಳಗಿನ ವೃತ್ತಪತ್ರಿಕೆಯನ್ನು ಮಾರುವ ಹುಡುಗ ತನಗೆ ದೇವರು ಆ ಎಳೆವಯಸ್ಸಿನಲ್ಲಿ ಕೊಟ್ಟಿದ್ದ ತಾರಸ್ವರವನ್ನು ದುರುಪಯೋಗಪಡಿಸಿಕೊಳ್ಳುತ್ತ 'ನಟೇಶನಿಗೆ ಫಾಸಿ, ನಟೇಶನಿಗೆ ಫಾಸಿ, ಫಾಸಿಯ ಸಮಾಚಾರಗಳು,' ಎಂದು ಒಂದೇ ಸಮನೆ ಅರಚಿಕೊಳ್ಳುತ್ತಿದ್ದ. ಕೇಳಲಾರದೆ ವಸಂತಳು ಎರಡು ಕಿವಿಗಳನ್ನೂ ಮುಚ್ಚಿಕೊಂಡಳು; ಆದರೂ ಆ ಮಾತುಗಳು ಕೈಯೊಳಗೆ ತೂರಿ ಕಿವಿಯನ್ನು ಕೊರೆಯತೊಡಗಿದವು. ತಡೆಯಲಾರದೆ ವಸಂತಳು ತನ್ನ ಸೇವಕರನ್ನು ಕೂಗಿ ಆ ಹುಡುಗನನ್ನು ದೂರ ಓಡಿಸಹೇಳಿದಳು. ದಣಿಯ ಅಪ್ಪಣೆಯನ್ನು ನಡೆಸಲು ಬೋರ, ರಂಗ ಇಬ್ಬರೂ ಪತ್ರಿಕೆಮಾರುವ ಆ ಬಡಪಾಯಿ ಹುಡುಗನಮೇಲೆ ಆರ್ಭಟಿಸುತ್ತ ಹೋಗಿ ಅವನನ್ನು ದೂರಸೇರಿಸಿದರು.

ಹುಡುಗನನ್ನು ಓಡಿಸಲು ಹೇಳಿ ವಸಂತಳು ಕಿಟಕಿಯಿಂದ ಹಿಂತಿರುಗಿ ಬಂದು ಒಂದು ಸೋಫಾದಮೇಲೆ ಕುಕ್ಕರಿಸಿ ತಲೆಯನ್ನು ಬಲಗೈಯಲ್ಲಿ ಒತ್ತಿ ಹಿಡಿದಳು. ಕೋಣೆ ಒಂದು ನಿಮಿಷ ನಿಶ್ಶಬ್ದವಾಗಿದ್ದಂತೆ ತೋರಿತು; ಅಷ್ಟರಲ್ಲೇ ರೇಡಿಯೋ ಹಾಡತೊಡಗಿತು. 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂದು ಕಿರಿಚಿಕೊಳ್ಳಲು ಪ್ರಾರಂಭಿಸಿತು. ಯಾವನಾಡು ಉದಯವಾಗುವುದೂ ವಸಂತಳಿಗೆ ಬೇಕಿರಲಿಲ್ಲ; ತನ್ನ ನಾಡೇ ಈಗ ಅಸ್ತಮಿಸುತ್ತಿರುವಂತೆ ತೋರುತ್ತಿತ್ತು. ಅವಳಿಗೀಗ ಬೇಕಾಗಿರುವುದು ಶಾಂತಿ, ಶಾಂತಿ. ಕೂತವಳು ತಟ್ಟನೆ ಮೇಲಕ್ಕೆದ್ದು ರೇಡಿಯೋ ಬಳಿಗೆ ಹೋಗುತ್ತ 'ಥೂ, ಏನು ಗಲಾಟೆಯಪ್ಪಾ ಇದು; ಈ ಮನೆ ಒಂದು ಸಂತೆಯಾಗಿಬಿಟ್ಟಿದೆ' ಎಂದು ಆರ್ಭಟಿಸಿ ರೇಡಿಯೋವನ್ನು ನಿಲ್ಲಿಸಿಬಿಟ್ಟು ಬಹಳ ಆಯಾಸಪಟ್ಟವಳಂತೆ ದೊಡ್ಡದಾಗಿ ಉಸಿರುಬಿಡುತ್ತ ಬೇರೊಂದು ಸೋಫಾದಲ್ಲಿ ಕುಳಿತುಕೊಂಡು ತಲೆಯನ್ನು ಸೋಫಾದ ದಿಂಡಿನಮೇಲೆ ಒರಗಿಸಿ ಕಣ್ಣು ಮುಚ್ಚಿದಳು.

ಕೋಣೆಯಲ್ಲೀಗ ನಿಶ್ಶಬ್ದವಾಗಿತ್ತು. ವಸಂತಳ ಅಸಮಾಧಾನದ ಸವಿಯನ್ನರಿತಿದ್ದ ಆಳುಗಳು ಯಾರೂ ಒಳಗೆ ಇಣಿಕಿ ನೋಡುವುದಕ್ಕು ಸಹ ಹೆದರಿ ಹೊರಗಡೆಯೇ ಗಟ್ಟಿಯಾಗಿ ಉಸಿರುಕೂಡ ಬಿಡದೆ ಇದ್ದರು. ಗೌರಮ್ಮ

ಅಡಿಗೆಯ ಮನೆಯಲ್ಲಿ ಬೇರೆ ಏನೋ ಕೆಲಸದಲ್ಲಿದ್ದಳು. ತಾನು ಬಯಸಿದ ಶಾಂತಿಯು ಮೌನವು ದೊರಕಿತೆಂದು ವಸಂತಳು ಸಮಾಧಾನಪಡುವಷ್ಟರಲ್ಲಿ ಏನೋ ಒಂದು ಶಬ್ದವು ಸೆಕೆಂಡಿಗೊಮ್ಮೆ ಮನಸ್ಸನ್ನು ತಾಡಿಸತೊಡಗಿತು. ಆ ತಾಡನವು ಮೊದಮೊದಲು ನಿರ್ಲಕ್ಷಿಸುವಷ್ಟು ಅಲ್ಪವಾಗಿದ್ದುದು ಬರುಬರುತ್ತ ಪ್ರಬಲವಾಗಿ ಕಡೆಗೆ ಅವಳ ಕೋಣೆಯನ್ನು, ಮನೆಯನ್ನು, ಊರನ್ನು, ವಿಶ್ವವನ್ನು ತುಂಬುವಷ್ಟು ಬೃಹದಾಕಾರವನ್ನು ತಾಳತೊಡಗಿತು. ಅದೇನೆಂದು ವಸಂತಳು ತಲೆಯೆತ್ತಿ ಕೋಣೆಯಲ್ಲಿ ಸುತ್ತಲೂನೋಡಿದಳು. ತನ್ನ ತಾತನಕಾಲದ ಹಳೆಯ ಗಡಿಯಾರವೊಂದು 'ಥಕ್-ಥಕ್-ಥಕ್-ಥಕ್' ಎಂದು ಆರ್ಭಟಿಸುತ್ತಿತ್ತು. ಮುಖವನ್ನು ಸಿಂಡ್ರಿಸಿಕೊಂಡು ವಸಂತಳು ಮೇಲಕ್ಕೆದ್ದು ಗಡಿಯಾರವನ್ನು ನಿಲ್ಲಿಸಿಬಿಟ್ಟಳು. ತನ್ನ ಮನೆಯ ಸೇವಕರು, ಅಡಿಗೆಯವರು ರೇಡಿಯೋ ಗಡಿಯಾರ ಎಲ್ಲವಸ್ತುಗಳೂ ಈದಿನ ತನ್ನಮೇಲೆ ಏನೋ ಪಿತೂರಿ ನಡೆಸಿರುವಂತೆ ವಸಂತಳಿಗೆ ತೋರುತ್ತಿತ್ತು. ತನ್ನ ತಾತನ ಚೇತನವು ಅವನು ಬಿಟ್ಟು ಹೋದ ಎಲ್ಲ ವಸ್ತುಗಳಲ್ಲೂಸೇರಿ ತನ್ನನ್ನು ಈಗ ಹಾಸ್ಯಮಾಡುತ್ತಿರುವಂತೆ, ಛೇಡಿಸುತ್ತಿರುವಂತೆ ಅವಳು ಭಾವಿಸಿದಳು. ಇದಾವುದಕ್ಕೂ ಹೆದರಬಾರದೆಂಬಂತೆ ಅವಳು ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತ ಕೋಣೆಯಲ್ಲಿ ಶತಪಥ ತಿರುಗತೊಡಗಿದಳು.

ಎಲ್ಲಿಂದಲೋ ಮತ್ತೆ ಶಬ್ದ 'ಟಿಕ್-ಟಿಕ್-ಟಿಕ್-ಟಿಕ್' ಎಂದು ಕೇಳಿಸತೊಡಗಿತು. ಅದು ಬರುಬರುತ್ತ ಹೆಚ್ಚಾಗತೊಡಗಿತು. ಈ ಹಾಳು ಗಡಿಯಾರಗಳು ಈದಿನ ಬೇಕಾಗಿ ಇಷ್ಟು ಶಬ್ದಮಾಡುತ್ತಿವೆ; ಎಂಟುಗಂಟೆಯಾಗುವ ನೆನಪನ್ನು ಇವು ಹಟತೊಟ್ಟು ನನ್ನ ಮುಂದಿಡುತ್ತಿವೆ ಎಂದು ವಸಂತಳು ಆ ಶಬ್ದ ಬರುವ ಸ್ಥಳವನ್ನು ಹುಡುಕತೊಡಗಿದಳು. ಕನ್ನಡಿಯಿದ್ದ ಮೇಜಿನ ಒಳಗಿನಿಂದ ಶಬ್ದ ಬರುತ್ತಿತ್ತು. ಅದನ್ನು ತೆಗೆದು ನೋಡಿದರೆ ತನ್ನ ಕೈ ಗಡಿಯಾರ—ಹುಣಸೆಯ ಬೀಜದಷ್ಟಗಲಕೂಡ ಇಲ್ಲದ ಆ ಚಿಕ್ಕವಸ್ತು—ಇಷ್ಟು ಶಬ್ದ ಮಾಡುತ್ತಿದೆ. ಸಿಟ್ಟಿನಿಂದ ವಸಂತಳು ಅದನ್ನು ಬೀಸಿ ಕಂಸನು ದೇವಕಿಯ ಮಕ್ಕಳನ್ನು ಎಸೆದಂತೆ ನೆಲದ ಮೇಲೆಸೆದಳು. ಅಷ್ಟು ಆರ್ಭಟಿಸುತ್ತಿದ್ದ ಗಡಿಯಾರ ನುಚ್ಚುನೂರಾಗಿ ಹೋಯಿತು.

ತನ್ನ ವೈರಿಗಳೆಲ್ಲ ನಿರ್ನಾಮವಾದರೆಂಬ ಸಮಾಧಾನದಿಂದ ವಸಂತಳು ಮೇಜಿನ ಎದುರಿಗಿದ್ದ ಮೆತ್ತನೆಯ ಕುರ್ಚಿಯಮೇಲೆ ಕುಳಿತುಕೊಳ್ಳಲು ಪ್ರಯತ್ನಿಸಿದಳು; ಸ್ವಲ್ಪ ಕಾಲುಜಾರಿ ಧೊಪ್ಪನೆ ಅದರ ಮೇಲೆ ಕುಳಿತುಕೊಳ್ಳು ವಾಗ ಬಲಗೈ ಮೇಜಿನಮೇಲೆ ಬಿದ್ದು ಅವಳ ತಲೆ ಮುಂಗೈಯನ್ನು ಆಶ್ರಯಿ ಸಿತು. ಬಿದ್ದ ಪೆಟ್ಟಿಗೆ ಕೈಯೊಳಗಿನ ಬಳೆಗಳೆಲ್ಲ ಒಡೆದುಹೋಗಿದ್ದುವು; ಕೈತಗಲಿ ಹಣೆಯಲ್ಲಿದ್ದ ಪುಡಿಕುಂಕುಮ ಅಳಿಸಿಹೋಗಿತ್ತು. ಅದೇ ವೇಳೆಗೆ ಹೊರಗೆ ಚೌಕದಲ್ಲಿದ್ದ ದೊಡ್ಡ ಗಡಿಯಾರ ಎಂಟುಗಂಟೆ ಹೊಡೆಯುತ್ತಿತ್ತು.

ಗಂಟೆಯ ಶಬ್ದವನ್ನು ಕೇಳಿ ವಸಂತಳ ಮುಖವು ಅದಾವುದೋ ನೆನಪು ಬಂದು ಬಿಳುಪಿಟ್ಟಿತು. ತಲೆಯೆತ್ತಿ ನೋಡಿದಳು; ಹಣೆಯಲ್ಲಿ ಕುಂಕುಮ ವಿರಲಿಲ್ಲ; ಕೈಯಲ್ಲಿ ಬಳೆಯಿರಲಿಲ್ಲ. ವಿಧಿ ತನ್ನ ಸೌಮಾಂಗಲ್ಯವನ್ನು ಕಿತ್ತು ಕೊಂಡಿತೆಂದು ವಸಂತಳು ಅಪ್ರಯತ್ನವಾಗಿ 'ಅಮ್ಮಾ' ಎಂದು ಚೀರಿದಳು. ಕನ್ನಡಿಯಕಡೆಗೆ ಪುನಃ ನೋಡಲಾರದೆ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಅಲ್ಲಿಂದ ಎದ್ದುಬಂದು ಸೋಫಾದಮೇಲೆ ಬಿದ್ದುಬಿಟ್ಟಳು.

— ೧೨ —

ನಟೇಶನನ್ನು ಗಲ್ಲಿಗೆ ಹಾಕಲು ತಯಾರಿಯು ಬೆಳಗಿನ ಜಾವದಿಂದ ನಡೆ ದಿತ್ತು. ವಧಾಸ್ಥಾನವನ್ನು ಚೊಕ್ಕಟವಾಗಿ ಗುಡಿಸಿ ಅಧಿಕಾರಿಗಳು ಕುಳಿತು ಕೊಳ್ಳುವುದಕ್ಕೆ ಆಸನಗಳನ್ನು ಹಾಕಿದ್ದರು. ನೇಣು ಸರಿಯಾಗಿ ಬೀಳುತ್ತದೆಯೆ ಇಲ್ಲವೆ, ಕಂಬಗಳು ಭದ್ರವಾಗಿವೆಯೆ ಇತ್ಯಾದಿ ತನಿಖೆಗಳನ್ನೆಲ್ಲ ಅದಕ್ಕೆ ಸಂಬಂಧಪಟ್ಟ ಜನ ನೋಡಿಕೊಂಡರು. ಜನರ ಜೀವ ತೆಗೆಯುವುದೇ ತಮ್ಮ ಕರ್ತವ್ಯವಾಗಿ ಅದರಿಂದಲೇ ತಮ್ಮ ಹೆಂಡತಿ ಮಕ್ಕಳ ಸಂಸಾರವನ್ನು ನಡೆಸ ಬೇಕಾಗಿದ್ದ ಅವರ ಹೃದಯ ಕನಿಕರದ ಸೋಂಕನ್ನೇ ಅರಿಯದಿದ್ದರೂ ನಟೇಶ ನನ್ನು ಶೂಲಕ್ಕೇರಿಸಬೇಕೆಂಬ ಮಾತು ಅವರಿಗೇಕೋ ಹಿತಕರವಾಗಿರಲಿಲ್ಲ. ಅವನು ಒಳ್ಳೆಯ ಖೈದಿಯೆಂಬ ಭಾವನೆ ಎಲ್ಲರ ಮನಸಿಗೂ ಬಂದಿತ್ತು; ಅದ ಲ್ಲದೆ ಅವನ ಮದುವೆಯಾಗಿ ಇನ್ನೂ ಒಂದು ವಾರ ಸಹ ಕಳೆದಿಲ್ಲ. ಇಂಥವ ನನ್ನು ಗಲ್ಲಿಗೇರಿಸಲು ಕೊಲೆಗಡುಕರಿಗೆ ಮನಸು ಹಿಂದೆಗೆಯುತ್ತಿತ್ತು. ಆ ದೋಷವನ್ನು ಮದವಣಗಿತ್ತಿಯ ಮೇಲೆ ಹಾಕಿ ಅವಳ ಕಾಲಗುಣ ಕೆಟ್ಟುದಾ

ದುದರಿಂದ ನಟೇಶ ಪ್ರಾಣಬಿಡಬೇಕಾಗಿ ಬಂತೆಂದು ಸಮಾಧಾನಪಟ್ಟು ಕೊಂಡರು.

ಜೈಲಿನಲ್ಲಿದ್ದ ಖೈದಿಗಳಿಗೆ ಅಂದು ಶೋಕದ ದಿನ. ಬಸಪ್ಪನನ್ನು ಕೊಂದು ಬಡವರಿಗೆ ಉಪಕಾರ ಮಾಡಿದ ವೀರನಿಗೆ ಇಂದು ಸ್ವರ್ಗ ಪ್ರಾಪ್ತಿಯಾಗುತ್ತದೆ. ಸರ್ಕಾರದಲ್ಲಿ ನ್ಯಾಯವಿಲ್ಲ, ಇಂಥ ಉಪಕಾರಿಗೆ ಮರ್ಯಾದೆ ಮಾಡಬೇಕು. ನೂರಾರು ಸಂಸಾರಗಳನ್ನು ಹಾಳುಮಾಡಿದ ಅಂಥ ಸಾಹುಕಾರನನ್ನು ದಂಡಿಸಲು ತಮಗೆ ಶಕ್ತಿಯಿಲ್ಲ; ಬೇರೆಯವರು ಶಿಕ್ಷಿಸಿದರೆ ಅದು ಸರ್ಕಾರಕ್ಕೆ ಸಹನೆಯಿಲ್ಲ; ಇದೆಂಥ ನ್ಯಾಯ? ನಟೇಶನ ಉಪಕಾರಕ್ಕೆ ಪ್ರತಿಯಾಗಿ ದೇವರು ಅವನು ಜೈಲಿನಲ್ಲಿದ್ದರೂ ರತಿಯಂಥ ಹೆಣ್ಣನ್ನು ಕಳಿಸಿ ಮದುವೆ ಮಾಡಿಸಿದ. ನಟೇಶನು ಮಾಡಿದ ಕೆಲಸ ದೇವರಿಗೆ ಮೆಚ್ಚಿಕೆಯಾಯಿತೆನ್ನುವುದಕ್ಕೆ ಅದೇ ಸಾಕ್ಷಿ. ಇಂದು ಅವನಿಗೆ ಫಾಸಿಯಾಗುವುದಾದರೆ ತಾವೆಲ್ಲ ಅವನ ಆತ್ಮಕ್ಕೆ ಶಾಂತಿಯನ್ನು ಕೋರಿ ಹಗಲಿನ ಊಟವನ್ನು ಬಿಡಬೇಕು. ಈ ನಿರ್ಧಾರದಲ್ಲಿ ಖೈದಿಗಳಿದ್ದರು.

ಯಾವ ಯೋಚನೆಯೂ ಇಲ್ಲದೆ ನಿದ್ರಿಸುತ್ತಿದ್ದ ನಟೇಶನನ್ನು ಕಾವಲವರು ಮುಂಚಿತವಾಗಿಯೇ ಏಳಿಸಿ ಮುಖ ತೊಳಿಸಿ ಅವನಿಗೆ ಕಾಫಿ ರೊಟ್ಟಿಗಳನ್ನು ತಂದುಕೊಟ್ಟರು. ಬರಿಯ ಹೊಟ್ಟೆಯಲ್ಲಿ ಗಲ್ಲಿಗೇರಿಸಬಾರದೆಂಬ ನಿಯಮವಂತೆ. ಸಾಯಲು ಹೊರಟವನಿಗೆ ತಿಂಡಿಯೇನುಬೇಕಾದೀತು. ಅನಂತರ ಅವನು ದೇವರ ಪ್ರಾರ್ಥನೆ ಮಾಡುವುದಾದರೆ ಮಾಡಲೆಂದು ಪ್ರಾರ್ಥನಾ ಮಂದಿರಕ್ಕೆ ಕರೆದೊಯ್ದರು. ಅಲ್ಲಿ ಎರಡು ನಿಮಿಷ ಕೈಜೋಡಿಸಿ ದೇವರನ್ನು ಧ್ಯಾನಿಸುತ್ತಿದ್ದು 'ದೇವರೆ! ನೀನು ಇದ್ದೀಯೋ ಇಲ್ಲವೋ ನನಗೆ ಗೊತ್ತಿಲ್ಲ. ನೀನಿರುವುದು ನಿಜವಾಗಿದ್ದರೆ ನಿರಪರಾಧಿಯಾದ ನನಗೆ ಶಿಕ್ಷೆಯಾಗಬೇಕಾಗಿರಲಿಲ್ಲ. ಹಾಗಿಲ್ಲದೆ ನೀನಿರುವುದೇ ಸುಳ್ಳಾದರೆ ನಾನು ನಿನ್ನನ್ನು ಏನು ಪ್ರಾರ್ಥಿಸಿ ಏನು ಫಲ? ಸಾಯಲು ಹೊರಟಿರುವ ನನಗೆ ಯಾವುದೂ ತೋರುವುದಿಲ್ಲ. ತಿಳಿದವರು ಹೇಳುವಂತೆ ನೀನು ಇರುವುದು ನಿಜವಾದರೆ ನನ್ನ ತಂಗಿ—ಬೇರೆ ಯಾರೂ ದಿಕ್ಕಿಲ್ಲದ ಅನಾಥೆ—ಇಂದಿರೆಯನ್ನು ಕೈಬಿಡಬೇಡ' ಎಂದು ಪ್ರಾರ್ಥಿಸಿದ.

ಎಂಟು ಗಂಟೆಗೆ ಇನ್ನು ಹದಿನೈದು ನಿಮಿಷವಿದೆಯೆನ್ನುವ ವೇಳೆಗೆ ನಟೇಶನನ್ನು ಅವನ ಕೋಣೆಯಿಂದ ವಧಾಸ್ಥಾನಕ್ಕೆ ಕರೆದೊಯ್ದರು. ದಾರಿಯಲ್ಲಿ ಅವನನ್ನು ಕಂಡ ಖೈದಿಗಳೆಲ್ಲರೂ ಕಣ್ಣೀರು ಸುರಿಸುತ್ತಿದ್ದರು. ತಲೆಯನ್ನು ತಗ್ಗಿಸಿ ಶಾಂತವಾದ ಮನಸಿನಿಂದ ನಟೇಶನು ಸಿಪಾಯಿಗಳ ಹಿಂದೆ ನಡೆದುಹೋಗುತ್ತಿದ್ದ. ವಧಾಸ್ಥಾನದಲ್ಲಿ ಅದುವರೆಗೆ ಬಂದು ಕಾದಿದ್ದ ಜೈಲಿನ ಅಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ತೊಡಗಿದರು. ವೈದ್ಯರು ಬಂದು ಪರೀಕ್ಷೆ ನಡೆಸಿ ಖೈದಿಯು ಗಲ್ಲಿಗೇರಲು ತಕ್ಕ ಸ್ಥಿತಿಯಲ್ಲಿದಾನೆಂದು ಒಪ್ಪಿಗೆ ಕೊಟ್ಟರು. ಜೈಲಿನ ದೊಡ್ಡ ಸಾಹೇಬರು ನಟೇಶನ ಬಳಿಗೆ ಬಂದು ಕನಿಕರದಿಂದ ಅವನ ಭುಜದ ಮೇಲೆ ಕೈಯಿಟ್ಟು

'ಕಡೆಯದಾಗಿ ನಿನ್ನ ಅಪೇಕ್ಷೆ ಏನಾದರೂ ಇದೆಯೆ ನಟೇಶ್' ಎಂದು ಕೇಳಿದರು.

'ಏನೂ ಇಲ್ಲ.'

'ತಂಗಿಗಾಗಿ, ಹೆಂಡತಿಗಾಗಿ ಏನಾದರೂ ಹೇಳುವುದು....' ನಟೇಶನು ತಕ್ಷಣವೇ ತಿರಸ್ಕಾರದಿಂದ 'ಹೆಂಡತಿಗೆ ?' ಎಂದು ಕೇಳಿ 'ಏನೂ ಇಲ್ಲ' ಎಂದು ಉತ್ತರ ಕೊಟ್ಟ.

ಸಂಪ್ರದಾಯಗಳೆಲ್ಲಾ ಮುಗಿದಮೇಲೆ ಕೊಲೆಗಡುಕರು ಅವನನ್ನು ಅಟ್ಟಣೆಯ ಮೇಲೊಯ್ದು ಮುಖಕ್ಕೆ ಕರಿಯ ಬಟ್ಟೆಯ ಮುಸುಕನ್ನು ಹಾಕಿ ಕೊರಳಿಗೆ ನೇಣನ್ನು ಜೋಡಿಸಿ ಅಪ್ಪಣೆಗಾಗಿ ಸಾಹೇಬರ ಕಡೆ ನೋಡುತ್ತಿದ್ದರು. ಸಾಹೇಬರು ತಮ್ಮ ಕೈಲಿದ್ದ ಗಡಿಯಾರದ ಕಡೆ ನೋಡುತ್ತ ಎಂಟು ಗಂಟೆಯಾಗುವುದಕ್ಕಾಗಿ ಕಾದಿದ್ದರು.

ಇನ್ನೇನು, ಒಂದು ನಿಮಿಷ ಕಳೆದರೆ ಎಂಟಾಗುತ್ತದೆ, ಎನ್ನುವಷ್ಟರಲ್ಲಿ ಪೋಲೀಸಿನವನೊಬ್ಬನು ಏದುತ್ತ ವಧಾಸ್ಥಾನಕ್ಕೆ ಬಂದವನೇ ನೇರವಾಗಿ ಸಾಹೇಬರ ಬಳಿಗೆ ಬಂದು ಒಂದು ಸೆಲ್ಯೂಟ್ ಹೊಡೆದು ಒಂದು ಲಕೋಟೆಯನ್ನು ಅವರ ಕೈಗೆ ಕೊಟ್ಟ. ಅದೇನೆಂದು ಎಲ್ಲರೂ ಕುತೂಹಲದಿಂದ ಸಾಹೇಬರ ಕಡೆಗೇ ನೋಡುತ್ತಿದ್ದರು. ಸಾಹೇಬರು ಅವಸರವಾಗಿ ಲಕೋಟೆಯನ್ನು ಹರಿದು ಒಳಗಿದ್ದ ಕಾಗದವನ್ನು ಓದಿಕೊಂಡರು. ಜೈಲು ಗಡಿಯಾರದಲ್ಲಿ ಎಂಟು ಗಂಟೆ ಹೊಡೆಯತೊಡಗಿತು. ಕಾಗದವನ್ನು ಓದಿಕೊಂಡ ಆನಂದ

ದಲ್ಲಿ ಸಾಹೇಬರು ಎರಡೇ ಹೆಜ್ಜೆಗೆ ವಧಾಸ್ಥಾನದ ಮೇಲೆ ಹತ್ತಿ ನಟೇಶನ ಕುತ್ತಿಗೆಗೆ ಹಾಕಿದ್ದ ನೇಣನ್ನು ತೆಗೆದುಬಿಟ್ಟರು. ಅದರೊಡನೆ ಕರಿಯ ಬಟ್ಟೆಯ ಮುಸುಕೂ ಬಂದುಬಿಟ್ಟಿತು. ತನ್ನ ಜೀವ ಆಗಲೇ ಪರಲೋಕದ ಹಾದಿಯನ್ನು ಹಿಡಿದಿದೆಯೆಂದು ತಿಳಿದಿದ್ದ ನಟೇಶನು ಭ್ರಾಂತನಾಗಿ ಸಾಹೇಬರನ್ನು ನೋಡುತ್ತಿದ್ದ. ಅವರು ನಟೇಶನ ಕೈ ಕುಲುಕುತ್ತ,

'ನೀನು ಅದೃಷ್ಟಶಾಲಿ ನಟೇಶ್, ಮೃತ್ಯುವಿನ ದವಡೆಯಿಂದ ಪಾರಾದೆ, ನಿನ್ನನ್ನು ಬಿಟ್ಟುಬಿಡಬೇಕೆಂದು ಅಪ್ಪಣೆ ಬಂದಿದೆ' ಎಂದರು.

ಇದೇನು ನಿಜವೋ ಸ್ವಪ್ನವೊ ಎಂದು ನಟೇಶನು ಭ್ರಾಂತನಾಗಿ ಅವರನ್ನೇ ನೋಡುತ್ತಿದ್ದ. ಏನು ಮಾತಾಡಲೂ ತೋರದು. ಅವನ ನೋಟದಲ್ಲಿನ ಪ್ರಶ್ನೆಯನ್ನರಿತು ಅವರು ಪುನಃ

'ನಿಜ ನಟೇಶ್. ಅಪ್ಪಣೆಯನ್ನು ನೋಡು' ಎಂದು ಪೋಲೀಸಿನವನು ಕೊಟ್ಟ ಕಾಗದವನ್ನು ತೋರಿಸಿ ನಟೇಶನ ಕೈಹಿಡಿದು ಅಟ್ಟಣೆಯಿಂದ ಕೆಳಕ್ಕೆ ಕರೆತಂದರು. ಅಲ್ಲಿ ಸೇರಿದ್ದ ಎಲ್ಲ ಅಧಿಕಾರಿಗಳಿಗೂ ಆ ಅಪ್ಪಣೆ ಬಹಳ ಸಂತೋಷವನ್ನುಂಟುಮಾಡಿತು. ಇಂಥ ಸಂತೋಷ ಸಾವಿರದಲ್ಲಿ ಒಂದುಸಲ ನಡೆಯುವುದು ಹೆಚ್ಚೆಂದು ಅವರು ಮಾತನಾಡಿಕೊಂಡರು.

ತನಗೆ ಬಿಡುಗಡೆಯಾದುದು ನಿಜವೆಂದು ನಂಬಿಕೆಯಾದಮೇಲೆ ನಟೇಶನು ಆ ಬಿಡುಗಡೆ ಹೇಗಾಯಿತೆಂದು ಸಾಹೇಬರನ್ನು ಕೇಳಿದ. ಅವರಿಗೆ ತಾನೇ ಅದೇನು ಗೊತ್ತು? ಬಿಡುಗಡೆಯ ಅಪ್ಪಣೆಯಷ್ಟೇ ಆ ಕಾಗದದಲ್ಲಿರುವುದು. ಆದರೆ ಅವರಿಗೆ ಒಂದು ವಿಷಯ ಗೊತ್ತಿತ್ತು; ಅದು ನಟೇಶನಿಗೆ ಅನಿರೀಕ್ಷಿತವಾಗಿ ಆಗಿದ್ದ ಮದುವೆ. ಅವನ ಬಿಡುಗಡೆಗೂ ಅದಕ್ಕೂ ಅವರು ಗಂಟುಹಾಕಿ

'ನಿನ್ನ ಹೆಂಡತಿಯ ಮಾಂಗಲ್ಯದ ಪುಣ್ಯ ನಿನ್ನನ್ನು ಉಳಿಸಿತಯ್ಯ, ಆ ಪುಣ್ಯವತಿಯು ನಿನ್ನ ಭಾಗದ ದೇವರು' ಎಂದರು.

ನಟೇಶನಿಗೆ ಯಾವುದೊಂದೂ ಅರ್ಥವಾಗಲಿಲ್ಲ. ತನ್ನಮೇಲೆ ಅಷ್ಟು ಪ್ರೇಮ ವಸಂತಳಿಗೆ ಇದೆಯೆನ್ನುವುದು ನಂಬಲಾರದ ಮಾತು. ಅಷ್ಟು ಅಭಿಮಾನವಿರುವಳಾದರೆ ಮದುವೆಯಾದ ಅನಂತರ ಒಂದುಸಲವಾದರೂ ತನ್ನನ್ನು ನೋಡಲು ಬರಲಿಲ್ಲವೇಕೆ? ಸಾಯುವುದಕ್ಕೆ ಮುಂಚೆ ಮುಖವನ್ನು ಸಹ

ನೋಡಲು ಬರಲಿಲ್ಲವೇಕೆ? ಅಂಥವಳು ತನ್ನ ಬಿಡುಗಡೆಗೆ ಪ್ರಯತ್ನ ಮಾಡಿರುವುದು ಅಸಾಧ್ಯ. ಹಾಗಿದ್ದರೆ ತನಗೆ ಬಿಡುಗಡೆಯಾದುದು ಹೇಗೆ?

ಅದು ಬಗೆ ಹರಿಯದ ಪ್ರಶ್ನೆಯೆಂದು ನಟೇಶನು ಅದನ್ನು ಅಲ್ಲಿಗೇ ಬಿಟ್ಟು ಜೈಲಿನ ಸಾಹೇಬರಿಗೆ ತನ್ನ ಧನ್ಯವಾದಗಳನ್ನು ಹೇಳಿ ಅವರ ಅಪ್ಪಣೆ ಪಡೆದು ಜೈಲಿನ ತನ್ನ ಸಹವಾಸಿಗಳಿಗೆ ಸುದ್ದಿ ತಿಳಿಸಲು ಒಳಗೆ ಹೋದ. ನಟೇಶನು ಬದುಕಿ ಬಂದುದನ್ನೂ ಅವನಿಗೆ ಬಿಡುಗಡೆಯಾದುದನ್ನೂ ಕಂಡು ಅವರು ಹಿಗ್ಗಿಹೋದರು. ಎಲ್ಲರೂ ವಸಂತಳ ಮಾಂಗಲ್ಯವು ಭದ್ರವಾದು ದೆಂದರು. ಅವರಿಂದ ಬೀಳ್ಕೊಂಡು ನಟೇಶನು ವಸಂತಳ ಮಾಂಗಲ್ಯದ ಪ್ರಭಾವವನ್ನು ನೆನೆಯುತ್ತ ಜೈಲಿನಿಂದ ಹೊರಹೊರಟ.

— ೧೩ —

ಹೊರಗೆಬಂದ ನಟೇಶನ ಮನಸ್ಸು ಹಗುರವಾಗಿ ಆಕಾಶದಲ್ಲಿ ತೇಲಿ ಹೋಗುತ್ತಿರುವಂತೆ ಅವನಿಗೆ ತೋರುತ್ತಿತ್ತು. ಜೈಲಿನ ಮುಂದಿದ್ದ ಚೌಕದ ವರೆಗೆ ಬಂದವನು ಅಲ್ಲಿಂದ ಎತ್ತಕಡೆ ಹೋಗುವುದೆಂದು ಯೋಚಿಸುತ್ತ ನಿಂತ. ಮೊದಲು ಬಂಗಾರಪೇಟೆಗೆ ಹೋಗಿ ತನ್ನ ತಂಗಿಯನ್ನು ನೋಡಬೇಕೆಂದು ಮನಸಿಗೆಬಂತು. ಅಲ್ಲಿಗೆ ಹೋದಮೇಲೆ ಪುನಃ ಬೆಂಗಳೂರಿಗೆ ಬರಲು ಕಷ್ಟ ವಾಗುತ್ತದೆ. ತನ್ನನ್ನು ಮದುವೆಯಾದ ಜೀವ ಇಲ್ಲಿದೆ. ಅವಳಿಂದ ತನ್ನ ಬಿಡುಗಡೆಯಾಯಿತೋ ಇಲ್ಲವೋ; ಸಾಹೇಬರೂ ತನ್ನ ಸಹವಾಸಿಗಳೂ ಹೇಳಿ ದಂತೆ ಅವಳ ಮಾಂಗಲ್ಯದ ಪುಣ್ಯ ತನ್ನನ್ನು ಉಳಿಸಿದೆ. ಅವಳನ್ನು ನೋಡದೆ, ಅವಳು ಯಾರೆಂದು ತಿಳಿಯದೆ ಊರಿಗೆ ಹೋಗುವುದು ತಪ್ಪಾದೀತು. ಆದರೆ ಈ ನಗರದಲ್ಲಿ ಅವಳ ಮನೆಯನ್ನು ಹುಡುಕುವುದು ಹೇಗೆ?

ನಟೇಶನಿಗೆ ಹಸಿವಾಗುತ್ತಿತ್ತು. ಒಂದು ವಾರದಿಂದಲೂ ಅವನಿಗೆ ಬೇಡವಾಗಿದ್ದ ಊಟ ಹೊಟ್ಟೆಯನ್ನು ಬರಿಯದಾಗಿಟ್ಟಿತ್ತು. ಈಗ ಸ್ವತಂತ್ರ ನಾಗಿ ಹೊರಗೆ ಬಂದಮೇಲೆ ಅದು ತನ್ನ ಸ್ಥಿತಿಯನ್ನು ಜ್ಞಾಪಕ ಕೊಡತೊಡ ಗಿತು. ಇದನ್ನೆಲ್ಲ ತಿಳಿದೋ ಏನೋ ಜೈಲಿನ ಸಾಹೇಬರು ಅವನನ್ನು ಬೀಳ್ಕೊಡುವಾಗ ಅವನ ಕೈಯಲ್ಲಿ ಐದು ರೂಪಾಯಿಗಳನ್ನಿಟ್ಟಿದ್ದರು. ಬೇಡ ವೆಂದುದಕ್ಕೆ ಗದರಿಸಿ ತಮ್ಮ ಅಧಿಕಾರದ ದರ್ಪವನ್ನು ತೋರಿಸಿದ್ದರು. ಅವರ

ಊಹೆ ಈಗ ನಟೇಶನಿಗೆ ಅರ್ಥವಾಯಿತು. ಆ ಹಣವಿಲ್ಲದಿದ್ದರೆ ಬೆಂಗಳೂರಿ ನಲ್ಲಿ ಅವನಿಗೆ ತಿಂಡಿ ಕೊಡುವವರಾರು ? ಮೊದಲು ಹೊಟ್ಟೆ ತುಂಬಿಸಿಕೊಂಡು ಅನಂತರ ತನ್ನ ಹೆಂಡತಿಯನ್ನು ಹುಡುಕೋಣವೆಂದು ಹೋಟಲನ್ನು ಕುರಿತು ಹೊರಟ.

ನಟೇಶನಿಗೆ ಬೆಂಗಳೂರು ಹೊಸದು. ಅವನಿಗೆ ತಿಳಿದಿದ್ದುದು ಒಂದೇ ರಸ್ತೆ—ಅದು ಜೈಲಿನಿಂದ ಕೋರ್ಟಿಗೆ ಹೋಗತಕ್ಕುದು. ಆ ರಸ್ತೆಯಲ್ಲಿ ಹೋಟಲುಗಳನ್ನು ಅವನೆಂದೂ ನೋಡಿರಲಿಲ್ಲ; ಅದರಿಂದ ಆ ದಾರಿಯನ್ನು ಬಿಟ್ಟು ಬೇರೊಂದು ದಾರಿಯನ್ನು ಹಿಡಿದ. ದಾರಿಯಲ್ಲಿ ಯಾರನ್ನಾದರೂ ಕೇಳೋಣವೆಂದೆನಿಸಿತು ; ಆದರೆ ಹಿಂದೆಯೇ ಇಂಥ ದೊಡ್ಡ ಪಟ್ಟಣದಲ್ಲಿ ಎಲ್ಲ ಕಡೆಯೂ ಹೋಟಲುಗಳಿರಬೇಕು ; ಯಾರನ್ನೇನು ಕೇಳುವುದು ಎಂದು ಕೊಂಡು ಮುಂದುವರಿದ. ಅವನ ಊಹೆ ನಿಜವಾಯಿತು ; ಎರಡು ಮೂರು ಫರ್ಲಾಂಗು ದೂರ ಹೋಗುವುದರೊಳಗೆ ಒಂದು ದೊಡ್ಡ ಹೋಟಲು ಕಾಣಿಸಿತು. ನೂರಾರುಜನ ಅದರಲ್ಲಿ ಕುಳಿತು ತಿಂಡಿ ತಿನ್ನುತ್ತಿರುವುದು ಹೊರ ಗಿಂದಲೇ ಕಾಣುತ್ತಿತ್ತು. ಒಳಗೆ ಮಾಣಿಗಳು ಕೊಡುತ್ತಿದ್ದ ತಿಂಡಿಗಳವಾಸನೆ ಬೀದಿಯವರೆಗೂ ಹರಡಿ ದಾರಿಯಲ್ಲಿ ಹೋಗುವವರನ್ನು ಆಕರ್ಷಿಸುತ್ತಿತ್ತು. ಹೋಟಲಿನ ಅಂದವನ್ನು ನೋಡುತ್ತ ನಟೇಶನು ಎರಡುಗಳಿಗೆ ಬಾಗಿಲಬಳಿ ನಿಂತುಕೊಂಡ. ಒಳಗೆ ನಿಂತಿದ್ದ ಆಳೊಬ್ಬನು ಬಂದು ಅವನನ್ನು ಗದರಿಸಿ ಆಚೆ ಹೋಗೆಂದು ಅಪ್ಪಣೆ ಮಾಡಿದ. ತಾನು ತಿಂಡಿತಿನ್ನುವುದಕ್ಕೆ ಬಂದರೆ ಇವನೇಕೆ ತನ್ನನ್ನು ಗದರಿಸುತ್ತಾನೆಂದು ನಟೇಶನು ಏನೋ ಉತ್ತರ ಹೇಳಲು ಹೋದ ; ಆಳು ಆ ಉತ್ತರವನ್ನು ಕೇಳಲು ಸಿದ್ಧನಾಗಿರಲಿಲ್ಲ.

'ಹೋಗು ಅಂದರೆ ಕೇಳಬೇಕು. ಇಲ್ಲಿ ನಿಂತುಕೋಬೇಡ ಹೋಗಾಚೆ.'

'ನಾನು....'

'ನಾನೂ ಇಲ್ಲ ನೀನೂ ಇಲ್ಲ. ಹೋಗುತೀಯೋ ಕತ್ತುಹಿಡಿದು ಆಚೆ ನೂಕಬೇಕೋ ?'

ಅದುವರೆಗೆ ಹೋಟಲಿನಿಂದ ಹೊರ ಹೊರಟ ನಾಲ್ಕಾರುಜನ ಅವನನ್ನೇ ಮುರುಗುಟ್ಟಿಕೊಂಡು ನೋಡುತ್ತ ಹೋದರು. ಅವರಲ್ಲಿ ಒಬ್ಬನು 'ಕಡಿದರೆ

ನಾಲ್ಕುಬಂಡಿ ಆಗುವಷ್ಟಿದ್ದಾನೆ. ಅವನು ಬಂದು ನಿಂತಿರುವುದು ನೋಡು. ಈ ಊರಿನಲ್ಲಿ ಇವರದೊಂದು ಕಾಟ' ಎಂದ.

ಇನ್ನೊಬ್ಬ 'ಎಲ್ಲೋ ಈಗತಾನೇ ಜೈಲಿನಿಂದ ಬಿಟ್ಟಹಾಗಿದೆ; ನೇರ ವಾಗಿ ಬಂದುಬಿಟ್ಟ ಗಿರಾಕಿ ಹುಡುಕೋದಕ್ಕೆ. ಹತ್ತಿರದಲ್ಲಿ ಜೈಲು ಇರುವುದು ಇದೊಂದು ನೂಯಿಸೆನ್ಸ್ ಜನಕ್ಕೆ' ಎಂದ.

ಅವರನ್ನು ಅಪ್ಪಳಿಸಿಬಿಡುವಷ್ಟು ಕೋಪ ನಟೇಶನಿಗೆ ಬಂದಿತ್ತು. ತಾನು ಇವರಿಗೆ ಮಾಡಿರುವ ತಪ್ಪೇನು? ಇವರಂತೆ ತಾನೂ ತಿಂಡಿತಿನ್ನಲು ಬಂದಿದ್ದೇನೆ; ಹಣಕೊಡಲು ತಯಾರಿದ್ದೇನೆ; ಇವರಿಗಿಂತ ನಾನೇನು ಕಡಿಮೆ ಯಾದೆ? ನನ್ನ ಮೇಲೆ ಈ ಟೀಕೆ ಇವರಿಗೇಕೆ? ನಾನು ಬಡವ, ಕೂಲಿಯವ ಎಂದು ತಾತ್ಸಾರ. ನೋಡುವುದಕ್ಕೆ ತಾಳಿಕೆಯಿಲ್ಲದ ಮನುಷ್ಯ ನಾನು. ಜೈಲಿ ನಿಂದ ಬಿಟ್ಟವನೆಂದು ಅವನು ಹೇಳಿದನಲ್ಲ; ನಾನು ಏನಾಗಿದ್ದೇನೆ? ಪಕ್ಕದಲ್ಲಿ ತಿಂಡಿ ಪದಾರ್ಥಗಳನ್ನು ಮಾರುವಕಡೆ ಹಾಕಿದ್ದ ಕನ್ನಡಿಯಲ್ಲಿ ನಟೇಶನು ತನ್ನ ಸ್ವರೂಪವನ್ನು ನೋಡಿಕೊಂಡ. ತನ್ನ ಸ್ಥಿತಿಗೂ ಅವರ ಸ್ಥಿತಿಗೂ ಅಜ ಗಜಾಂತರ ಕಂಡಿತು. ಅವನಿಗೆ ತಕ್ಷಣ ತನ್ನ ಹೆಂಡತಿಯ ನೆನಪಾಯಿತು. ಯಾರೋ ಕಾಣದ ಜನರೇ ತನ್ನನ್ನು ಹೀಗೆ ಹೀಯಾಳಿಸಿದರೆ ಈ ಸ್ವರೂಪ ವನ್ನು ನೋಡಿ ಅವಳು ಏನಂದಾಳು?

ಆ ಹೋಟಲು ತನ್ನ ದರ್ಜೆಗೆ ಸರಿಯಲ್ಲವೆಂದು ಅವನು ಮುಂದಕ್ಕೆ ಬೇರೊಂದು ಚಿಕ್ಕ ಹೋಟಲನ್ನು ಹುಡುಕುತ್ತ ಹೊರಟ. ಅಲ್ಲಿಂದ ನಾಲ್ಕು ಹೆಜ್ಜೆ ಹೋಗುವುದರೊಳಗೆ ಅದೂಸಿಕ್ಕಿತು. ಅಲ್ಲಿ ತನಗೆ ತೃಪ್ತಿಯಾಗುವವರೆಗೆ ಚಿತ್ರಾನ್ನ ಇಡ್ಲಿಗಳನ್ನು ತಿಂದು ಅದರ ಪಕ್ಕದಲ್ಲೇ ಇದ್ದ ಕ್ಷೌರದ ಅಂಗಡಿ ಯಲ್ಲಿ ಹೋಗಿ ಕುಳಿತ. ಕ್ಷೌರವಾದಮೇಲೆ ಮುಖ ತೊಳೆದುಕೊಂಡು ಕನ್ನಡಿಯಲ್ಲಿ ಮುಖ ನೋಡಿಕೊಂಡ; ಸ್ವಲ್ಪ ಸಮಾಧಾನವಾಯಿತು. ಆದರೆ ಬಟ್ಟೆಗಳು? ಅವನ್ನೇನೂ ಮಾಡುವಹಾಗಿಲ್ಲ. ಇದ್ದುದರಲ್ಲಿ ಮೊದಲು ಇದ್ದುದಕ್ಕಿಂತ ಎಷ್ಟೋ ಮೇಲು; ಈಗ ತನ್ನನ್ನು ನೋಡಿದವರಾರೂ ಜೈಲಿ ನಿಂದ ಬಂದವನೆಂದು ಹೇಳಲಾರರು; ಎಂದು ತೃಪ್ತಿಪಟ್ಟುಕೊಳ್ಳುತ್ತ ವಸಂತಳ ಮನೆಯನ್ನು ಹುಡುಕಲು ಹೊರಟ.

ಇಷ್ಟುದೊಡ್ಡ ನಗರದಲ್ಲಿ, ಎಂಟುಲಕ್ಷ ಜನರು ವಾಸಿಸುವ ಲಕ್ಷಾಂತರ ಮನೆಗಳ ನಡುವೆ ತನ್ನ ಹೆಂಡತಿಯ ಮನೆಯನ್ನು ಹುಡುಕುವುದು ಅಷ್ಟೇನೂ ಸುಲಭವಲ್ಲವೆಂದು ನಟೇಶನಿಗೂ ತಿಳಿದಿತ್ತು. ಆದರೂ ಪ್ರಯತ್ನ ಮಾಡೋಣ ವೆಂಬ ಚಪಲದಿಂದ ಬೀದಿಬೀದಿ ತಿರುಗಿದ. ಅಕಸ್ಮಾತ್ತಾಗಿ ಎಲ್ಲಾದರೂ ಅವಳು ಕಣ್ಣಿಗೆ ಬೀಳಲಾರಳೇ ಎಂದು ಆಶಿಸಿದ. ನೀಟಾಗಿ ಬಟ್ಟೆಹಾಕಿ ಕೊಂಡು ಓಡಾಡುತ್ತಿರುವವರನ್ನು ಕಂಡಾಗ ಇವರಾರಿಗಾದರೂ ಅವಳ ಪರಿಚಯವಿರಬಹುದು, ಅವಳೂ ಶ್ರೀಮಂತಳು, ಅದರಿಂದ ಶ್ರೀಮಂತರಿಗೆ ತಿಳಿದಿರುತ್ತದೆ ಎಂದು ಅವರನ್ನು ವಿಚಾರಿಸಲು ಪ್ರಯತ್ನಿಸಿದ. ಆದರೆ ಅವರನ್ನು ಏನೆಂದು ಕೇಳುವುದು? ಅವಳ ಹೆಸರೊಂದು ಹೊರತು ಇನ್ನಾವುದೂ ಅವನಿಗೆ ತಿಳಿಯದು. ಮನೆಯನ್ನು ಹುಡುಕಲು ಹೊರಟಮೇಲೆ ಅದರಲ್ಲಿರುವ ತೊಡಕುಗಳೆಲ್ಲ ಒಂದೊಂದಾಗಿ ಅನುಭವವಾಗುತ್ತಬಂದವು. ಮಧ್ಯಾಹ್ನ ಎರಡು ಗಂಟೆಯವರೆಗೆ ಯಾವುದೊಂದು ಗೊತ್ತಿಲ್ಲದೆ ಗುರಿಯಿಲ್ಲದೆ ಸುತ್ತಿ ಬೇಸತ್ತು ಕಬ್ಬನ್‌ಪಾರ್ಕಿನಲ್ಲಿ ಮರಗಳ ನೆರಳಲ್ಲಿದ್ದ ಒಂದು ಕಲ್ಲುಬೆಂಚಿನಮೇಲೆ ಕುಳಿತುಬಿಟ್ಟ. ಬೆಳಗ್ಗೆತಿಂದ ತಿಂಡಿಯು ಎಲ್ಲೋ ಮಾಯವಾಗಿ ಹೊಟ್ಟೆಯು ಪುನಃ ಆಹಾರವನ್ನು ಕೇಳುತ್ತಿತ್ತು. ಸ್ವಲ್ಪ ದೂರದಲ್ಲಿ ಹೋಟಲೊಂದು ಕಾಣುತ್ತಿತ್ತು; ಆದರೆ ಅದು ಶ್ರೀಮಂತರ ಹೋಟಲೋ ಅಧಿಕಾರಿಗಳ ಹೋಟಲೋ ಆಗಿದ್ದರೆ! ಬೆಳಗ್ಗೆ ಒಂದುಕಡೆ ತನಗೆ ತಕ್ಕಷ್ಟು ಮರ್ಯಾದೆ ಯಾಗಿತ್ತು. ಎರಡನೆಯಸಲ ಅಂಥ ಮರ್ಯಾದೆಯನ್ನು ಪಡೆಯಲು ಅವನ ಸ್ವಾಭಿಮಾನ ಒಪ್ಪಲಿಲ್ಲ.

ಹಸಿದ ಹೊಟ್ಟೆಯಿಂದ ಅವನು ಹೋಟಲಿನಕಡೆ ನೋಡುತ್ತಿದ್ದ. ಅವನು ಕುಳಿತಿದ್ದಕಡೆ ನಾಲ್ಕೈದು ಬೆಂಚುಗಳನ್ನು ಹಾಕಿದ್ದರು. ಯಾರೋ ಒಬ್ಬ ಸೂಟುಧಾರಿ ಬೈಸಿಕಲ್‌ಮೇಲೆ ಬಂದವನು ಅಲ್ಲಿ ಇಳಿದು ಬೇರೊಂದು ಬೆಂಚಿನ ಮೇಲೆ ಕುಳಿತ. ಹೋಟಲಿಗೆ ಬರುವ ಗಿರಾಕಿಗಳು ಹೀಗೆ ಅಲ್ಲಲ್ಲಿ ಮರಗಳ ಕೆಳಗೆ ಕುಳಿತು ತಿಂಡಿಯನ್ನು ತರಿಸುವ ಅಭ್ಯಾಸ'ಅಲ್ಲಿದೆ. ಬೆಂಚುಗಳ ಮೇಲೆ ಎರಡು ವ್ಯಕ್ತಿಗಳು ಕುಳಿತಿರುವುದನ್ನು ಕಂಡ ಮಾಣಿಯೊಬ್ಬನು ಅಲ್ಲಿಗೆ ಬಂದು ನಟೇಶನನ್ನು ವಿಚಾರಿಸದೆ ಸೂಟುಧಾರಿಯ ಬಳಿಗೆಬಂದು

'ಏನುತರಲಿ ಸಾರ್' ಎಂದ.

'ಏನಯ್ಯಾ ಇದೆ?'

ಮಾಣಿಯು ಬಡಬಡನೆ ಉದ್ದವಾದ ಒಂದು ಪಟ್ಟಿಯನ್ನು ಒದರಿದ. ಸೂಟುಧಾರಿಗೆ ಕೇಳಿಸಿದುದು ಮೊದಲು ಹೇಳಿದುದು ಮತ್ತು ಕಡೆಯಲ್ಲಿ ಹೇಳಿದುದು, ಅವೆರಡೇ. ಅಷ್ಟನ್ನು ಕೇಳಿ ಸಮಾಧಾನಗೊಂಡವನಂತೆ ಕಡೆಯಲ್ಲಿ ಅವನು ಹೇಳಿ ನಿಲ್ಲಿಸಿದ್ದ ಮಸಾಲೆದೋಸೆಯನ್ನು ತರಹೇಳಿ 'ಚೆನ್ನಾಗಿ ಬೇಯಬೇಕು' ಎಂದೊಂದು ವಿಶೇಷಣವನ್ನು ಸೇರಿಸಿದ. ಮಾಣಿಯು ತನ್ನ ಕಡೆ ಬೀರಿದ ದೃಷ್ಟಿಯಲ್ಲಿ ಅವನು ತನ್ನ ಕಡೆ ಬರಲಾರನೆಂದು ಊಹಿಸಿದ ನಟೇಶನು ಒಂದು ಕೈ ನೋಡೋಣವೆಂದು ಅವನನ್ನು ಕೂಗಿದ. ಹೋಗಲು ಮಾಣಿಗೆ ಅಸಮಾಧಾನ; ಆದರೆ ಗಿರಾಕಿಯನ್ನು ಬಿಡಲು ಇಷ್ಟವಿಲ್ಲ. ಅದರಿಂದ ಏನೋ ದೊಡ್ಡ ಉಪಕಾರ ಮಾಡುವ ಧ್ವನಿಯಲ್ಲಿ ದೂರದಿಂದಲೇ 'ಏನುಬೇಕು?' ಎಂದು ಕೇಳಿದ.

'ನನಗೊಂದು ಮಸಾಲೆದೋಸೆ ತನ್ನಿ.'

ಮಾಣಿಯು ಹೊರಟುಹೋದ. ತನಗೂ ಇಲ್ಲಿ ತಿಂಡಿ ಸಿಕ್ಕಿತಲ್ಲ ಎಂಬ ಸಮಾಧಾನದಿಂದ ಅವನು 'ನಾನೇನು ನಿಮಗಿಂತ ಕಡಮೆ' ಎನ್ನುವ ನೋಟದಲ್ಲಿ ಸೂಟುಧಾರಿಯನ್ನು ನೋಡುತ್ತಿದ್ದ. ಅವನನ್ನು ನೋಡುತ್ತಿದ್ದಹಾಗೇ ತನ್ನ ಹೆಂಡತಿಯ ಮನೆಯನ್ನು ಕುರಿತು ಅವನನ್ನೇಕೆ ವಿಚಾರಿಸಬಾರದೆಂದು ತೋರಿತು. ಹೇಗೂ ಆ ಮನುಷ್ಯ ಇಲ್ಲಿ ಸಿಕ್ಕಿಕೊಂಡುಬಿಟ್ಟಿದ್ದಾನೆ. ಚೆನ್ನಾಗಿ ಬೆಂದ ಮಸಾಲೆದೋಸೆ ಅವನ ಹೊಟ್ಟೆಗೆ ಸೇರುವವರೆಗೂ ಏಳುವಹಾಗಿಲ್ಲ. ಈ ಸಮಯದಲ್ಲಿ ತಾನು ಮಾತಾಡಿಸಿದರೆ ಇತರರಂತೆ ತನ್ನಿಂದ ತಪ್ಪಿಸಿಕೊಂಡು ಓಡುವಂತಿಲ್ಲ. ಆದ್ದರಿಂದ ಧೈರ್ಯಮಾಡಿ ಮಾತಾಡಿಸಿಯೇಬಿಟ್ಟ.

'ಸ್ವಾಮಿ.'

ತನ್ನನ್ನಲ್ಲವೆಂಬಂತೆ ಆ ಸ್ವಾಮಿ ಅತ್ತಿತ್ತ ನೋಡಿದ. ಅವನ ಸಂಶಯವನ್ನು ಪರಿಹರಿಸಿ ನಟೇಶನು ಪುನಃ

'ತಮ್ಮನ್ನೇ ಸ್ವಾಮಿ,' ಎಂದ.

ಏನೋ ಭಿಕ್ಷೆಗೆ ಪೀಠಿಕೆ ಹಾಕುತ್ತಿದ್ದಾನೆ ಇವನು. ಯಾವುದೋ ಪಾರದೇಶ, ಆಸ್ಪತ್ರೆಗೆ ಹೆಂಗಸರನ್ನು ಕರೆತಂದಿದ್ದೇನೆ. ಔಷಧಕ್ಕೆ ಹಣ ಸ್ವಲ್ಪ ಕಡಿಮೆಬಂದಿದೆ, ಮೂರು ದಿನದಿಂದ ಉಪವಾಸವಿದ್ದೇನೆ. ಎರಡಾಣೆ ಕೊಟ್ಟರೆ

ಒಂದು ಲೋಟ ಕಾಫಿ ಕುಡಿಯುತ್ತೇನೆ, ಊರು ಸೇರಿಕೊಳ್ಳುವುದಕ್ಕೆ ರೈಲು ಚಾರ್ಜಿಗೆ ಹಣವಿಲ್ಲ, ಒಂದು ನಾಲ್ಕಾಣೆಕೊಟ್ಟು ಪುಣ್ಯ ಸಂಪಾದಿಸಿಕೊಳ್ಳ ಬೇಕು, ಇತ್ಯಾದಿ ಇತ್ಯಾದಿ ಏನೋಕತೆಗೆ ಈ 'ಸ್ವಾಮಿ' ಎನ್ನುವುದು ಪೀಠಿಕೆ ಯೆಂದು ಸೂಟುಧಾರಿ ಭಾವಿಸಿ ವಿಧಿಯಿಲ್ಲದೆ 'ಆ' ಎಂದ.

'ತಮ್ಮಿಂದ ಒಂದು ಉಪಕಾರವಾಗಬೇಕು.'

ತಾನು ಊಹಿಸಿದ್ದು ಸರಿ; ಭಿಕ್ಷವಲ್ಲ—ಉಪಕಾರ. ಇವನಿಗೆ ಉಪಕಾರ ಮಾಡಲೆಂದೇ ತನ್ನ ಬೈಸಿಕಲ್ಲು ಈ ಬಿಸಿಲಿನಲ್ಲಿ ತನ್ನನ್ನು ಇಷ್ಟುದೂರ ಹೊತ್ತು ತಂದದ್ದು; ಇವನಿಗೆ ಉಪಕಾರವಾಗಲೆಂದೇ ತಾನು ಮಸಾಲೆದೋಸೆಯನ್ನು— ಚೆನ್ನಾಗಿ ಬೆಂದಿರುವ ಮಸಾಲೆದೋಸೆಯನ್ನು—ತರಹೇಳಿದ್ದು. ಬೆಂಗಳೂರಿನಲ್ಲಿ ಈ ಹಾಳು ಭಿಕ್ಷುಕರಕಾಟ ಎಂದು ತಪ್ಪುವುದೋ ದೇವರೇ ಬಲ್ಲ.. ಈಗಂತೂ ಇವನು ತನಗೆ ಗಂಟುಬಿದ್ದಿದ್ದಾನೆ. ದೋಸೆ ತಿನ್ನುವವರೆಗೆ ಇವನಿಂದ ತಪ್ಪಿಸಿ ಕೊಂಡು ಹೋಗುವಂತೆಯೂ ಇಲ್ಲ; ಸಮಾಧಾನದಿಂದ ಅದನ್ನೂ ತಿನ್ನುವ ಹಾಗಿಲ್ಲ ಎಂದು ಮನಸಿನಲ್ಲೇ ಅವನನ್ನು ಶಪಿಸುತ್ತ ಹೋಟಲುಕಡೆಗೆ ಮುಖ ಮಾಡಿಕೊಂಡು

'ಈಗ ನಾನು ಏನೂ ಸಹಾಯ ಮಾಡುವಹಾಗಿಲ್ಲ. ಇನ್ನು ಯಾರನ್ನಾ ದರೂ ಕೇಳುಹೋಗು' ಎಂದು ಹೇಳಿಬಿಟ್ಟ.

'ನಾನು ಹೇಳುವುದನ್ನ ಸ್ವಲ್ಪ ಕೇಳಿ ಸ್ವಾಮಿ,'

'ಬೇಕಿಲ್ಲ, ನಾನು ಕೇಳುವುದಿಲ್ಲ. ಅದೇನೆಂದು ನನಗೆ ಗೊತ್ತಿದೆ.

'ನಿಮಗೆ ಗೊತ್ತಾಗಲು ಕಾರಣವಿಲ್ಲ ಸ್ವಾಮಿ.'

'ಕಾರಣವಿಲ್ಲದಿದ್ದರೆ ಹೋಗಲಿ; ನಾನು ಏನನ್ನೂ ಕೇಳಲು ತಯಾ ರಾಗಿಲ್ಲ.'

ನಟೇಶನು ಅಷ್ಟಕ್ಕೆ ಬಿಡುವಹಾಗಿರಲಿಲ್ಲ.

'ತಯಾರಿ ಗಿಯಾರಿ ಏನೂಬೇಕಿಲ್ಲ ಸ್ವಾಮಿ. ನಾನು ಬಂಗಾರಪೇಟೆ ಯವನು....'

'ಹೌದಪ್ಪಾ ಹೌದು. ನಿನ್ನನ್ನು ನೋಡಿದರೇ ಗೊತ್ತಾಗುತ್ತದೆ. ಬಂಗಾರಪೇಟೆಯಿಂದಲೇ ಏಕೆ ಬಂಗಾರದ ಗಣಿಯಿಂದಲೇ ಬಂದಿದ್ದರೂ ಆಶ್ಚರ್ಯವಲ್ಲ.'

'ಸಾಹುಕಾರ ಬಸಪ್ಪ ಎಂಬಾತನನ್ನು ನಾನುಕೊಂದೆ ಎಂದು ನನ್ನ ಮೇಲೆ ಕೇಸುಆಗಿತ್ತು.'

ಹೋಟೆಲುಕಡೆ ತಿರುಗಿದ್ದ ಸೂಟುಧಾರಿಯ ಮುಖ ತಟ್ಟನೆ ಇವನಕಡೆ ತಿರುಗಿತು. ಹೌದು, ಅದೇ ಆಸಾಮಿ; ಆ ದಿನ, ಹೋದ ಸೋಮವಾರ, ಅವನನ್ನ ಕೋರ್ಟಿನಲ್ಲಿ ನೋಡಿದ್ದ ನೆನಪಿದೆ. ಅವನಿಗೆ ಫಾಸಿಯಾಗಲಿಲ್ಲ, ಬಿಡುಗಡೆಯಾಯಿತೆಂದು ಸುದ್ದಿ ತಮ್ಮ ಆಫೀಸಿಗೆಬಂತು. ಅದರ ವಿವರವನ್ನೆಲ್ಲಾ ಸಂಪೂರ್ಣವಾಗಿ ತಿಳಿಯುವುದಕ್ಕಾಗಿ ತನ್ನ ಸಾಹೇಬರು—ಪತ್ರಿಕೆಯ ಸಂಪಾದಕರು—ಹೇಳಿದ್ದರಿಂದ ಜೈಲಿನಕಡೆ ಹೋಗುತ್ತಿದ್ದ. ಇಲ್ಲಿ ಸಾಕ್ಷಾತ್ತಾಗಿ ಕಥಾನಾಯಕನೇ ಸಿಕ್ಕಿದ್ದಾನೆ. ಈ ದಿನ ಯಾರದೋ ಒಳ್ಳೆಯವರ ಮುಖನೋಡಿ ಎದ್ದಹಾಗಿದೆ. ಕಥೆ ಹೇಳುವುದಕ್ಕೆ ಬದಲಾಗಿ ಕಥಾ ನಾಯಕನನ್ನೇ ತನ್ನ ಸಂಪಾದಕರಮುಂದೆ ನಿಲ್ಲಿಸಬಹುದು; ಯಾವ ಪೇಪರಿನವರಿಗೂ ತಿಳಿಯದ, ತಿಳಿದಿರಲಾರದ, ತಿಳಿಯಲು ಸಾಧ್ಯವಿಲ್ಲದ ವಿವರಗಳನ್ನು ತಮ್ಮ ಪೇಪರಿನಲ್ಲಿ ಬರೆಯಬಹುದು. ಇಂಥ ಅವಕಾಶ ಸಿಕ್ಕಿದಾಗ ಯಾರೋ ಭಿಕ್ಷುಕ ಅಂತ ತಾತ್ಸಾರಮಾಡಿ ಹೊರಟುಬಿಡುತ್ತಿದ್ದೆನಲ್ಲಾ! ಇದಕ್ಕೇ ಹೇಳುವುದು ಅದೃಷ್ಟ ಎಂತ; ಬೇಡಬೇಡವೆಂದು ನೂಕಿದರೂ ಬಿಡದೆ ತಾನು ಮಾಡುವುದನ್ನು ಮಾಡಿಯೇಬಿಡುತ್ತದೆ.

ಇಷ್ಟು ಯೋಚನೆಗಳೂ ಸೂಟುಧಾರಿಯ ಪುಟ್ಟತಲೆಯಲ್ಲಿ ಒಂದು ನಿಮಿಷದೊಳಗಾಗಿ ಹಾದುಹೋದವು. ತನ್ನ ನಿರೀಕ್ಷೆಗಳನ್ನು ಖಚಿತಮಾಡಿ ಕೊಳ್ಳುವುದಕ್ಕಾಗಿ

'ಏನೆಂದೆ? ನೀನೇಯೇ ನಟೇಶ—ಬಂಗಾರದ ಗಣಿಯ....'

'ಹೌದು ಸ್ವಾಮಿ ನಾನೇ. ಆಗಲೇ ಹೇಳಿದೆನಲ್ಲ ಬಂಗಾರಪೇಟೆ ಯವನು ಎಂದು; ನನ್ನನ್ನು ಈದಿನ ಗಲ್ಲಿಗೆ ಹಾಕಬೇಕಾಗಿತ್ತು.'

'ಹೌದಯ್ಯ, ನಿನ್ನನ್ನು ಬಿಟ್ಟುಬಿಟ್ಟರೆಂದು ಸುದ್ದಿ ನಮಗೆಬಂತು.

'ಸುದ್ದಿ ನಿಮಗೆ ಬಂತೆ? ತಾವು ಯಾರುಸ್ವಾಮಿ?'

'ಓ, ನಿನಗೆ ಹೇಳಲೇ ಇಲ್ಲ ನೋಡು. ನಾನು 'ವಿಶ್ವಪ್ರೇಮಿ' ದಿನಪತ್ರಿಕೆಗೆ ಈ ಊರಿನಲ್ಲಿ ಸುದ್ದಿ ಕಳಿಸುವ ಪ್ರತಿನಿಧಿ—ನನ್ನ ಹೆಸರು ವೆಂಕಟಾಚಲಯ್ಯ

ಅಂತ. ಈ ಊರಿನಲ್ಲಿ ಏನು ಸಮಾಚಾರ ನಡೆದರೂ ನನ್ನ ಮೂಲಕವೇ ನಮ್ಮ ಪೇಪರಿಗೆ ಹೋಗೋದು.'

'ಅದಕ್ಕೆ ನಿಮಗೆ ಸರ್ಕಾರದವರು ಸಂಬಳ ಕೊಡುತ್ತಾರೆಯೆ ಸ್ವಾಮೀ?'

'ಸರ್ಕಾರದವರು ಕೊಡಲ್ಲವಯ್ಯ; ನಮ್ಮ ಪೇಪರಿನವರು ಕೊಡುತ್ತಾರೆ.'

'ನೀವು ಊರಿನಲ್ಲಿ ಎಲ್ಲಾ ಕಡೆಗೂ ಹೋಗಿ ಸಮಾಚಾರ ತರುತೀರೋ, ಅಥವಾ ಸಮಾಚಾರಾನೇ ನಿಮ್ಮ ಹತ್ತಿರಕ್ಕೆ ಬರುತ್ತವೋ?'

ಇವನ ಮೌಢ್ಯಕ್ಕೆ ನಗುತ್ತ ವೆಂಕಟಾಚಲಯ್ಯ ಹೇಳಿದ,

'ನಾವೇ ಎಲ್ಲಕಡೆಗೂ ಹೋಗಬೇಕು ನಟೇಶ್. ನಮ್ಮ ಹತ್ತಿರಕ್ಕೆ ಸಮಾಚಾರ ಬರುವುದು ಎಲ್ಲಾದರೂ ಉಂಟೆ?'

ಅದುವರೆಗೆ ಮಾಣಿ ಎರಡು ತಟ್ಟೆಗಳಲ್ಲಿ ಮಸಾಲೆದೋಸೆ ಎರಡುಲೋಟ ನೀರುತಂದಿಟ್ಟು ಹೋಗಿದ್ದ. ನಟೇಶ ಅದನ್ನು ಮುರಿದು ತಿನ್ನುತ್ತ

'ಹಾಗಾದರೆ ನನ್ನ ಹೆಂಡತಿಯ ಮನೆ ನಿಮಗೆ ಗೊತ್ತಿರಬಹುದು' ಎಂದ.

ಏನೋ ಹೊಸವಿಷಯ ತಿಳಿಯುತ್ತಿದೆಯೆಂಬ ಕುತೂಹಲದಿಂದ ವೆಂಕಟಾಚಲಯ್ಯನು ಬಾಯಲ್ಲಿದ್ದ ದೋಸೆಯ ತುಂಡನ್ನು ಒಂದುಕಡೆ ಒತ್ತರಿಸಿ ಕೇಳಿದ,

'ನಿಮ್ಮ ಮಾವನಮನೆ ಹಾಗಾದರೆ ಈ ಊರೇ ಅನ್ನು; ಎಲ್ಲಿದೆಯಪ್ಪ ಅದು?'

'ಅದನ್ನೇ ಸ್ವಾಮಿ ನಿಮ್ಮನ್ನು ನಾನು ಕೇಳುತಿರೋದು, ಅದೆಲ್ಲಿದೆ ಅಂತ ನನಗೆ ತಿಳೀದು. ಬೆಳಗಿನಿಂದ ಸುತ್ತಿಸುತ್ತಿ ಸಾಕಾಯ್ತು. ನಿಮಗೇನಾದರೂ ತಿಳಿದಿದ್ದರೆ ಹೇಳಲಿ ಅಂತಲೇ ನಿಮ್ಮನ್ನ ನಾನು ಮಾತಾಡಿಸಿದ್ದು.'

'ಅವರ ಮನೆ ಅಡ್ರಸ್ಸು ನಿನಗೆ ಗೊತ್ತಿಲ್ಲವೆ? ಯಾವತ್ತೂ ನೀನು ಅಲ್ಲಿಗೆ ಹೋಗಿರಲಿಲ್ಲವೆ?'

'ಅದಕ್ಕೆಲ್ಲಾ ಅವಕಾಶವೇ ಇರಲಿಲ್ಲವಲ್ಲ ಸ್ವಾಮಿ. ಸಾಯ್ತೇನೆ ಅಂತ ನಿಶ್ಚಯವಾಗಿದ್ದವನಿಗೆ ಹೆಂಡತಿ ಮನೆಯ ಅಡ್ರೆಸ್ ಏಕೆಬೇಕು?'

'ಎಂದರೆ, ನಿನಗೆ ಮದುವೆಯಾಗಿ..............?'

'ಮನ್ನೆ ಬುಧವಾರ ಆಯ್ತು.'

'ಮನ್ನೆ ಬುಧವಾರ? ನೀನು ಜೈಲಿನಲ್ಲಿದ್ದೆಯಲ್ಲಯ್ಯಾ. ಏನು, ಪೇಪರಿನೋನು ಅಂತ ನನ್ನಮುಂದೆ ಇಷ್ಟು ಢೋಂಗಿ ಹೊಡೆಯೋದೆ?'

'ಇಲ್ಲ ಸ್ವಾಮಿ, ನಿಜವಾಗಿಯೂ ಬುಧವಾರವೇ ಆದದ್ದು. ಜೈಲಿನಲ್ಲಿ.'

ವೆಂಕಟಾಚಲಯ್ಯನಿಗೆ ದೋಸೆ ಗಂಟಲಲ್ಲಿ ಸಿಕ್ಕಿಕೊಂಡಿತು. ಸಂಭಾಷಣೆ ಬಹಳ ಸ್ವಾರಸ್ಯವಾಗಿತ್ತು. ಏನೋ ಶೃಂಗಾರ ಪ್ರಮೇಯವಿರಬೇಕೆಂದು ತಾನು ಕುಳಿತಿದ್ದ ಬೆಂಚನ್ನು ಬಿಟ್ಟು ಇವನ ಹತ್ತಿರಕ್ಕೆಬಂದು ಕುಳಿತ. ಕಾಫಿ ತಂದ ಮಾಣಿ ಇವರಿಬ್ಬರೂ ಹೀಗೆ ಅನ್ಯೋನ್ಯವಾಗಿರುವದನ್ನು ಕಂಡು ಬೆರಗಾಗಿ ಬೇರೆ ಕಡೆಗೆ ಹೋಗುವುದನ್ನು ಮರೆತು ನಿಂತುಕೊಂಡಿದ್ದ. ನಟೇಶನು ಸೂಕ್ಷ್ಮವಾಗಿ ತನ್ನ ಮದುವೆಯಾದ ರೀತಿಯನ್ನು ಅವನಿಗೆ ತಿಳಿಸಿ

'ಅವಳ ಮಾಂಗಲ್ಯದಪುಣ್ಯ ನನ್ನನ್ನು ಉಳಿಸಿತೆನ್ನುತ್ತಾರೆ. ಆ ಪುಣ್ಯಾತ ಗಿತ್ತಿಯ ಮುಖ ನೋಡೋಣವೆಂದರೆ ಅವಳೆಲ್ಲಿದ್ದಾಳೆಂದು ತಿಳಿಯದು' ಎಂದ.

ಇಬ್ಬರೂ ಕಾಫಿ ಕುಡಿದು ಆಗಿತ್ತು. ಮಾಣಿ ಇಬ್ಬರಿಗೂ ಬೇರೆಬೇರೆ ಬಿಲ್ ತಂದುಕೊಟ್ಟ. ವೆಂಕಟಾಚಲಯ್ಯ ಎರಡನ್ನೂ ತಾನೇ ತೆಗೆದು ಕೊಂಡು ಅವನಿಗೆ ಹನ್ನೆರಡಾಣೆಕೊಟ್ಟು ಕಳಿಸಿದ. ಅವನ ತಲೆ ನಟೇಶನ ಸಮಸ್ಯೆಗೆ ಪರಿಹಾರವನ್ನು ಹುಡುಕುತ್ತಿತ್ತು.

'ಮದುವೆಮಾಡಿಸಿದ ರಿಜಿಸ್ಟ್ರಾರ್ರು ನಿನಗೆ ಸರ್ಟಿಫಿಕೇಟನ್ನೇನಾದರೂ ಕೊಟ್ಟಿದ್ದಾರೋ' ಎಂದು ಕೇಳಿದ.

'ಅದೇನೋ ಒಂದು ಕಾಗದ ಕೊಟ್ಟಿದ್ದಾರೆ ಸ್ವಾಮಿ, ಇಂಗ್ಲೀಷಿನಲ್ಲಿದೆ' ಎಂದು ನಟೇಶ ತನ್ನ ಅಂಗಿಯ ಜೇಬಿನಿಂದ ಒಂದು ಕಾಗದವನ್ನು ತೆಗೆದು ಕೊಟ್ಟ. ವೆಂಕಟಾಚಲಯ್ಯನಿಗೆ ಸ್ವರ್ಗ ಕೈಗೆ ಎಟುಕಿದಷ್ಟು ಆನಂದವಾಗಿ

'ಓ, ಆಕೆಯೇ, ನಾನು ಮನೆ ತೋರಿಸುತ್ತೇನೆ ಬಾ' ಎಂದ. ನಟೇಶ ನಿಗೂ ಸಂತೋಷವಾಯಿತು. ಅನಿರೀಕ್ಷಿತವಾಗಿ ಎಂಥ ಮನುಷ್ಯ ಸಿಕ್ಕಿದ!

ಎರಡು ನಿಮಿಷದಲ್ಲಿ ಬರುತ್ತೇನೆಂದು ಹೇಳಿ ವೆಂಕಟಾಚಲಯ್ಯನು ಹೋಟಲಿನೊಳಕ್ಕೆಹೋಗಿ ತನ್ನ ಪತ್ರಿಕೆಯ ಆಫೀಸಿಗೆ ಅದುವರೆಗೆ ತಾನು ಸಂಗ್ರಹಿಸಿದ ವಿವರಗಳನ್ನೆಲ್ಲ ವರದಿಮಾಡಿ ಹಿಂಪಕ್ಕೆಬಂದು ನಟೇಶನನ್ನು ಕರೆದುಕೊಂಡು ಹೊರಟ.

— ೧೪ —

ವೆಂಕಟಾಚಲಯ್ಯನು ಬೈಸಿಕಲ್ಲನ್ನು ತಳ್ಳಿಕೊಂಡು ಬರುತ್ತಿದ್ದ. ವಸಂತಳ ಮನೆಗೆ ಹೋಗುವುದಕ್ಕೆಮುಂಚೆ ನಟೇಶನನ್ನು ಪತ್ರಿಕೆಯ ಕಚೇರಿಗೆ ಕರೆತರಬೇಕೆಂದು ಸಂಪಾದಕರ ಅಪ್ಪಣೆಯಾಗಿತ್ತು. ಆದರಿಂದ ಹೋಟಲಿನ ಪಕ್ಕದಲ್ಲೇ ಇದ್ದ ಸೆಕ್ರೆಟೇರಿಯಟ್ ಕ್ಲಬ್ಬಿನಲ್ಲಿ ಬೈಸಿಕಲ್ಲನ್ನು ತಳ್ಳಿ ಬರಿದಾಗಿ ಓಡುತ್ತಿದ್ದ ಟ್ಯಾಕ್ಸಿಯೊಂದನ್ನು ಹಿಡಿದ. ನಟೇಶನಿಗೆ ಟ್ಯಾಕ್ಸಿಯಲ್ಲಿ ಕುಳಿತುಕೊಳ್ಳುವುದಕ್ಕೆ ಹೆದರಿಕೆ; ಅದಕ್ಕೆ ಕೊಡಲು ತನ್ನಲ್ಲಿ ಹಣವಿಲ್ಲ; ಆದರಿಂದ

'ನಡೆದುಕೊಂಡು ಹೋದರಾಗದೆ ಸಾರ್' ಎಂದ.

'ಇಲ್ಲ ನಟೇಶ್, ಬಹಳದೂರ ಹೋಗಬೇಕು.'

'ಆದರೆ....ಇದರ ಬಾಡಿಗೆ....

'ಅದನ್ನು ನೀನೇನೂ ಯೋಚಿಸಬೇಡ. ನಾನು ಕೊಡುತ್ತೇನೆ.'

'ನಿಮಗೆ ಬಹಳ ತೊಂದರೆ ಕೊಟ್ಟಹಾಗಾಯಿತು.'

'ಚಿಂತೆಯಿಲ್ಲಯ್ಯಾ, ಮನುಷ್ಯ ಎಂದಮೇಲೆ ಇನ್ನೊಬ್ಬರ ಕಷ್ಟಸುಖಕ್ಕೆ ಆಗಬೇಕಾಗುತ್ತೆ.'

ವೆಂಕಟಾಚಲಯ್ಯ ಅವನನ್ನು ಕರೆದುಕೊಂಡು ಹೋಗುತ್ತಿದ್ದುದು ಧರ್ಮಬುದ್ಧಿಯಿಂದೇನೂ ಅಲ್ಲ; ತಮ್ಮ ಪತ್ರಿಕೆಯ ಓದುಗರಿಗೆ ಪ್ರಚಲಿತ ಸಮಾಚಾರವೊಂದನ್ನು ಕೊಟ್ಟು ಪತ್ರಿಕೆಯ ಗಿರಾಕಿಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ. ತಮ್ಮ ಪ್ರಯೋಜನಕ್ಕಾಗಿ ಮಾಡಿದ ಕೆಲಸಗಳಲ್ಲಿ ಪರೋಪಕಾರವನ್ನು ತೋರಿಸಿಕೊಳ್ಳುವ ಜನರಲ್ಲಿ ವೆಂಕಟಾಚಲಯ್ಯನೂ ಒಬ್ಬನಾನೆ!

ಹತ್ತಲು ಹಿಂದು ಮುಂದು ನೋಡುತ್ತಿದ್ದ ನಟೇಶನನ್ನು ವಾಸ್ತವವಾಗಿ ಒಳಕ್ಕೆತಳ್ಳಿ ವೆಂಕಟಾಚಲಯ್ಯನು ಟ್ಯಾಕ್ಸಿಯಲ್ಲಿ ಕುಳಿತ. ಅಂಥ ಭವ್ಯವಾದ ಕಾರಿನಲ್ಲಿ ನಟೇಶನು ಕುಳಿತುದು ಅದೇಮೊದಲು. ಪಕ್ಷಿಯಂತೆ ಹಾರುತ್ತ ಅದು ಬೆಂಗಳೂರಿನ ಸಿಮೆಂಟ್ ರಸ್ತೆಗಳಲ್ಲಿ ವೇಗವಾಗಿ ಓಡುತ್ತಿದ್ದರೆ ನಟೇಶನಿಗೆ ಹೊಸದೊಂದು ಲೋಕದ ಹೆಬ್ಬಾಗಿಲು ತೆರೆಯುತ್ತಿದ್ದಂತೆ ತೋರಿತು. ಶ್ರೀಮಂತಿಕೆಯ ಪ್ರಭಾವ ಇನ್ನೆಷ್ಟೆಂದು ಅವನು ಯೋಚಿಸತೊಡಗಿದ. ತಾನು ವಸಂತಳ ಗಂಡನೆಂದು ಹೇಳಿದಕೂಡಲೇ ವೆಂಕಟಾಚಲಯ್ಯನು ತನ್ನಲ್ಲಿ

ತೋರಿಸಿದ ಆಸಕ್ತಿಯನ್ನು ಅವನು ಗಮನಿಸದೆ ಇರಲಿಲ್ಲ. ಅಪರಿಚಿತನು ತಿಂದ ತಿಂಡಿಯ ಹಣಕೊಟ್ಟುದೂ ಈಗ ಟ್ಯಾಕ್ಸಿಯಲ್ಲಿ ಕರೆದೊಯ್ಯುತ್ತಿರುವುದೂ ಇವೆಲ್ಲ ಆ ಶ್ರೀಮಂತಿಕೆಯ ಪ್ರಭಾವವೇ. ಹಣಕ್ಕೆ ಬೆಲೆಕೊಡುವ ಪ್ರಪಂಚವಿದು.

ಟ್ಯಾಕ್ಸಿಯು 'ವಿಶ್ವಪ್ರೇಮಿ' ಪತ್ರಿಕೆಯ ಆಫೀಸಿನಮುಂದೆ ನಿಂತಿತು. ವೆಂಕಟಾಚಲಯ್ಯನು ನಟೇಶನನ್ನು ಆಫೀಸಿನೊಳಕ್ಕೆ ಕರೆದೊಯ್ದು ಸಂಪಾದಕರ ಭೇಟಿಮಾಡಿಸಿದ. ಸಂಪಾದಕರು ಬಹಳ ಮರ್ಯಾದೆ ತೋರಿಸಿ ಅವನನ್ನು ಕುಳ್ಳಿರಿಸಿಕೊಂಡು ಹತ್ತು ನಿಮಿಷ ಮಾತನಾಡಿದರು. ಅಷ್ಟರಲ್ಲಿ ಪತ್ರಿಕೆಯ ಫೋಟೋಗ್ರಾಫರು ಬಂದು ನಟೇಶನ ಫೋಟೋ ಒಂದನ್ನು ತೆಗೆದುಕೊಂಡ. ವೆಂಕಟಾಚಲಯ್ಯನ ಕೈಯಲ್ಲೇ ಇದ್ದ ಮದುವೆಯ ಸರ್ಟಿಫಿಕೇಟನ್ನೂ ಒಯ್ದು ಅದುವರೆಗೆ ಫೋಟೋ ತೆಗೆದಾಗಿತ್ತು. ಸಾಕಷ್ಟು ವಿಷಯವನ್ನು ಸಂಗ್ರಹಿಸಿ ನಟೇಶನನ್ನು ಅಲ್ಲಿಂದ ಬೀಳ್ಕೊಟ್ಟರು. ಹೊರಡುವಾಗ ಸಂಪಾದಕರು

'ನೀವು ಯಾವುದಕ್ಕೂ ಸಂಕೋಚಪಡಬೇಡಿ ನಟೇಶ್, ನಮ್ಮ ವೆಂಕಟಾಚಲಯ್ಯನವರು ಎಲ್ಲವನ್ನೂ ನೋಡಿಕೊಳ್ಳುತ್ತಾರೆ. ನಿಮಗೆ ಏನುಬೇಕಾದರೂ ಅವರನ್ನು ಕೇಳಬಹುದು' ಎಂದರು. ಅವರ ಸೌಜನ್ಯಕ್ಕೆ ನಮಸ್ಕರಿಸಿ ನಟೇಶನು ಮತ್ತೆ ವೆಂಕಟಾಚಲಯ್ಯನೊಂದಿಗೆ ಹೊರಟ.

ವಸಂತಳ ಮನೆಯನ್ನು ಅವರು ತಲುಪುವಾಗ್ಗೆ ಸಂಜೆ ಐದು ಗಂಟೆ ಹೊಡೆದಿತ್ತು. ಟ್ಯಾಕ್ಸಿಯನ್ನು ಹೊರಗಡೆಯೇ ನಿಲ್ಲಿಸಿ ಅವನಿಗೆ ಹಣಕೊಟ್ಟು ಕಳಿಸಿ ವೆಂಕಟಾಚಲಯ್ಯನು ನಟೇಶನನ್ನು ಹಿಂದಿಟ್ಟುಕೊಂಡು ಗೇಟನೊಳಕ್ಕೆ ನಡೆದ. ಆ ದಿನದ ಸಮಾರಂಭಕ್ಕೆ ನೂರಾರು ಜನ ಬಂದಿದ್ದರೆಂಬುದರ ಮೇಲೋ ಅಥವಾ ದೊಡ್ಡ ಮನುಷ್ಯನಾದ ವೆಂಕಟಾಚಲಯ್ಯನ ಜೊತೆಯಲ್ಲಿ ಬಂದಿದಾನೆಂದೋ ಹೊರಬಾಗಿಲ ಬಳಿ ಕಾವಲಿದ್ದ ಘೂರ್ಕನು ನಟೇಶನನ್ನು ತಡೆಯಲಿಲ್ಲ. ನಾಲ್ಕು ಹೆಜ್ಜೆಮುಂದೆ ಹೋದ ಮೇಲೆ ನಟೇಶನು ಸಂಶಯಾತ್ಮಕ ಧ್ವನಿಯಿಂದ

'ಇದೇನೆ ವಸಂತಳ ಮನೆ?' ಎಂದು ಕೇಳಿದ.

'ನನ್ನ ಮನೆ ಎಂದು ಕೇಳಯ್ಯ. ಈ ಮನೆಗೆ ನೀನೇ ಮಾಲೀಕ.'

ನಟೇಶನು ಭವ್ಯವಾದ ಆ ಮನೆಯನ್ನೂ ಅದರ ಸುತ್ತಲೂ ಇದ್ದ ವಿಸ್ತಾರವಾದ ಆವರಣವನ್ನೂ ನೋಡಿದ. ವೆಂಕಟಾಚಲಯ್ಯನಾಡಿದ

ಮಾತಿಗೆ ಒಮ್ಮೆ ಮನಸ್ಸಿನಲ್ಲಿ ಸಂತೋಷ ತೋರಿತು; ಒಡನೆಯೇ ಅದು ನಿಜವೆ, ಸಾಧ್ಯವೆ ಎಂದು ಬೇರೊಂದು ದನಿ ಕೇಳುತ್ತಿತ್ತು.

ಮನೆ ಸ್ವಲ್ಪ ದೂರವಿರುವಾಗ ವೆಂಕಟಾಚಲಯ್ಯನು ಹಿಂದೆ ನಿಂತು ನಟೇಶನನ್ನು ಮುಂದಾಗಿ ಹೋಗೆಂದ. ಅವನಿಗೆ ಸಂಬಂಧಪಡದ ಮನುಷ್ಯನಾಗಿ ಅವನು ಅಲ್ಲಿ ನಡೆಯುವ ಸಮಾಚಾರಗಳನ್ನು ತಿಳಿಯಬೇಕಾಗಿತ್ತು. ತನಗೆ ತಿಳಿದಿರುವುದು ಇನ್ನೂ ಒಂದು ಕಡೆಯ ಕಥೆ ಮಾತ್ರ; ವಸಂತಳ ಕಡೆಯ ಕಥೆ ಇನ್ನೂ ಸ್ವಾರಸ್ಯವಾಗಿರಬೇಕು. ಏನೋ ಬಲವಾದ ಕಾರಣವಿಲ್ಲದೆ ಅವಳು ನಟೇಶನನ್ನು ಮದುವೆಯಾಗಿರಲಾರಳು; ಆ ಕಾರಣದ ರಹಸ್ಯವನ್ನು ಭೇದಿಸಲೇಬೇಕು. ಅದರಿಂದ ತಾನು ಮೂರನೆಯ ಮನುಷ್ಯನಾಗಿ ಎಲ್ಲವನ್ನೂ ನೋಡುತ್ತಿರುವುದೇ ಸರಿ.

ಹಿಂದೆ ಮುಂದೆ ಹೋಗುತ್ತಿದ್ದ ಇವರನ್ನು ಯಾರೂ ಗಮನಿಸಿದಂತೆ ಕಾಣಲಿಲ್ಲ. ಎಲ್ಲರೂ ಸಮಾರಂಭದ ಸಮಾರಾಧನೆಯಲ್ಲಿ ತಲ್ಲೀನರಾಗಿದ್ದರು. ಆದುವರೆಗೆ ಅತಿಥಿಗಳಿಗೆ ಕಾಫಿ ತಿಂಡಿಗಳು ಮುಗಿದು ಒಳಗೆ ಹಾಲಿನಲ್ಲಿ ಮೈಸೂರು ಸೋದರಿಯರ ನೃತ್ಯ ನಡೆಯುತ್ತಿತ್ತು. ಅತಿಥಿಗಳನ್ನು ಕರೆತಂದಿದ್ದ ಕಾರುಗಳ ಡ್ರೈವರುಗಳಿಗೆ ಮತ್ತು ಮನೆಯ ಆಳುಕಾಳುಗಳಿಗೆ ಕಾಫಿ ತಿಂಡಿಗಳು ಬೇರೊಂದು ಕಡೆ ನಡೆಯುತ್ತಿದ್ದುದರಿಂದ ಎಲ್ಲರೂ ಅತ್ತ ಕಡೆ ಸೇರಿಬಿಟ್ಟಿದ್ದರು.

ಮನೆಯ ಮಹಾದ್ವಾರವನ್ನು ತಲುಪುತ್ತಿದ್ದ ಹಾಗೇ ನಟೇಶನ ಮನಸ್ಸು ನಾನಾ ಯೋಚನೆಗಳನ್ನು ಮಾಡುತ್ತಿತ್ತು. ತಾನು ಈ ದಿನ ಸಾಯುತ್ತೇನೆಂದು ತಿಳಿದುತಿಳಿದೂ ವಸಂತಳು ಇಂಥ ಸಮಾರಂಭವನ್ನಿಟ್ಟುಕೊಂಡಿರುವುದರ ಅರ್ಥವೇನು ? ಇಂಥ ಶ್ರೀಮಂತಳು ತನ್ನನ್ನು ಮದುವೆಯಾದುದೇಕೆ? ಮದುವೆಯಾದವಳು ಪುನಃ ಒಂದು ಸಲವೂ ತನ್ನನ್ನು ನೋಡಲು ಬರಲಿಲ್ಲವೇಕೆ ? ತನಗೆ ಬಿಡುಗಡೆಯು ಹೇಗಾಯಿತು, ಯಾರಿಂದಾಯಿತು ? ವಸಂತಳು ಅವಕ್ಕೆ ಕಾರಣಳೆಂದರೆ ತನ್ನ ವಿಷಯದಲ್ಲಿ ಇಷ್ಟು ಉದಾಶೀನದಿಂದ ಇರುವ ಇವಳು, ತನ್ನ ಸಾವಿನಲ್ಲಿ ಸಂತೋಷಪಡುತ್ತಿರುವವಳು ತನ್ನನ್ನು ಉಳಿಸಲು ಪ್ರಯತ್ನಿಸಿರುವುದು ಸಾಧ್ಯವೆ? ಇವೆಲ್ಲ ಏನೋ ಬಗೆಹರಿಯದ ಸಮಸ್ಯೆಯಾಗಿದೆ. ಹೀಗೆಂದುಕೊಳ್ಳುತ್ತ ನಟೇಶನು ಮನೆಯ ಮಹಾದ್ವಾರವನ್ನು

ಪ್ರವೇಶಿಸಿ ನೃತ್ಯ ನಡೆಯುತ್ತಿದ್ದ ಹಾಲಿನ ಒಳಹೊಕ್ಕು ಸುತ್ತಲೂ ನೋಡುತ್ತ ನಿಂತ. ನೃತ್ಯ ಬಹಳ ಸೊಗಸಾಗಿ ನಡೆದಿತ್ತು. ಮೋಹಿನಿ ಭಸ್ಮಾಸುರರ ಕಥೆಯನ್ನು ನರ್ತಕಿಯರು ಹೃದಯಂಗಮವಾಗಿ ಅರ್ಥಪೂರ್ಣವಾಗಿ ನಯನ ಮನೋಹರವಾಗಿ ಅಭಿನಯಿಸುತ್ತಿದ್ದರು. ಮೋಹಿನಿಯ ಮೋಹಕ್ಕೆ ಸಿಲುಕಿ ಭಸ್ಮಾಸುರನು ತನ್ನ ಸತ್ವವನ್ನು ವ್ಯಕ್ತಿತ್ವವನ್ನು ಮರೆತು ಅವಳ ದಾಸನಾಗಿ ಅವಳ ಮನವೊಲಿಸಲೆತ್ನಿಸುತ್ತಿರುವ ಭಾಗ ಅತಿಥಿಗಳೆಲ್ಲರ ಗಮನವನ್ನೂ ಸೆಳೆ ದಿತ್ತು. ಗೌರಮ್ಮ ಒಳಗಡೆ ಏನೋ ಕೆಲಸದಲ್ಲಿದ್ದಳು. ವಸಂತ ಅಲ್ಲಿಂದ ಇಲ್ಲಿಗೆ ಸಂಭ್ರಮದಿಂದ ಓಡಾಡುತ್ತ ತನ್ನ ಮುಗುಳ್ನಗೆಯಿಂದ ಕೆಲವರನ್ನ, ತಲೆಯನ್ನು ತುಸುಕೊಂಕಿಸಿ ನಮಸ್ಕರಿಸಿದ ಭಾವ ತೋರಿಸಿ ಕೆಲವರನ್ನ, ಮರ್ಯಾದೆಯ ಎರಡು ಮಾತುಗಳನ್ನಾಡಿ ಕೆಲವರನ್ನ, ಭುಜ ತಟ್ಟಿ ಕೈ ಜಿಗುಟಿ ಕೂದಲೆಳೆದು ಕೆಲವರನ್ನ ವಿಚಾರಿಸಿಕೊಳ್ಳುತ್ತಿದ್ದಳು. ನೃತ್ಯ ಗಮನ ವನ್ನು ಸೆಳೆದಿದ್ದ ಎರಡು ನಿಮಿಷ ಸುಮ್ಮನಿದ್ದವಳು ಪುನಃ ಚಪಲತೆಯಿಂದ ಅತ್ತಿತ್ತ ನೋಡುತ್ತ ಕಣ್ಣುಗಳನ್ನು ಬಾಗಿಲ ಕಡೆ ಹೊರಳಿಸಿದಳು. ನಟೇಶನು ನಿಂತಿರುವುದು ಕಂಡಿತು ; ನಂಬಲಾರದೆ ಕಣ್ಣರಳಿಸಿ ನೋಡಿದಳು. ಹೌದು, ಅವನೇ. ಚಿಟ್ಟನೆ ಚೀರಿ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿ ಕೊಂಡಳು.

ವಸಂತಳು ಚೀರುತ್ತಲೇ ನೂರಾರು ಕಣ್ಣುಗಳು ನಟೇಶನ ಕಡೆಗೆ ತಿರುಗಿ ದುವು. 'ಹುಚ್ಚ, ಹುಚ್ಚ' ಎಂದು ನಾಲ್ಕಾರು ಜನರು ಕೂಗಿಕೊಂಡರು. ರಾವ್ ಸಾಹೇಬರು ಎದ್ದುನಿಂತು 'ಬೋರಾ, ರಂಗಾ, ಮಾದಾ,' ಎಂದು ಆಳು ಗಳನ್ನು ಕೂಗಿದರು. ಸಭೆಯಲ್ಲಿ ಕೋಲಾಹಲವೆದ್ದಿತು.

ತನ್ನ ಹೆಂಡತಿಯು ಎಲ್ಲಿರುವಳೆಂದು ಹುಡುಕುತ್ತಿದ್ದ ನಟೇಶನು ಅವಳು ಕಣ್ಣಿಗೆ ಬೀಳುತ್ತಲೇ ಅವಳಕಡೆಗೆ ಹೆಜ್ಜೆ ಹಾಕತೊಡಗಿದ್ದ. ಅವನು ಎರಡು ಹೆಜ್ಜೆಮುಂದೆ ಹೋಗುವುದರೊಳಗೆ ಅವಳು ಚೀರಿದಳು. ಅವಳ ಕೂಗಾಗಲಿ, ಜನರ ಗದ್ದಲವಾಗಲಿ ರಾವ್ ಸಾಹೇಬರು ಆಳುಗಳನ್ನು ಕರೆದದ್ದಾಗಲಿ ಅವನ ನಡಿಗೆಯನ್ನು ನಿಲ್ಲಿಸಲಿಲ್ಲ. ಅವನು ಮುಂದುವರಿಯುತ್ತಿರುವುದನ್ನು ಕಂಡು ಧೈರ್ಯಶಾಲಿಗಳಾದ ನಾಲ್ಕಾರುಜನ 'ಗಂಡು'ಗಳು ಅವನನ್ನು ತಡೆಯಲೆತ್ನಿಸಿ ದರು. ಅವನು ಕೈಯಿಂದ ಅವರನ್ನು ನಿವಾರಿಸಿದಪೆಟ್ಟಿಗೆ ಅವರಿಗೆ ಇದ್ದ

ಧೈರ್ಯವನ್ನು ಉಡುಗಿಸಿ ಸಹಾಯಕ್ಕೆ ಇತರರಕಡೆ ನೋಡುವಂತೆ ಮಾಡಿತು. ಇಲ್ಲಿನ ಗದ್ದಲವನ್ನು, ರಾವ್ ಸಾಹೇಬರ ಕೂಗನ್ನು ಕೇಳಿಯೋ ಏನೋ ಆಳುಗಳು ಧಾವಿಸುತ್ತ ಬಂದರು. ಅಷ್ಟುಹೊತ್ತಿಗೆ ನಟೇಶನು ವಸಂತಳ ಎದುರಿನಲ್ಲಿ ಬಂದು ನಿಂತಿದ್ದ. ರಾವ್ ಸಾಹೇಬರು

'ಯಾರೋ ನೀನು ? ಹೋಗಾಚೆ' ಎಂದು ಆರ್ಭಟಿಸಿದರು.

'ನಾನು ಯಾರೆಂದು ಆಕೆಯನ್ನು ಕೇಳಿ' ಎಂದು ನಟೇಶನು ವಸಂತಳ ಕಡೆ ಕೈತೋರಿಸಿದ.

'ಆಕೆಯನ್ನೇನು ಕೇಳುವುದು ಈಕೆಯನ್ನ ; ಬಂದ, ಬಹಳ ದೊಡ್ಡ ಮನುಷ್ಯನಹಾಗೆ. ಆಚೆ ಹೋಗುತೀಯೋ ಕತ್ತುಹಿಡಿದು ನೂಕಿಸಬೇಕೋ ?'

'ಅವರು ತಿಳಿಯದೆ ಕೂಗಾಡುತ್ತಿದ್ದಾರೆ; ನಾನು ಯಾರೆಂದು ಹೇಳು ವಸಂತಾ ! '

ಸಂಭಾಷಣೆಯನ್ನು ಕೇಳುತ್ತಿದ್ದವರ ದೃಷ್ಟಿ ವಸಂತಳಕಡೆ ಹರಿಯಿತು. ಅದುವರೆಗೆ ನೃತ್ಯವು ನಿಂತು ಎಲ್ಲರೂ ಇವರ ಸುತ್ತ ಮುತ್ತನಿಂತಿದ್ದರು. ಅವಮಾನದಿಂದ ವಸಂತಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ದುಡುಕಿ ತಾನು ಮಾಡಿದ ಕೆಲಸ ಅವಳನ್ನು ಇಕ್ಕಟ್ಟಿಗೆ ಗುರಿಮಾಡಿತು. ನಟೇಶನು ಸಾಯಲಿಲ್ಲ; ತನ್ನ ಅವಿವೇಕದ ಗುರುತು ಯಾರಕಣ್ಣಿಗೂ ಬೀಳದೆ ಈ ಪ್ರಪಂಚದಿಂದ ಅಳಿಸಿ ಹೋಗುವುದೆಂದು ತಿಳಿದಿದ್ದಳು; ಅದಕ್ಕೆ ಬದಲಾಗಿ ಅದು ಮೂರ್ತಿವತ್ತಾಗಿ ಎದುರಿಗೆ ಬಂದು ನಿಂತು ತನ್ನ ಹಿತರ ಮುಂದೆ ಸ್ನೇಹಿತರಮುಂದೆ ತನ್ನನ್ನು ಅವಮಾನಗೊಳಿಸುತ್ತಿದೆ. ಏನು ಮಾಡಬೇಕೆಂದು ತೋರದೆ ಅವಳು ಅಳುತ್ತ

'ಅವನು ಯಾರೋ ನನಗೆ ತಿಳಿಯದು. ಯಾರೋ ಹುಚ್ಚ, ಹುಚ್ಚ, ಕಳಿಸಿರಿ ಆಚೆಗೆ' ಎಂದಳು.

'ಏನೆಂದೆ ? ನಾನು ಯಾರೆಂದು ನಿನಗೆ ತಿಳಿಯದೆ ? ನಾನು ವಸಂತಾ, ನಿನ್ನಗಂಡ ನಟೇಶ. ನಾನು ಸಾಯಲಿಲ್ಲ, ಬದುಕಿ ಬಂದಿದ್ದೇನೆ. ನಿನ್ನ ಮಾಂಗಲ್ಯದ ಪುಣ್ಯದಿಂದ ಬದುಕಿಬಂದಿದ್ದೇನೆ.'

ನಟೇಶನ ಮಾತುಗಳನ್ನು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು. ಕೆಲವರು ಅವನ ಧ್ವನಿಯನ್ನು ಅನುಕರಿಸಿ 'ಗಂಡ' ಎಂದರು ; ಇನ್ನು ಕೆಲವರು 'ಮಾಂಗಲ್ಯದ ಪುಣ್ಯ! ಎಲ್ಲಿದೆ ಮಾಂಗಲ್ಯ ?' ಎಂದು ಟೀಕೆಮಾಡಿದರು.

ಇವರ ನಗು, ಅನುಕರಣ, ಟೀಕೆ ವಸಂತಳ ದುಃಖವನ್ನು ಮತ್ತಷ್ಟು ಹೆಚ್ಚಿಸಿದುವು. ಮುಖವು ಬೆವರಿತ್ತು, ಮೈನಡುಗುತ್ತಿತ್ತು. ಅಳುವಿನಲ್ಲೇ ದರ್ಪ ತೋರಿಸುತ್ತ

'ನಾನು ಯಾರನ್ನೂ ನೋಡಿಲ್ಲ, ನೋಡಿಲ್ಲ, ನೋಡಿಲ್ಲ' ಎಂದು ಗಟ್ಟಿಯಾಗಿ ಹೇಳಿದಳು.

ಅವನು ಯಾರೋ ಹುಚ್ಚನೇ ಇರಬೇಕೆಂದೂ ಉತ್ಸವಭಂಗವಾಗಿ ತನಗೆ ಅವಮಾನವಾದುದಕ್ಕಾಗಿ ವಸಂತಳು ಅಳುತ್ತಿದ್ದಾಳೆಂದೂ ತಿಳಿದ ಕೆಲವು ಮಂದಿ ಯುವಕರು ಅವನನ್ನು ಅಲ್ಲಿಂದ ಆಚೆಗೆ ತಳ್ಳಲು ಪ್ರಯತ್ನಿಸಿದರು. ತನ್ನ ಗುರುತೇ ಇಲ್ಲವೆಂದು ವಸಂತಳು ಹೇಳಿದುದನ್ನು ಕೇಳಿ ಮೊದಲೇ ಅವನ ಹೃದಯದಲ್ಲಿ ಅಡಗಿದ್ದ ತಿರಸ್ಕಾರವು ಕೆರಳಿತ್ತು. ತನ್ನನ್ನು ನೂಕಲು ಮುಂದೆ ಬರುತ್ತಿದ್ದ ಅವರನ್ನು ತಡೆಯಬಲ್ಲ ಧ್ವನಿಯಿಂದ ಮಾತನಾಡಿದ,

'ನಾನು ಹುಚ್ಚನಿರಬಹುದು, ಬಡವನಿರಬಹುದು; ಆದರೆ ನಾನು ವಸಂತಳ ಗಂಡ. ಅವಳನ್ನು ಮದುವೆಯಾಗಿರುವ ಗಂಡ. ಅದಕ್ಕೆ ನನ್ನಲ್ಲಿ ದಾಖಲೆಯಿದೆ. ನೀವು ಸಾವಿರಜನ ನಕ್ಕರೆ, ಹೀಯಾಳಿಸಿದರೆ ನನಗೇನು? ಮದುವೆಯಾದವಳೇ ನನ್ನ ಗುರುತಿಲ್ಲವೆಂದಮೇಲೆ ಇನ್ನು ನಿಮ್ಮಿಂದ ನನಗೆ ಆಗಬೇಕಾದುದೇನು? ನೀವು ಸುಮ್ಮನಿದ್ದರೆ ನಾನೇ ಹೋಗುತ್ತೇನೆ. ನನ್ನ ಮೈ ಮುಟ್ಟಿದರೆ ಅಂಥವರ ಮೈಯನ್ನು ಮುರಿಯುವಶಕ್ತಿ ನನ್ನಲ್ಲಿದೆ, ಜೋಕೆ.'

ಇವನ ಮಾತನ್ನು ಪೂರ್ತಿಯಾಗಿ ಕೇಳಲು ವಸಂತಳು ಅಲ್ಲಿರಲಿಲ್ಲ. ಈ ಗಲಭೆಯ ಸುದ್ದಿಯನ್ನು ಕೇಳಿ ಒಳಗಿಂದ ಬಂದಿದ್ದ ಗೌರಮ್ಮನು ಅವಳನ್ನು ಮಹಡಿಯ ಮೇಲಕ್ಕೆ ಕಳಿಸಿಬಿಟ್ಟಿದ್ದಳು. ಇಷ್ಟು ಹಗರಣ ಮಾಡಿರುವ ಇವನಿಗೆ ನಾಲ್ಕು ಒದೆಕೊಟ್ಟೇ ಕಳಿಸಬೇಕೆಂದು ಸ್ವಾಮಿ ಮತ್ತು ಇತರ ಕೆಲವು ಯುವಕರು ಅವನನ್ನು ಕೆಣಕುತ್ತ ಬಂದರು. ನಡೆದುದೆಲ್ಲವನ್ನೂ ನೋಡುತ್ತಿದ್ದ ರಾವ್ ಸಾಹೇಬರಿಗೆ ಈ ದೃಶ್ಯದ ಹಿನ್ನೆಲೆ ಏನೆಂಬುದನ್ನು ತಿಳಿಯಬೇಕೆಂಬ ಕುತೂಹಲ ಹುಟ್ಟಿತ್ತು. ಮದುವೆಯಾದ ದಾಖಲೆ ತನ್ನಲ್ಲಿದೆಯೆಂದು ಇವನು ಹೇಳುತ್ತಾನೆ. ಅದೇನು ಇರಬಹುದು? ಕೆಣಕುತ್ತಿದ್ದ ಯುವಕರನ್ನು ಸುಮ್ಮನಿರಿಸಿ

'ಅಯ್ಯಾ—ನಿನ್ನ ಹೆಸರು ಏನೆಂದು ಹೇಳಿದೆ; ನಟೇಶ ಎಂದಲ್ಲವೆ? ಹೌದು—ನೀನು ವಸಂತಾದೇವಿಯ ಗಂಡ ಎಂದರೆ ಹೇಗಪ್ಪಾ ಜನರು ನಂಬು ತಾರೆ? ಅದೇನೋ ದಾಖಲೆಇದೆ ಎಂದೆಯಲ್ಲ, ಅದೇನು ತೋರಿಸು ನೋಡೋಣ ನಿನ್ನಮಾತೇ ನಿಜವಾಗಿದ್ದರೆ ವಸಂತಾದೇವಿಗೆ ಬುದ್ಧಿ ಹೇಳೋಣ' ಎಂದರು.

'ಕಟ್ಟಿಕೊಂಡ ಹೆಣ್ಣು ಕಾಣೆ ಎಂದಮೇಲೆ ಅವಳಿಗೆ ಬುದ್ಧಿಹೇಳಿ ಆಗುವುದೇನು? ನಾನು ಬಡವ, ಆದರೆ ಮಾನಗೆಟ್ಟವನಲ್ಲ. ನಿಮ್ಮ ಪಂಚಾ ಯತಿಯೂ ಬೇಡ, ನಿಮ್ಮ ವಸಂತಾದೇವಿಯ ಸಹವಾಸವೂ ಬೇಡ.'

'ಹಾಗಾದರೆ ನಿನ್ನ ಮಾತೇ ಸುಳ್ಳು.'

'ಛೆ! ಸುಳ್ಳೆಂಬುದು ಶ್ರೀಮಂತರ ಹಕ್ಕು; ನಮ್ಮಲ್ಲಿ ಸುಳ್ಳು ಬರುವು ದಿಲ್ಲ. ಸುಳ್ಳಾಡಿದ ದಿನ ನನ್ನ ನಾಲಗೆಯನ್ನು ಸೀಳಿಬಿಡುತ್ತೇನೆ.'

'ನಿನ್ನಮಾತು ನಿಜ ಎನ್ನುವುದಕ್ಕೆ ಗುರುತೇನಯ್ಯ?'

ನಟೇಶನು ಅಂಗಿಯ ಒಳಗಡೆ ಇಟ್ಟಿದ್ದ ಸರ್ಟಿಫಿಕೇಟನ್ನು ತೆಗೆದು ರಾವ್ ಸಾಹೇಬರ ಕೈಲಿಟ್ಟ.

'ನೋಡಿಕೊಳ್ಳಿ, ಇನ್ನು ಯಾರು ನೋಡಿದರೇನು, ಯಾರು ಬಿಟ್ಟ ರೇನು?' ತನ್ನ ಮೇಲೆ ಬರುತ್ತಿದ್ದ ಯುವಕರಕಡೆ ತಿರುಗಿ 'ನಾನು ಹೇಳಬೇಕಾದು ದನ್ನು ಹೇಳಿ ಆಯಿತು; ನಿಮ್ಮ ಶಕ್ತಿಯನ್ನು ಪರೀಕ್ಷಿಸುವ ಇಚ್ಛೆಯಿದ್ದರೆ ಬನ್ನಿ; ಇಲ್ಲವಾದರೆ ಮರ್ಯಾದೆಯಿಂದ ದಾರಿಬಿಡಿ' ಎಂದ.

ನಟೇಶನ ಮೈಯನ್ನು ಮುಟ್ಟಲು ಯಾರಿಗೂ ಧೈರ್ಯವಾಗಲಿಲ್ಲ; ಅಲ್ಲದೆ ಅವರ ಗಮನವು ರಾವ್ ಸಾಹೇಬರಕಡೆಗೆ ಹೋಗಿತ್ತು, ನಟೇಶನು ಹೋಗಲು ಜನ ದಾರಿಬಿಟ್ಟರು.

ಒಂದು ನೋಟದಲ್ಲಿ ರಾವ್ ಸಾಹೇಬರು ಸರ್ಟಿಫಿಕೇಟನ್ನು ನೋಡಿ ಬೇರೆಯವರು ಯಾರೂ ಅದನ್ನು ನೋಡದಿರಲೆಂದು ತಕ್ಷಣ ಅದನ್ನು ಹಿಸುಕಿ ಉಂಡೆಮಾಡಿ ಕೈಯಲ್ಲೇ ಹಿಡಿದು ಎಲ್ಲರೂ ಕೇಳುವಂತೆ ನಕ್ಕರು. ಏನದು ಎಂದು ಕೆಲವರು ಪ್ರಶ್ನೆ ಮಾಡಿದುದಕ್ಕೆ 'ಹುಚ್ಚನ ಕಾಗದ. ದಾರಿಯಲ್ಲಿ ಯಾವುದೋ ಕಾಗದ ಬಿದ್ದಿದ್ದರೆ ಅದನ್ನು ಅಂಗಿಯಲ್ಲಿಟ್ಟುಕೊಂಡು ತಂದಿ ದ್ದಾನೆ' ಎಂದು ಇಂಗ್ಲೀಷಿನಲ್ಲಿ ಹೇಳಿದರು. ಹೊರಗೆ ಹೋಗುತ್ತಿದ್ದ ನಟೇಶ ನಿಗೆ ಅದೇನೆಂದು ತಿಳಿಯಲಿಲ್ಲ.

ಸಮಾರಂಭವು ಅಲ್ಲಿಂದಮುಂದೆ ನಡೆಯಲಾರದೆಂದು ತಿಳಿದ ರಾವ್ ಸಾಹೇಬರು ವಸಂತಳ ಪರವಾಗಿ ಅತಿಥಿಗಳಿಗೆ ವಂದನೆಗಳನ್ನೂ ಉಪಚಾರ ಗಳನ್ನೂ ಹೇಳಿ ಅವರನ್ನು ಬೀಳ್ಕೊಟ್ಟು

'ಹೋಗಿ ಮಗುವನ್ನು ಸಮಾಧಾನಮಾಡಿ ಗೌರಮ್ಮ, ನಾಳೆ ಬೆಳಿಗ್ಗೆ ಬಂದು ನೋಡುತ್ತೇನೆ' ಎಂದು ಗೌರಮ್ಮನಿಗೆ ಹೇಳಿ ತಾವೂ ಹೊರಟರು.

ದೃಶ್ಯವನ್ನು ಸಂಪೂರ್ಣವಾಗಿ ನೋಡುತ್ತಿದ್ದ ವೆಂಕಟಾಚಲಯ್ಯನು ಜನರ ಮಧ್ಯದಲ್ಲಿ ಎಲ್ಲಿಯೋ ನುಸುಳಿಕೊಂಡು ಹೊರಬಿದ್ದ. ಆ ಪ್ರದೇಶಕ್ಕೆ ಹೊಸಬನಾಗಿದ್ದ ನಟೇಶನು ತಾವು ಬಂದ ದಾರಿಯಲ್ಲೇ ನಡೆದು ಹೋಗುತ್ತಿರ ಬೇಕೆಂದು ಊಹಿಸಿ ಒಂದು ಟ್ಯಾಕ್ಸಿಯನ್ನೇರಿ ಎಲ್ಲರಿಗಿಂತ ಸ್ವಲ್ಪ ಮುಂದಾ ಗಿಯೇ ಹೊರಟ. ಅವನು ಊಹಿಸಿದಂತೆ ನಟೇಶನು ಮಾರು ಹೆಜ್ಜೆಗಳನ್ನು ಹಾಕುತ್ತ ಹೋಗುತ್ತಿದ್ದ. ಅವನನ್ನು ಟ್ಯಾಕ್ಸಿಯಲ್ಲಿ ಕುಳ್ಳಿರಿಸಿಕೊಂಡು ವೆಂಕಟಾಚಲಯ್ಯ ತನ್ನ ಪತ್ರಿಕೆಯ ಕಚೇರಿಗೆ ಬಂದ.

— ೧೫ —

ರಾತ್ರಿಯೆಲ್ಲಾ ನಂಜುಂಡಯ್ಯನವರ ತಲೆ ಕೆಲಸಮಾಡತೊಡಗಿತು. ವಸಂತಳ ಮನೆಯಿಂದ ಹೊರಟುಬಂದವರು ತಮ್ಮ ಕೋಣೆಯಲ್ಲಿ ಕುಳಿತು ಕೊಂಡು ತಾವು ಹಿಸುಕಿ ಉಂಡೆಮಾಡಿದ್ದ ಸರ್ಟಿಫಿಕೇಟನ್ನು ಸರಿಪಡಿಸಿ ಮತ್ತೊಮ್ಮೆ ನಿಧಾನವಾಗಿ ಅದನ್ನು ನೋಡಿದರು. ನಟೇಶನು ಹೇಳಿದಮಾತು ನಿಜ; ಅವನನ್ನು ವಸಂತ ಮದುವೆಮಾಡಿಕೊಂಡಿದ್ದಾಳೆ. ಅವನು ಯಾರು, ಅವರಿಬ್ಬರಿಗೂ ಹೇಗೆ ಸಂಬಂಧವಾಯಿತು, ಯಾರಿಗೂ ತಿಳಿಯದೆ ಈ ಮದುವೆ ಮಾಡಿಕೊಂಡಳೇಕೆ, ಅವನನ್ನು ಕಂಡಾಗ ಭೀತಳಾದುದೇಕೆ, ಇಂಥ ಹತ್ತಾರು ಪ್ರಶ್ನೆಗಳು ಅವರ ತಲೆಯನ್ನು ಕೊರೆಯತೊಡಗಿದುವು. ಸರ್ಟಿಫಿಕೇಟನ್ನು ಕೊಟ್ಟ ರಿಜಿಸ್ಟ್ರಾರ್‌ರನ್ನು ವಿಚಾರಿಸಲು ಆ ವೇಳೆಯಲ್ಲಿ ಅವರ ಕಚೇರಿ ಇರುವು ದಿಲ್ಲ. ಮದುವೆಗೆ ಸಾಕ್ಷಿಯಾಗಿ ಜೈಲು ಅಧಿಕಾರಿಯ ರುಜುವಿದೆ; ಅವರಿಗೆ ನಟೇಶನ ವಿಷಯ ತಿಳಿದಿರಬಹುದು. ಅವರಿಗೆ ಟೆಲಿಫೋನ್ ಮಾಡಿದರು. ಮೊದಲನೆಯಸಲ, ಅವರು ಜೈಲಿನೊಳಗೆ ಖೈದಿಗಳನ್ನು ವಿಚಾರಿಸಿಕೊಂಡು ಬರಲು ಹೋಗಿದ್ದಾರೆಂದೂ ಇನ್ನು ಒಂದುಗಂಟೆ ಬಿಟ್ಟು ಟೆಲಿಫೋನ್ ಮಾಡ

ಬೇಕೆಂದೂ ಯಾರೋ ಉತ್ತರ ಕೊಟ್ಟರು. ವಿಧಿಯಿಲ್ಲದೆ ನಂಜುಂಡಯ್ಯ ನವರು ಒಂದುಗಂಟೆ ಕಾದು ಮತ್ತೆ ಅವರಿಗೆ ಫೋನ್ ಮಾಡಿದರು.

ಜೈಲಿನ ಅಧಿಕಾರಿಯಿಂದ ವಿವರವೆಲ್ಲಾ ತಿಳಿಯಿತು. ಅದರಲ್ಲಿ ಮುಚ್ಚಿಡ ಬೇಕಾದ ಸಂಗತಿಯೇನೂ ಇರಲಿಲ್ಲ; ಅಲ್ಲದೆ ರಾವ್ ಸಾಹೇಬರಂಥ ದೊಡ್ಡ ಮನುಷ್ಯರು ಮಾತಾಡುತ್ತಿರುವಾಗ ಅವರ ಪೋಷಣೆಗೆ ಒಳಪಟ್ಟಿದ್ದ ವಸಂತಾ ದೇವಿಯನ್ನು ಕುರಿತ ಸಮಾಚಾರವನ್ನು ತಿಳಿಸುವುದು ತಪ್ಪೇನೂ ಅಲ್ಲ. ಮದುವೆಯ ಕತೆಯನ್ನು ಕೇಳಿ ನಂಜುಂಡಯ್ಯನವರ ಮುಖ ಬೆವರಿಟ್ಟಿತು. ಏನೂ ಅರಿಯದ ಹುಡುಗಿಯೆಂದು ತಾವು ತಿಳಿದಿದ್ದ ವಸಂತ ಎಂಥ ಸಾಹಸ ಮಾಡಿದಳೆಂದು ಅವರಿಗೆ ಆಶ್ಚರ್ಯವಾಯಿತು.

ಈಗ ತಾವೇನು ಮಾಡಬೇಕು? ಹದಿಮೂರು ವರ್ಷಗಳಿಂದ ಕಟ್ಟುತ್ತಿದ್ದ ಮಹಲು ಒಂದು ಗಳಿಗೆಯಲ್ಲಿ ಕುಸಿದುಹೋಯಿತು. ವೆಂಕಪ್ಪಯ್ಯನವರ ಆಸ್ತಿ ತಮ್ಮ ಆಸ್ತಿಯೊಂದಿಗೆ ಸೇರುವ ಯೋಗ ಹೋಯಿತು. ಸ್ವಾಮಿಯು ಅವಿವೇಕಿ. ಇಷ್ಟು ದಿನಗಳು ಅವಳ ಜೊತೆಯಲ್ಲಿದ್ದರೂ ವಸಂತಳ ಮನಸ್ಸನ್ನು ಒಲಿಸಿ ಕೊಳ್ಳಲಿಲ್ಲ. ಇಷ್ಟಕ್ಕೂ ಅವಳ ಒಲುಮೆ ಎನ್ನುವುದುತಾನೆ ಎಲ್ಲಿಬಂತು? ಜೈಲಿನಲ್ಲಿದ್ದ ಖೈದಿಯನ್ನು ಮದುವೆಯಾದವಳು, ಅವನನ್ನು ಒಲಿದು ಮಾಡಿ ಕೊಂಡಳೆ? ಅದೇ ಮದುವೆಯನ್ನು ಸ್ವಾಮಿಯೊಂದಿಗೇ ಆಗಬಾರದೇಕಿತ್ತು? ಯಾರಿಗೂ ತಿಳಿಯದೆ ರಿಜಿಸ್ಟರ್ ಮದುವೆಯಾಗಬೇಕೆಂದು ಅವಳಿಗೆನಿಸಿದ್ದರೆ ಸ್ವಾಮಿಯೂ ಅವಳೂ ಹಾಗೇ ಮದುವೆಮಾಡಿಕೊಳ್ಳಬಾರದಾಗಿತ್ತೆ! ಈಗಿನ ಕಾಲದ ಹುಡುಗಿಯರು ಸಿನೀಮಾಗಳನ್ನು ನೋಡಿ ಬಹಳ ಕೆಟ್ಟುಹೋದರು. ತಮ್ಮ ಜೀವನದಲ್ಲಿ ಹೃದಯವನ್ನು ಕಂಪಿಸಬಲ್ಲ ಏನಾದರೂ ಸಾಹಸಮಾಡು ವುದು ಅವರಿಗೆ ಒಂದು ಆಟವಾಗಿ ಕಾಣುತ್ತದೆ. ವಸಂತಳ ಮಾವನಾಗುವೆ ನೆಂಬ ಆಸೆಯಂತೂ ಮಣ್ಣುಪಾಲಾಯಿತು.

ಇನ್ನು ಅವಳ ಆಸ್ತಿಯವಿಚಾರ? ರಾವ್ ಸಾಹೇಬರು ತಮ್ಮಬಳಿ ಇದ್ದ ಉಯಿಲನ್ನು ಕಬ್ಬಿಣದ ಪೆಟ್ಟಿಗೆಯಿಂದೀಚೆಗೆ ತೆಗೆದು ಸಾವಧಾನವಾಗಿ ಓದ ತೊಡಗಿದರು. ಅವರನ್ನು ಮುತ್ತಿಕೊಂಡಿದ್ದ ಗಾಢಾಂಧಕಾರದಲ್ಲಿ ಆಶಾಕಿರಣ ವೊಂದು ಕಾಣಿಸಿತು; ಮದುವೆಯಾದ ಮಾತ್ರಕ್ಕೇ ವಸಂತಳು ಆಸ್ತಿಗೆ ಅಧಿ

ಕಾರಿಣಿಯಾಗುವುದಿಲ್ಲ. ಅವಳು ತನ್ನ ಗಂಡನೊಡನೆ ಕಡೆಯಪಕ್ಷ ಒಂದು ತಿಂಗಳಾದರೂ ಸಂಸಾರ ಮಾಡಿದಲ್ಲದೆ ಅವಳು ಆಸ್ತಿಯನ್ನು ಕೇಳುವಹಾಗಿಲ್ಲ.

ಹಿಂದೆ ಒಂದೆರಡುಸಲ ಉಯಿಲನ್ನು ಓದಿದ್ದಾಗ ಈ ನಿಬಂಧನೆಯ ಮಹತ್ವ ನಂಜುಂಡಯ್ಯನವರಿಗೆ ಅರಿವಾಗಿರಲಿಲ್ಲ. ಈದಿನ ಸಂಜೆ ವಸಂತಳ ಮನೆಯಲ್ಲಿನಡೆದ ಸಂಗತಿಯಿಂದ ಇದಕ್ಕೆ ಪ್ರಾಮುಖ್ಯತೆ ಬಂದಿತ್ತು. ನಿರಾಶೆ ಯಲ್ಲಿ ಮುಳುಗಿದ್ದ ರಾವ್ ಸಾಹೇಬರಿಗೆ ನಗುಬಂತು. ವೆಂಕಪ್ಪಯ್ಯನವರು ಬಹು ಬುದ್ಧಿಶಾಲಿಗಳೆಂದೂ ಮುಂದಾಗಬಹುದಾದ್ದನ್ನು ಆಲೋಚಿಸಿಯೇ ಇಷ್ಟು ಬಿಗಿಯಾಗಿ ಉಯಿಲನ್ನು ಬರೆದಿದ್ದಾರೆಂದೂ ಅವರನ್ನು ಮನಸಿನಲ್ಲೇ ಹೊಗಳಿದರು. ತಾನು ವಿದ್ಯಾವತಿಯಾದೆ, ಪ್ರೌಢೆಯಾದೆ ಎಂಬ ಅಹಂಕಾರ ದಿಂದ ತನ್ನ ತಾತನ ಮುಖಕ್ಕೆ ಮತ್ತು ಅವರು ನಂಬಿ ನೇಮಿಸಿದ ತಮ್ಮ ಮುಖಕ್ಕೆ ಮಸಿ ಬಳಿಯಲು ಹೊರಟ ವಸಂತಳು ಈಗ ಗಾಢವಾದ ಸಮಸ್ಯೆ ಯಲ್ಲಿ ಸಿಕ್ಕಿಹಾಕಿಕೊಂಡಳು. ಗಂಡನೊಂದಿಗೆ ಒಂದು ತಿಂಗಳು ಸಂಸಾರ ಮಾಡಿದಲ್ಲದೆ ಅವಳಿಗೆ ಆಸ್ತಿ ಬರುವಹಾಗಿಲ್ಲ; ಆ ಗಂಡನನ್ನು ಈ ದಿನ ತಮ್ಮೆಲ್ಲ ರೆದುರಿಗೆ ಅವಮಾನಗೊಳಿಸಿ ಅವಳು ಮನೆಯಿಂದ ಹೊರಗೆ ಹಾಕಿದ್ದಾಳೆ. ಅಲ್ಲದೆ ಅವನೊಡನೆ ವಸಂತಳು ಒಂದು ತಿಂಗಳಲ್ಲ ಒಂದು ಗಳಿಗೆಯೂ ಸಂಸಾರ ಮಾಡುವುದು ಅಸಾಧ್ಯ. ಪರಿಸ್ಥಿತಿ ಒಂದುರೀತಿ ತಮಗೆ ಅನುಕೂಲ ವಾಗಿರುವಂತೆ ನಂಜುಂಡಯ್ಯನಿಗೆ ತೋರುತ್ತಿತ್ತು. ಅದರ ಆಗು ಹೋಗುಗಳ ಚಿಂತೆಯಲ್ಲಿ ಅವರು ರಾತ್ರಿಯನ್ನು ಕಳೆದರು.

* * *

ಇತ್ತ ವಸಂತಳಿಗಾದರೂ ನಿದ್ರೆಬರಲಿಲ್ಲ. ಆಕಾಶವೇ ಅವಳ ತಲೆಯ ಮೇಲೆ ಕಳಚಿ ಬಿದ್ದಂತಾಗಿತ್ತು. ಅತಿಥಿಗಳೆಲ್ಲರೂ ಹೋದಮೇಲೆ ಗೌರಮ್ಮನು ವಸಂತಳ ಕೊಟಡಿಗೆ ಬಂದಳು. ಸ್ವಾಮಿಯು ವಸಂತಳನ್ನು ಕಂಡು ಮಾತ ನಾಡಬೇಕೆಂದು ಪ್ರಯತ್ನಿಸಿದ; ಅವಕಾಶ ದೊರೆಯಲಿಲ್ಲ. ವಸಂತಳು ಯಾರನ್ನೂ ನೋಡಲು ಬಯಸಲಿಲ್ಲ; ಮಹಡಿಯಕಡೆಗಿದ್ದ ಬಾಗಿಲನ್ನು ಭದ್ರ ಪಡಿಸಿ ಯಾರು ಕೂಗಿದರೂ ಉತ್ತರ ಕೊಡದೆ ಇದ್ದುಬಿಟ್ಟಳು. ಅವಳ ಮನ ಸ್ಸಿನ ರೀತಿಯನ್ನರಿತಿದ್ದ ಗೌರಮ್ಮನು ಸ್ವಾಮಿಯನ್ನು ಸಹ ಕಳಿಸಿ ವಸಂತಳನ್ನು ಕಾಣಲು ಒಳಬಾಗಿಲಿಂದ ಬಂದಳು.

ಗೌರಮ್ಮನನ್ನು ಕಂಡು ವಸಂತಳ ದುಃಖ ಮೇರೆಮೀರಿತು. ಎಳೆಯ ಮಗುವಾದಾಗಿನಿಂದ ತನ್ನನ್ನು ಸಾಕಿ ದೊಡ್ಡವಳಾಗಿ ಮಾಡಿದ ಆ ತಾಯಿಯ ಎದೆಯಲ್ಲಿ ತಲೆಯನ್ನಿಟ್ಟು ಮನಸಾರ ಅತ್ತುಬಿಟ್ಟಳು. ಗೌರಮ್ಮನು ಮಾತ್ರ ವಾತ್ಸಲ್ಯದಿಂದ ಅವಳನ್ನು ತಬ್ಬಿಕೊಂಡು ತಲೆಸವರಿ ಸಮಾಧಾನ ಮಾಡುತ್ತ

'ಏನು ಮಾಡಿದೆ ಮಗು? ನನ್ನ ಮುಂದೂ ನಿನಗೆ ಸಂಕೋಚವೇಕಮ್ಮ? ಮಗುವು ಸಾವಿರ ತಪ್ಪುಗಳನ್ನು ಮಾಡಿದರೂ ತಾಯಿಯು ಅವನ್ನು ಮಡಿಲಿನಲ್ಲಿ ಹಾಕಿಕೊಳ್ಳುತ್ತಾಳೆ. ಏನು ನಡೆದಿದೆಯೆಂದು ನನ್ನಮುಂದೆ ಹೇಳು ತಾಯಿ' ಎಂದಳು.

ಅಳುವಿನ ವೇಗ ಸ್ವಲ್ಪ ಕಡಮೆಯಾದಮೇಲೆ ವಸಂತಳು ಆದಿನ ಟ್ರಸ್ಟಿಗಳೊಡನೆ ನಡೆದ ಮಾತಿನ ಮೊದಲುಗೊಂಡು ಅದುವರೆಗೆ ತಾನು ನಡೆಸಿದ ಎಲ್ಲ ಕೆಲಸಗಳನ್ನೂ ಯೋಚನೆಗಳನ್ನೂ ಗೌರಮ್ಮನಿಗೆ ವರದಿಮಾಡಿದಳು. ಆದುದು ಆಗಿಹೋಯಿತು; ತಾನೊಂದು ಯೋಚಿಸಿದರೆ ದೈವವೊಂದು ಯೋಚಿಸಿತು; ಸರಿಯವರಲ್ಲಿ ತಾನು ತಲೆಯೆತ್ತಲಾರದಂತಾಯಿತು; ಈ ಅವಮಾನವನ್ನು ಸಹಿಸುವುದಕ್ಕಿಂತ ತಾನು ಎಲ್ಲಿಯಾದರೂ ಹೋಗುವುದು ಲೇಸೆಂದು ವಸಂತಳಿಗೆನಿಸುತ್ತಿತ್ತು.

'ಅಮ್ಮಾ, ನನ್ನ ಹತ್ತಿರ ಎರಡುಸಾವಿರ ರೂಪಾಯಿಗಳಿವೆ. ಅಷ್ಟು ಸಾಕು. ನಾಳೆ ನಾನು ಬೊಂಬಾಯಿಗೆ ಹೋಗುತ್ತೇನಮ್ಮ: ಈ ಊರಿನಲ್ಲಿ ನಾನಿರಲಾರೆ. ತಾತನು ಬಿಟ್ಟುಹೋದ ಆಸ್ತಿಯು ಬಂದರೆಬರಲಿ, ಇಲ್ಲದಿದ್ದರೆ ನನ್ನ ಜೀವನವನ್ನು ಹೇಗಾದರೂ ಸಾಗಿಸುತ್ತೇನೆ. ದೇವರ ದಯೆಯಿಂದ ನಾಲ್ಕು ಅಕ್ಷರವನ್ನು ಕಲಿತೆ. ತಾತನಭಾಗ್ಯ ನನಗಷ್ಟೇ ಸಾಕು.'

ಗೌರಮ್ಮನು ಸ್ವಲ್ಪ ಅಸಮಾಧಾನದಿಂದಲೇ ಉತ್ತರ ಕೊಟ್ಟಳು.

'ಏನು ಮಾತಾಡುತ್ತೀ ಮಗು? ಊರನ್ನು ಬಿಟ್ಟುಹೋಗುವಂಥ ಅಪರಾಧ ನೀನೇನು ಮಾಡಿದ್ದಿ? ಆಡಿಕೊಳ್ಳುವ ಜನರಿಗೆ ನೀನು ಇಲ್ಲಿದ್ದರೇನು, ಬೊಂಬಾಯಲ್ಲಿದ್ದರೇನು; ಅವರಿಗೆ ಹೆದರಿ ಊರನ್ನು ಬಿಡುವ ಯೋಚನೆ ಮಾಡುವುದೆ? ಚೆನ್ನಾಯಿತು!'

'ಸಾಯುತ್ತಿದ್ದ ವೃದ್ಧಿಯನ್ನು ಮದುವೆಯಾದವಳೆಂದು ಜನ ಆಡಿಕೊಳ್ಳುವುದಿಲ್ಲವೇನಮ್ಮಾ?'

'ದುಷ್ಟರು ಹಾಗೆನ್ನುತ್ತಾರೆ. ಸಂಸಾರಿಗಳು, ಮರ್ಯಾದಸ್ಥರು ಯಾರೂ ಹಾಗೆನ್ನುವುದಿಲ್ಲ. ಅದಕ್ಕೆ ಬದಲಾಗಿ, ಸತಿಸಾವಿತ್ರಿಯಂತೆ ಮೃತ್ಯುಮುಖ ದಲ್ಲಿದ್ದ ಗಂಡನನ್ನು ಬದುಕಿಸಿಕೊಂಡ ಪುಣ್ಯವತಿಯೆಂದು ಕೈಮುಗಿಯುತ್ತಾರೆ.'

'ಎಲ್ಲಿಯ ಗಂಡ, ಎಲ್ಲಿಯ ಸಂಬಂಧ' ಎಂದು ವಸಂತಳು ತಿರಸ್ಕಾರ ದಿಂದ ಹೇಳಿದಳು.

'ಹಾಗೆ ಹೇಳಬಾರದಮ್ಮ. ಸಂಬಂಧವನ್ನು ಕಲ್ಪಿಸುವವರು ಬಿಡು ವವರು ನಾವಲ್ಲ. ಅದು ದೈವ ಸಂಘಟನೆ. ಕೌಸಲ್ಯೆಗೂ ದಶರಥನಿಗೂ ಮದುವೆಯಾಗಬಾರದೆಂದು ರಾವಣಾಸುರ ಕೌಸಲ್ಯೆಯನ್ನು ಒಂದು ಪೆಟ್ಟಿಗೆ ಯಲ್ಲಿಟ್ಟು ಭದ್ರವಾಗಿ ಬೀಗಹಾಕಿ ಸಮುದ್ರ ಮಧ್ಯದಲ್ಲಿದ್ದ ತಿಮಿಂಗಿಲದ ಬಾಯಲ್ಲಿ ಕೊಟ್ಟಿದ್ದ. ಆದರೆ ಬ್ರಹ್ಮನು ಗೊತ್ತುಮಾಡಿದ್ದ ಮುಹೂರ್ತಕ್ಕೆ ಸರಿಯಾಗಿ ದಶರಥನಿಗೂ ಕೌಸಲ್ಯೆಗೂ ಮದುವೆಯಾಗಿಯೇಬಿಟ್ಟಿತು. ರಾಜ ಕುಮಾರಿಯಾಗಿ ದೇವಿಯ ವರದಿಂದ ಹುಟ್ಟಿದ ಸಾವಿತ್ರಿಯು ಕಾಡಿನಲ್ಲಿ ಅಲೆಯುತ್ತಿದ್ದ ಸತ್ಯವಾನನನ್ನು ಮದುವೆಯಾದಳು. ಮದುವೆ ಎನ್ನುವುದು ನಮ್ಮ ಕೈಯಲ್ಲಿಲ್ಲ ಮಗೂ, ಅದು ದೈವೇಚ್ಛೆ!'

ಗೌರಮ್ಮ ಪುರಾಣೇತಿಹಾಸಗಳ ಉದಾಹರಣೆಗಳನ್ನು ಕೊಡುತ್ತ ಒಂದು ದೊಡ್ಡ ಭಾಷಣವನ್ನೇ ಮಾಡಿದಳು. ಅವುಗಳಲ್ಲಿ ನಂಬಿಕೆಯಿಲ್ಲದಿದ್ದ ವಸಂತಳಿಗೆ ಆ ಸಮಯದಲ್ಲಿ ಆ ಮಾತುಗಳು ಹಿತಕರವಾಗಿದ್ದುವು.

ಬಹಳ ಹೊತ್ತಿನವರೆಗೆ ವಸಂತಳನ್ನು ಸಮಾಧಾನಮಾಡಿ ಗೌರಮ್ಮ ಮಲಗುವುದಕ್ಕೆ ಹೋದಳು. ವಸಂತಳೂ ನಿದ್ದೆಮಾಡಲು ಪ್ರಯತ್ನಿಸಿದಳು. ತಲೆಯಲ್ಲಿ ನಿರಂತರವಾಗಿ ಯೋಚನಾತರಂಗಗಳು ಮೇಲಿಂದಮೇಲೆ ಬರುತ್ತಿರು ವಾಗ ಕಣ್ಣುಗಳು ಏನುಮಾಡಿಯಾವು? ಈ ದಿನದ ಯೋಚನೆಗಳಲ್ಲಿ ಹಿಂದಿನ ರಾತ್ರಿ ಅನುಭವಿಸಿದ ಭೀಕರತೆಯಿಲ್ಲ; ಮಾನಸಿಕ ವೇದನೆಯಿಲ್ಲ; ಆದರೆ ತಾನು ಕೈಕೊಂಡಿರುವ ಜೀವನ ಯಾತ್ರೆಯಲ್ಲಿ ಯಾವುದೋ ಒಂದು ಘೋರವಾದ ಗಾಢಾಂಧಕಾರಮಯವಾದ ಅರಣ್ಯವು ತನ್ನನ್ನು ಆವರಿಸಿದ್ದಹಾಗೆ, ನಡು ಸಮುದ್ರದಲ್ಲಿ ತಾನು ಏಕಾಂಗಿಯಾಗಿ ನಡೆಸುತ್ತಿದ್ದ ನಾವೆಯು ದಿಕ್ಕುತಪ್ಪಿ ಚಂಡಮಾರುತನ ಕೋಪಕ್ಕೆ ತುತ್ತಾಗಿರುವಹಾಗೆ ತೋರುತ್ತಿತ್ತು. ಅಲ್ಲಿಂದ ಪಾರಾಗುವುದಕ್ಕೆ ಉಪಾಯ ಕಾಣಲೊಲ್ಲದು. ಸುತ್ತಿಸುತ್ತಿ ಯೋಚಿಸಿದಷ್ಟೂ

ಕೊನೆಗೆ ಕಾಣುತ್ತಿದ್ದುದು ಒಂದೇ ನಿಲುಗಡೆ—ಅದು ತನಗೆ ನಂಬಿಕೆಯಿಲ್ಲದ ದೈವಲೀಲೆ.

ರಾತ್ರಿಯೆಲ್ಲಾ ಈರೀತಿ ಕಳೆದ ವಸಂತಳಿಗೆ ತೀರ ಬೆಳಕುಹರಿಯುವ ಸಮಯದಲ್ಲಿ ಬೀಸಿದ ತಂಗಾಳಿಯಿಂದ ಸ್ವಲ್ಪ ಜೊಂಪುಬಂತು. ಎಂಗಿನಂತೆ ಗೌರಮ್ಮನು ಅವಳನ್ನು ಎಬ್ಬಿಸಲು ಬಂದವಳು ವಸಂತಳು ಕಣ್ಣು ಮುಚ್ಚಿರುವು ದನ್ನು ಕಂಡು ಹಾಗೇ ಹಿಂದಕ್ಕೆ ಹೊರಟುಹೋದಳು.

— ೧೬ —

ಬಂಗಾರ ಗಣಿಪ್ರದೇಶದಲ್ಲಿನ ಕೂಲಿಗಾರರ ಕಾಲೊನಿಯಲ್ಲಿ ಅನಾಥ ಪೋಷಕ ಸಂಘವೊಂದಿದೆ. ಕೂಲಿಗಾರರಲ್ಲಿ ಯಾವುದಾದರೂ ಅಪಘಾತಕ್ಕೆ ಗುರಿಯಾಗಿ ಯಾವ ಸಂಸಾರವಾಗಲಿ, ಮಕ್ಕಳು, ಹೆಂಗಸರು, ಮುದುಕರಾಗಲಿ ತೊಂದರೆಗೆ ಸಿಕ್ಕಿದರೆ ಅಂಥವರಿಗೆ ಸಹಾಯ ಮಾಡಬೇಕೆಂಬ ಉದ್ದೇಶದಿಂದ ಆ ಸಂಘವನ್ನು ಸ್ಥಾಪಿಸಿದರು. ಅದು ಸ್ಥಾಪನೆಯಾದ ಒಂದೆರಡುವರ್ಷ ಬಹಳ ಉತ್ಸಾಹದಿಂದ ಕೆಲಸ ನಡೆಯಿತೆಂದು ಕಾಣುತ್ತದೆ. ಆ ಉತ್ಸಾಹ ಶ್ರದ್ಧೆಗಳು ಬರುಬರುತ್ತ ಕರಗಿಹೋಗಿ ಹೆಸರಿಗೆ ಮಾತ್ರ ಸಂಘವೊಂದಿದೆಯೆನ್ನುವ ಸ್ಥಿತಿಗೆ ಬರುವಂತಾಯಿತು. ಸಂಘವಲ್ಲಿ ಹಣವಿಲ್ಲ; ಚಂದಾಕೊಡುವ ದಾತೃ ಗಳು ತಾವು ಅದುವರೆಗೆ ಗಳಿಸಿದ್ದ ಪುಣ್ಯದಿಂದಲೇ ತೃಪ್ತರಾಗಿ ಇನ್ನು ಹೆಚ್ಚಿಗೆ ಪುಣ್ಯಕ್ಕಾಗಿ ತಮ್ಮ ಹಣವನ್ನು ಬಿಚ್ಚಲು ಮನಸ್ಸುಮಾಡದೆಹೋದರು. ಜನರಿಗೇ ಬೇಡವಾದ ಸಂಘವು ತಮಗಾದರೂ ಏಕೆಂದು ಸಂಘದ ಆಡಳಿತ ಮಂಡಲಿಯವರು ಒಬ್ಬೊಬ್ಬರಾಗಿ ನೆಪಗಳನ್ನು ಹೇಳಿಕೊಂಡು ಅದರ ಕೈಬಿಟ್ಟು ಸಂಘವನ್ನು ಅನಾಥರೇ ಪೋಷಿಸಬೇಕಾದ ಸ್ಥಿತಿಗೆ ತಂದರು. ಬಡವರಾದರೂ ಮೃದು ಹೃದಯರಾಗಿದ್ದ ಕರ್ಣ್ಣ, ಮುನಿಸಾಮಿ, ಪೆರುಮಾಳ್, ಸೀತಾಪತಿ ಮತ್ತು ರಂಗಯ್ಯನಾಯ್ಡು ಈ ಐದುಜನರು ಮಾತ್ರ ಸಂಘದ ಜೀವವನ್ನು ಕಾಪಾಡಿಕೊಂಡುಬಂದು ತಮ್ಮಿಂದ ಸಾಧ್ಯವಾದಷ್ಟು ಕೆಲಸ ನಡೆಸುತ್ತಿದ್ದರು. ಯಾರಿಗೂ ಬೇಡವಾಗಿದ್ದ ಈ ಧರ್ಮಸಂಸ್ಥೆಗೆ ಇದ್ದಕ್ಕಿದ್ದಂತೆ ಒಂದು ಸಾವಿರ ರೂಪಾಯಿಗಳ ಚೆಕ್ಕೊಂದು ಬಂದ ಸುದ್ದಿಯು ಕಾಲೊನಿಯಲ್ಲೆಲ್ಲ ಆಶ್ಚರ್ಯ ವನ್ನುಂಟುಮಾಡಿತು.

ಬಸಪ್ಪನನ್ನು ಕೊಲೆಮಾಡಿದನೆಂಬ ಕಾರಣದಮೇಲೆ ಅನೇಕ ಬಡ ಸಂಸಾರಗಳ ಅವ್ಯಕ್ತ ಕೃತಜ್ಞತೆಗೆ ಪಾತ್ರನಾಗಿದ್ದ ನಟೇಶನ ಹೆಸರು ಕಾಲೊನಿಯಲ್ಲಿ ಅಂದು ಪ್ರತಿಮನೆಯ ಮಾತಾಯಿತು. ಅಂದೇ ಸೋಮವಾರ. ಆ ದಿನ ಬೆಳಗ್ಗೆ ಎಂಟುಗಂಟೆಗೆ ಅವನನ್ನು ಗಲ್ಲಿಗೆ ಹಾಕಿರಬೇಕು. ಬಸಪ್ಪನನ್ನು ಕೊಲ್ಲುವುದಕ್ಕಾಗಿ ಅವನಿಗೆ ಯಾರೋ ಒಂದುಸಾವಿರ ರೂಪಾಯಿಗಳನ್ನು ಕೊಟ್ಟಿರಬೇಕು. ಅದನ್ನು ತನ್ನ ಮರಣದಿಂದ ಅನಾಥೆಯಾಗುವ ತಂಗಿಗೇಕೆ ಕೊಡಲಿಲ್ಲ? ಪಾಪ, ದಿಕ್ಕಿಲ್ಲದ ಅವಳಗತಿ! ಬೆಳಗಿನಿಂದ ಅನೇಕ ಮಂದಿ ಗಂಡಸರು ಹೆಂಗಸರು ನಟೇಶನ ಮನೆಗೆ ಹೋಗಿ ಇಂದಿರೆಯನ್ನು ಸಮಾಧಾನ ಪಡಿಸುತ್ತಿದ್ದರು. ಪಕ್ಕದ ಮನೆಯ ಮೀನಾಕ್ಷಿಯಂತೂ ತನ್ನ ಎಳೆಯ ಮಗುವಿನ ಯೋಚನೆಯನ್ನುಸಹ ಬಿಟ್ಟು ಇಂದಿರೆಯ ಜೊತೆಯಲ್ಲಿದ್ದುಬಿಟ್ಟಳು.

ಬೆಂಗಳೂರು ಜೈಲಿನಲ್ಲಿ ಅಣ್ಣನನ್ನು ನೋಡಲು ಹೋಗಿದ್ದಾಗ ಅವನ ಮದುವೆಯ ವಿಷಯ ಇಂದಿರೆಗೆ ತಿಳಿದಿತ್ತು. ವ್ಯಸನದಲ್ಲಿ ಯಾವಯಾವ ಮಾತುಗಳನ್ನೋ ಮೀನಾಕ್ಷಿಯೊಡನೆ ಹೇಳುತ್ತಿದ್ದಾಗ ಈ ಸುದ್ದಿಯನ್ನೂ ಅವಳೊಡನೆ ಹೇಳಿದಳು. ನಂಬಲಸಾಧ್ಯವಾದ ಈ ಮಾತು ಮೀನಾಕ್ಷಿಯ ಮನಸ್ಸನ್ನು ಹೊಕ್ಕಿರಲಿಲ್ಲ. ಈಗ ಅನಾಥ ಪೋಷಕಸಂಘಕ್ಕೆ ಒಂದು ಸಾವಿರ ರೂಪಾಯಿ ಬಂತೆಂದು ತಿಳಿದಾಗ ನಟೇಶನ ಮದುವೆಯ ಮಾತಿಗೆ ಮಹತ್ವ ಬಂತು. ಇಂದಿರೆಯಿಂದ ತಾನು ಕೇಳಿದ ಸುದ್ದಿಯನ್ನು ಮೀನಾಕ್ಷಿ ತನ್ನ ಸಖಿಯರಲ್ಲಿ ಹೇಳಿದಳು. ಆ ಮಾತು ಈ ಮಾತು ಎರಡೂ ಬೆರೆತು ಕಾಲೊನಿಯ ಜನ ಯಾವುದೋ ಒಂದು ತೆರನಾದ ಮೂಕಸುಖವನ್ನನುಭವಿಸುತ್ತಿದ್ದರು.

ಸಂಘದ ಸಂಚಾಲಕರ ಸಂಭ್ರಮ ಅಂದು ಹೆಚ್ಚಿತ್ತು. ಅನಿರೀಕ್ಷಿತವಾಗಿ ಬಂದ ಈ ದಾನ ಅವರ ಮೆದುಳನ್ನು ಚುರುಕುಗೊಳಿಸಿತ್ತು. ಅದೇದಿನ ದಾತೃವಿನ ಜೀವ ಇಹಲೋಕದ ವ್ಯಾಪಾರವನ್ನು ತೊರೆದಿರುತ್ತದೆಂಬ ನಂಬಿಕೆ, ಗಣಿಯ ಕೂಲಿಯವನಾಗಿ ಬಡತನದ ಅಡಿಯ ಹಂತದಲ್ಲಿ ಜೀವಿಸುತ್ತಿದ್ದ ನಟೇಶನು ಇಂಥ ತ್ಯಾಗಮಾಡಿದನಲ್ಲಾ ಎಂಬ ಅಸಾಧಾರಣ ವರ್ತನೆ ಮೃತನ ಸದ್ಗುಣಗಳನ್ನು ಮುಗಿಲ ಮಟ್ಟಕ್ಕೊಯ್ದಿತ್ತು. ಅದರಿಂದ ಪ್ರೇರಿತರಾಗಿ ಸಂಘದ ಸಂಚಾಲಕರು ನಟೇಶನ ಆತ್ಮಕ್ಕೆ ಶಾಂತಿಯನ್ನು ಕೋರಲು ಆದಿನವೇ

ಸಂಜೆ ಒಂದು ಸಭೆಯನ್ನೇರ್ಪಡಿಸಿದರು. ಕೂಲಿಗಾರ ಸಂಘದ ಅಧ್ಯಕ್ಷರಾದ ರಾಜರತ್ನಂ ಪಿಳ್ಳೆಯವರು ಅಂದಿನ ಸಭೆಗೆ ಅಧ್ಯಕ್ಷರಾಗಬೇಕೆಂದೂ ತಮ್ಮ ಪೈಕಿ ಕಣ್ಣ, ಮುನಿಸಾಮಿ, ಸೀತಾಪತಿ ಈ ಮೂವರೂ ದಾತೃವಿನ ಗುಣ ಗಾನ ಮಾಡಬೇಕೆಂದೂ ಪೆರುಮಾಳು ಸಂಘದ ಘನೋದ್ದೇಶಗಳನ್ನು ಕುರಿತು ಮಾತಾಡಿ ಸಭೆಯಲ್ಲಿ ಸೇರಿದ್ದ ಪ್ರತಿಯೊಬ್ಬರೂ ನಟೇಶನ ಉದಾಹರಣೆ ಯನ್ನನುಸರಿಸಿ ಉದಾರವಾಗಿ ದಾನಮಾಡಬೇಕೆಂದು ಮಾತನಾಡಬೇಕೆಂದೂ ರಂಗಯ್ಯನಾಯ್ಡುವು ವಂದನಾರ್ಪಣೆ ಮಾಡಬೇಕೆಂದೂ ನಟೇಶನ ತಂಗಿ ಇಂದಿರೆಯು ಆ ಸಭೆಯಲ್ಲಿರುವುದು ಉಚಿತವಾದುದರಿಂದ ವೇದಿಕೆಯಮೇಲೆ ಅಧ್ಯಕ್ಷರ ಪಕ್ಕದಲ್ಲಿ ಅವಳನ್ನು ಕುಳ್ಳಿರಿಸಬೇಕೆಂದೂ ಇತ್ಯರ್ಥವಾಯಿತು.

ಸಂತಾಪ ಸೂಚಕಸಭೆಯು ಸೇರುವ ವಿಷಯ ಊರಿನಲ್ಲೆಲ್ಲ ಕ್ಷಣ ಮಾತ್ರದಲ್ಲಿ ಹಬ್ಬಿತು. ಅದಕ್ಕಾಗಿ ಹಸ್ತಪತ್ರಿಕೆಗಳನ್ನು ಹಂಚಬೇಕಾಗಲಿಲ್ಲ, ಕೇಳುವವರ ಕಿವಿಯೊಡೆಯುವಂತೆ ಅರಚುವ ಧ್ವನಿವಾಹಕ ಯಂತ್ರಗಳು ಬೀದಿ ಬೀದಿಗಳಲ್ಲಿ ಸಾರಲಿಲ್ಲ, ಸಂಜೆಯೊಳಗಾಗಿ ಸುದ್ದಿ ಊರಿನ ಜನರಿಗೆಲ್ಲ ತಿಳಿ ದಿತ್ತು.

ಅಂದಿನ ಭಾಷಣಕಾರರಾಗಿದ್ದ ಮೂರು ಜನಕ್ಕೂ ನಟೇಶನ ವಿಷಯ ಏನೇನೂ ತಿಳಿಯದು; ಮೇಲಾಗಿ ಕಣ್ಣನಿಗೂ ಮುನಿಸಾಮಿಗೂ ಸಭೆಗಳಲ್ಲಿ ಮಾತನಾಡಿ ರೂಢಿಯಿಲ್ಲ. ಸಭೆ ಪುರಮಂದಿರದ ಹೊರಗಿನ ಮೈದಾನದಲ್ಲಿ ಕಲೆಯಬೇಕೆಂದು ಏರ್ಪಾಟಾಗಿತ್ತು. ಬಹುಜನರು ಸೇರುವ ನಿರೀಕ್ಷೆಯಿದ್ದುದ ರಿಂದ ಭಾಷಣಗಳು ಎಲ್ಲರಿಗೂ ಕೇಳಿಸಲು ಅನುಕೂಲಿಸುವಂತೆ ಧ್ವನಿವಾಹಕ ಯಂತ್ರವನ್ನಿರಿಸಲು ಯೋಚಿಸಿದ್ದರು; ಎಂದರೆ, ಕಣ್ಣ ಮತ್ತು ಮುನಿಸಾಮಿ ಇಬ್ಬರೂ ಮೈಕ್ರೊಫೋನಿನಲ್ಲಿ ಮಾತಾಡಬೇಕು. ಅದನ್ನು ನೆನೆಸಿಕೊಂಡೇ ಅವರ ಎದೆ ಹೊಡೆದುಕೊಳ್ಳಲಾರಂಭಿಸಿತು. ಆದರೆ ಇಂಥ ಸದವಕಾಶವನ್ನು ಅವರು ಬಿಟ್ಟರೆ ಅನಾಥ ಪೋಷಕಸಂಘಕ್ಕೆ ದ್ರೋಹಮಾಡಿದಂತಾಗುತ್ತದೆ; ಒಂದುಸಾವಿರ ರೂಪಾಯಿಗಳನ್ನು ಉದಾರವಾಗಿ ದಾನಮಾಡಿದ ನಟೇಶನ ಆತ್ಮವು ಶಾಂತಿಯಿಲ್ಲದೆ, ತಾನು ಗಮಿಸುತ್ತಿದ್ದ ಸ್ವರ್ಗಲೋಕವನ್ನು ಮುಟ್ಟ ಲಾರದೆ ಅಂತರಾಟದಲ್ಲೇ ಅಲೆಯಬೇಕಾಗುತ್ತದೆ. ಅದರಿಂದ ಇಬ್ಬರೂ ಸೇರಿ ಒಬ್ಬ ಕಸಬುದಾರರನ್ನು—ಎಂದರೆ, ಸಭೆಗಳ ಅಧ್ಯಕ್ಷರಿಗೆ, ರಾಜಕೀಯ

ಪುಢಾರಿಗಳಿಗೆ, ಅಸೆಂಬ್ಲಿ ಮೆಂಬರುಗಳಿಗೆ, ಮುನಿಸಿಪಾಲಿಟಿ ಸದಸ್ಯರಿಗೆ, ಪಂಚಾಯಿತಿ ಛೇರ್ಮನ್ನುಗಳಿಗೆ ಯಾವಕಾಲದಲ್ಲಾಗಲಿ, ಯಾವ ವಿಷಯ ವನ್ನು ಕುರಿತಾಗಲಿ ಎಷ್ಟು ಮೊಟಕಾಗಿ ಅಥವಾ ದೀರ್ಘವಾಗಿ ಆಗಲಿ ಭಾಷಣಗಳನ್ನು ಅವರವರು ಕೇಳಿದಕೂಡಲೇ ಒಂದೇ ಪಡಿಯಚ್ಚಿನಲ್ಲಿಳಿಸಿ ಕೊಡಬಲ್ಲ ಭಾಷಣ ಲೇಖನ ವಿಚಕ್ಷಣರನ್ನು—ಕಂಡು ಅವರಿಗೆ ಒಪ್ಪಿಸ ಬೇಕಾದ ಮಾಮೂಲನ್ನು ಒಪ್ಪಿಸಿ ಬೇರೆಬೇರೆಯಾಗಿ ಎರಡು ಭಾಷಣಗಳನ್ನು ಬರೆಸಿ ಕಂಠಪಾಠ ಮಾಡತೊಡಗಿದರು.

ಸಂಜೆ ಆರುಗಂಟೆಗೆ ಸಭೆ ಕಲೆಯಬೇಕಾಗಿತ್ತು. ಐದುವರೆಗಂಟೆ ಯಿಂದಲೇ ಧ್ವನಿವಾಹಕ ಯಂತ್ರಗಳು ಕೆಲಸಮಾಡಲಾರಂಭಿಸಿದುವು. ಮೊದಲು 'ಹಲೋ ಹಲೋ, ಟೆಸ್ಟಿಂಗ್ ಕಾಲಿಂಗ್....ಕಂಪೆನಿ ಕಾಲಿಂಗ್' ಇತ್ಯಾದಿ ಪೀಠಿಕೆಗಳೆಲ್ಲಾ ಮುಗಿದಮೇಲೆ ಆವಾರ, ಈವಾರ, ಪರದೇಶಿ, ಸ್ವದೇಶಿ ಸಿನೀಮಾ ರಿಕಾರ್ಡುಗಳು ಅತ್ಯುಚ್ಚ ಸ್ವರದಲ್ಲಿ ಹಾಡುತ್ತ ಬೇಡಬೇಡವೆಂದರೂ ಜನರನ್ನು ಬಿಡದೆ ಸಭೆಗೆ ಆಕರ್ಷಿಸತೊಡಗಿದುವು. ಆರುಗಂಟೆ ಸಮೀಪಿಸುತ್ತ ಬಂದ ಹಾಗೆಲ್ಲ ಸಂಘದ ಸಂಚಾಲಕರ ಸಂಭ್ರಮ ಹೆಚ್ಚಾಯಿತು. ಬಹಳ ಪುಸ ಲಾಯಿಸಿ ಇಂದಿರೆಯನ್ನು ಸಭೆಗೆ ಕರೆತಂದಿದ್ದರು. ಜನರ ಈ ಸಂಭ್ರಮ ವನ್ನು, ಅತಿ ಸಾಮಾನ್ಯನಾಗಿ ಎಲೆಯಮರೆಯ ಕಾಯಂತೆ ಒಬ್ಬರ ಕಣ್ಣಿಗೆ ಬೀಳದೆ ಅದೇ ಜನರನಡುವೆ ಬಾಳಿದ ತನ್ನ ಅಣ್ಣನಿಗೆ—ಅಣ್ಣನ ಆತ್ಮಕ್ಕೆ— ಅಂದು ಅವರು ತೋರುತ್ತಿರುವ ಗೌರವವನ್ನು ನೋಡಿ ಅವಳಿಗೆ ಇದ್ದ ಅಪಾರ ವಾದ ದುಃಖದ ನಡುವೆಯೂ ಸ್ವಲ್ಪ ಸಂತೋಷ ಇಣಿಕಿಹಾಕುತ್ತಿತ್ತು; ಮೀನಾಕ್ಷಿಯನ್ನು ಜೊತೆಗೆ ಕರೆದುಕೊಂಡು ಸಭೆಗೆ ಬಂದಿದ್ದಳು.

ಅಧ್ಯಕ್ಷರಿಗೆ ಮಾಮೂಲಿನಂತೆ ಆದಿನ ಏನೇನೋ ಕೆಲಸಗಳು ಬಿದ್ದುದ ರಿಂದ ಆರುಗಂಟೆಗೆ ಬರಬೇಕಾಗಿದ್ದವರು ಅರ್ಧಗಂಟೆ ಬಿಟ್ಟುಬಂದರು. ಅಂಥ ಸಭೆಗಳಲ್ಲಿ ಗಂಟೆಗಟ್ಟಲೆ ಕಾಯುವುದು ಕಾಯಿಸುವುದು ರೂಢಿಯಾಗಿರುವ ನಮ್ಮ ಜನರಿಗೆ ಅದೇನೂ ಹೊತ್ತಾದಂತೆ ತೋರಲೇ ಇಲ್ಲ. ಆದರೂ ಅಧ್ಯಕ್ಷರು ಔಪಚಾರಿಕವಾದ ಕ್ಷಮೆಯನ್ನು ಬೇಡಿ ಸಂತಾಪಸೂಚಕ ಸಭೆಯ ಕಾರ್ಯ ಕಲಾಪಗಳು ನಡೆಯಬಹುದೆಂದು ಅಪ್ಪಣೆ ಮಾಡಿದರು. ಮೊದಲ ಭಾಷಣ ಕಾರ ಮುನಿಸಾಮಿ. ಕಾರ್ಯಕ್ರಮದ ಪಟ್ಟಿಯನ್ನು ತಯಾರಿಸಿ ಅಧ್ಯಕ್ಷರ

ಮುಂದಿಡುವುದರಲ್ಲಿ ಕರ್ಣ್ಣ ಸ್ವಲ್ಪ ಬುದ್ಧಿವಂತಿಕೆ ಉಪಯೋಗಿಸಿ ತನ್ನ ಹೆಸರನ್ನು ಎರಡನೆಯದಾಗಿ ಸೇರಿಸಿದ್ದ. ಮೈಕ್ರೊಫೋನಿನ ಮುಂದೆ ಮುನಿಸಾಮಿ ಮಾತನಾಡುತ್ತಿರುವಾಗ ತಾನು ಅದನ್ನು ನೋಡುತ್ತ ನೋಡುತ್ತ ಧೈರ್ಯ ತಂದುಕೊಳ್ಳಬೇಕಾಗಿತ್ತು. ಮುನಿಸಾಮಿಗಾದರೂ ತಾನು ಎರಡನೆಯವನೋ ಕಡೆಯವನೋ ಆಗಿ ಮಾತಾಡಬೇಕೆಂದಿತ್ತು; ಆದರೆ ಈಗ ಅಧ್ಯಕ್ಷರು ತನ್ನ ಹೆಸರನ್ನು ಕರೆದಮೇಲೆ ವಿಧಿಯಿಲ್ಲದೆ ಮಾತಾಡಲು ಎದ್ದು ನಿಂತ.

ಆರಡಿಯಮೇಲಿದ್ದ ಆಳು ಅಖಾಡಾದಲ್ಲಿ ಪೈಲ್ವಾನನುಬಂದು ನಿಲ್ಲುವಂತೆ ನಿಂತ. ತಾನು ಕುಳಿತಿದ್ದ ಸ್ಥಳದಿಂಥ ವೇದಿಕೆ ನಾಲ್ಕುಗಜ ದೂರವಿತ್ತು. ಎರಡು ಗಜ ಬರುವಷ್ಟರಲ್ಲಿ ಬೆಳಗಿನಿಂದ ಕಂಠಪಾಠಮಾಡಿದ್ದ ಭಾಷಣವು ಮರೆಂಪು ತೊಡಗಿತು; ಮೂರನೆಯ ಗಜವನ್ನು ದಾಟುವಾಗ್ಗೆ ಕಾಲುಗಳು ಏಕೋ ಅಸ್ಥಿರವಾಗುತ್ತಿರುವಂತೆ ತೋರಿತು, ನಾಲ್ಕು ಗಜಗಳನ್ನೂ ಸುಸೂತ್ರವಾಗಿ ನಡೆದು ಮೈಕ್ರೊಫೋನ್‌ಮುಂದೆ ನಿಂತು ಅದುವರೆಗೆ ತನ್ನ ಜೀವಿತದಲ್ಲಿ ಆರ್ಜಿಸಿದ ಧೈರ್ಯವನ್ನೆಲ್ಲ ಕೂಡಿಸಿ ಎದುರಿಗಿದ್ದ ಸಭಿಕರನ್ನು ಒಮ್ಮೆ ನೋಡಿದ. ಮಹಾಸಾಗರದ ಅಂಚಿನಲ್ಲಿ ತಾನು ನಿಂತಿರುವಂತೆ ತೋರಿತು. ಕಣ್ಣು ಮಂಜಾಗಿತ್ತು; ಗಂಟಲು ಒಣಗಿತ್ತು; ನಾಲಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತ ಭಾಷಣವನ್ನು ನೆನಪುಮಾಡಿಕೊಳ್ಳುತ್ತ ಒಂದು ನಿಮಿಷ ಕಳೆದು ಇನ್ನೇನು ಮಾತನಾಡಬೇಕು; ಅಷ್ಟರಲ್ಲಿ ಧ್ವನಿವಾಹಕ ಯಂತ್ರವನ್ನು ನೋಡಿಕೊಳ್ಳುವ ಒಬ್ಬಾತನು ಬಂದು 'ಸ್ವಲ್ಪ ತಡೆಯಿರಿ' ಎಂದ. ಮಾತಾಡುವುದಕ್ಕೆ ಮೊದಲೇ ಅಪಶಕುನ ನುಡಿದುಬಿಟ್ಟ. ಮಾತಾಡುವುದಕ್ಕೆ ತಡೆಮಾಡಿ ಅವನು ಮೈಕ್ರೊಫೋನನ್ನು ಸ್ವಲ್ಪ ಮೇಲಕ್ಕೆಳೆದು ಅತ್ತಇತ್ತ ತಿರುಗಿಸಿನೋಡಿ 'ಕ್ಷಮಿಸಿ' ಎಂದು ಅನಾವಶ್ಯಕವಾದ ಕ್ಷಮಾಪಣೆ ಕೇಳುತ್ತ ಹಿಂದಕ್ಕೆ ಸರಿದ. ಮುನಿಸಾಮಿಯು ಮತ್ತೆ ಧೈರ್ಯಮಾಡಿ 'ಅಗ್ರಸೇನಾಧಿಪತಿಗಳೆ' ಎಂದ. ಅಧ್ಯಕ್ಷರು ಮೊದಲುಗೊಂಡು ಎಲ್ಲರೂ ಗೊಳ್ಳೆಂದು ನಕ್ಕರು. ತಾನು ಮಾತಾಡಿದುದರಲ್ಲಿ ಏನೋ ತಪ್ಪಿರಬೇಕೆಂದು ಪುನಃ ಮುನಿಸಾಮಿಯು 'ಅಗ್ರ ಸೇನಾಧಿಪತಿಗಳೆ' ಎಂದ. ಜನರು ಪುನಃ ನಕ್ಕರು. ಅವನ ತಪ್ಪನ್ನು ಅರ್ಥಮಾಡಿಕೊಂಡ ಅಧ್ಯಕ್ಷರು 'ಚಿಂತೆಯಿಲ್ಲ ಮುಂದೆ ಮಾತನಾಡಿ' ಎಂದರು. ಮುನಿ

ಸಾಮಿಗೆ ಮೈಯೆಲ್ಲ ಬೆವರಿಟ್ಟಿತ್ತು ; ಭಾಷಣ ಮರೆತುಹೋಗಿತ್ತು. ಆದರೂ ಮಾತನಾಡಬೇಕೆಂಬ ಹಟದಿಂದ 'ಈ ದಿನ....ಈ ದಿನ....ಈ ದಿನ....' ಎಂದು ಉಗುಳು ನುಂಗುತ್ತ ಹೇಳಿದ. ಈ ದಿನ ಏನಾಯಿತೆಂದು ಜನರು ನಿರೀಕ್ಷಿಸುತ್ತಿದ್ದರು.

ಮುನಿಸಾಮಿಯು ಪಡುತ್ತಿದ್ದ ಕಷ್ಟವು ದೇವರನ್ನು ಮುಟ್ಟಿತೆಂದು ಕಾಣುತ್ತದೆ. ಅವನು ಮುಂದೆ ಏನು ಹೇಳುತ್ತಿದ್ದನೋ ಅಥವಾ ಏನೂ ಹೇಳುತ್ತಲೇ ಇರಲಿಲ್ಲವೋ, ಅಷ್ಟರಲ್ಲಿ ವರ್ತಮಾನ ಪತ್ರಿಕೆಗಳನ್ನು ಮಾರುವ ನಾಲ್ಕು ಹುಡುಗರು ಆ ದಿನದ ಪತ್ರಿಕೆಗಳನ್ನು ತಂದು ಸಭೆಯನ್ನು ಮುತ್ತಿಗೆ ಹಾಕಿ ಉಚ್ಚಸ್ವರದಲ್ಲಿ 'ನಟೇಶನಿಗೆ ಬಿಡುಗಡೆ, ನಟೇಶನಿಗೆ ಬಿಡುಗಡೆ' ಎಂದು ಕೂಗತೊಡಗಿದರು. ಭಾಷಣ ಅಲ್ಲಿಗೇ ನಿಂತಿತು. ಅಧ್ಯಕ್ಷರೂ ಸಭಿಕರೂ ಆ ಹುಡುಗರಕಡೆ ನೋಡತೊಡಗಿದರು. ನನಗೊಂದು ತನಗೊಂದು ಎಂದು ಪತ್ರಿಕೆಗಳನ್ನು ಜನರು ಕಿತ್ತುಕೊಳ್ಳತೊಡಗಿದರು. ರಂಗಯ್ಯನಾಯ್ಡು ಅವುಗಳಲ್ಲಿ ಒಂದನ್ನು ತಂದು ಅಧ್ಯಕ್ಷರ ಕೈಗೆಕೊಟ್ಟ. ಅಧ್ಯಕ್ಷರು ಅದನ್ನೋದಿಕೊಂಡು ಸಭಿಕರಿಗೆ ಹೊಸ ವಿಷಯವನ್ನು ತಿಳಿಸುವ ಧ್ವನಿಯಲ್ಲಿ ಅವರನ್ನು ಶಾಂತವಾಗಿರಲು ಹೇಳಿ ಎರಡು ನಿಮಿಷ ಮಾತನಾಡಿದರು. ಸಂತಾಪ ಸೂಚಕ ಸಭೆಯು ಸಂತೋಷಸೂಚಕ ಸಭೆಯಾಯಿತು. ಇಂದಿರೆಯಂತೂ ಆ ಸಂತೋಷವನ್ನು ತಡೆಯಲಾರದೆ ಕಣ್ಣೀರು ಸುರಿಸತೊಡಗಿದಳು. ನಟೇಶನು ನಿರಪರಾಧಿಯೆಂದೂ ಜೈಲಿನಿಂದ ಆದಿನ ಬೆಳಗ್ಗೆ ಅವನ ಬಿಡುಗಡೆಯಾಯಿತೆಂದೂ ಪತ್ರಿಕೆಯಲ್ಲಿ ಬಂದಿತ್ತು.

ಅನಾಥ ಪೋಷಕ ಸಂಘದ ಪರವಾಗಿ ಸೀತಾಪತಿಯು ಮಾತನಾಡಿ ಪತ್ರಿಕೆಯಲ್ಲಿ ಬಂದ ಸುದ್ದಿಗಾಗಿ ತಮ್ಮ ಸಂತೋಷವನ್ನು ಸೂಚಿಸಿ ಧರ್ಮಾತ್ಮರನ್ನು ದೇವರು ಕಾಪಾಡುತ್ತಾನೆನ್ನುವುದಕ್ಕೆ ಇದೇ ನಿದರ್ಶನವೆಂದು ತತ್ತ್ವಬೋಧೆಮಾಡಿ ಇಂದಿನಸಭೆ ಮುಕ್ತಾಯವಾಯಿತೆಂದೂ ನಟೇಶನು ಕಾಲೊಸಿಗೆ ಬಂದನಂತರ ಆತನಿಗಾಗಿ ಅಭಿನಂದನ ಸಭೆಯನ್ನು ಕರೆಯುವುದು ಆವಶ್ಯಕವೆಂದೂ ಆ ದಿನ ಎಲ್ಲರೂ ಇದೇರೀತಿ ಬರಬೇಕೆಂದೂ ಕೋರಿದ. ಔಪಚಾರಿಕವಾದ ವಂವನೆಗಳಾದಮೇಲೆ ಸಭೆ ಮುಗಿಯಿತು.

ತನ್ನ ಭಾಷಣವನ್ನು ಜನರು ಕೇಳಲಿಲ್ಲವಲ್ಲಾ, ಅಷ್ಟರಲ್ಲಿ ಆ ಹಾಳು ಹುಡುಗರು ಪತ್ರಿಕೆಯನ್ನು ತಂದುಬಿಟ್ಟರು ಎಂದು ಮುನಿಸಾಮಿಗೆ ಅಸಮಾಧಾನವಾದರೂ ತಾನು ಭಾಷಣ ಮಾಡುತ್ತಿದ್ದಾಗ ಇಂಥ ಒಳ್ಳೆಯಸುದ್ದಿ ಬಂದಿತೆಂದು ಸಮಾಧಾನ ಮಾಡಿಕೊಂಡ. ಮುಂದೆ, ನಟೇಶನನ್ನು ಸ್ವಾಗತಿಸುವ ಏರ್ಪಾಟು, ಅಭಿನಂದನ ಸಭೆಗಳನ್ನೇರ್ಪಡಿಸುವ ಯೋಚನೆ, ಇವುಗಳ ಮೂಲಕ ಸಂಘದ ಸದಸ್ಯರನ್ನು ಪೋಷಕರನ್ನು ಹೆಚ್ಚಿಸಿಕೊಳ್ಳುವುದು ಈ ಮಾತುಗಳನ್ನಾಡುತ್ತ ಸಂಘದ ಸಂಚಾಲಕರು ಬಹಳಹೊತ್ತು ಕಳೆದರು.

ನಟೇಶನಿಗೆ ಬಿಡುಗಡೆಯಾಯಿತೆಂಬ ಸುದ್ದಿ ಜನರ ಕುತೂಹಲವನ್ನು ಮತ್ತೆ ಕೆರಳಿಸಿತು. ಬೆಳಗ್ಗೆ ಬಿಡುಗಡೆಯಾದವನು ಇದುವರೆಗೇ ತಮ್ಮೂರಿಗೆ ಬರಬೇಕಾಗಿತ್ತು. ಹಾಗೆಬರದೆ ನಿಂತಿರುವುದು ಬೇರೊಂದು ಊಹೆಗೆ ಎಡೆ ಕೊಟ್ಟಿತು. ನಟೇಶನು ತನ್ನ ಹೆಂಡತಿಯ ಮನೆಯಲ್ಲಿ ನಿಂತಿರಬಹುದು, ಬಹುಶಃ ಅವಳನ್ನೂ ಜೊತೆಯಲ್ಲೇ ಕರೆದುಕೊಂಡು ಬರಬಹುದು ಎಂದು ಕೆಲವರು ಊಹಿಸಿದರು. ಉತ್ಸುಕರಾದ ಕೆಲವು ತರುಣರೂ ಸಂಘದ ಸಂಚಾಲಕರೂ ರೈಲ್ವೆ ಸ್ಟೇಷನ್ನಿಗೆ ಹೋಗಿ ಬೆಂಗಳೂರಿನಿಂದ ಬಂದ ರೈಲನ್ನು ನೋಡಿದರು ; ನಟೇಶ ಕಾಣಿಸಲಿಲ್ಲ.

ಇಂದಿರೆಗೆ ಒಂದು ಗಳಿಗೆಯು ಒಂದು ಯುಗವಾಗಿ ತೋರುತ್ತಿತ್ತು. ಸಭೆಯಿಂದ ಮನೆಗೆ ಬಂದವಳು ಹಜಾರವನ್ನು ಬಿಟ್ಟು ಕದಲಲಿಲ್ಲ. ದೂರದಲ್ಲಿದ್ದ ದೀಪದ ಬೆಳಕಿನಲ್ಲಿ ಯಾರಾದರೂ ಬರುವುದನ್ನು ಕಂಡರೆ ತನ್ನ ಅಣ್ಣನೇ ಇರಬೇಕೆಂದು ಆಸೆಯಿಂದ ಅತ್ತಲೇ ನೋಡುತ್ತಿರುವಳು. ಊಟಕ್ಕೆಂದು ಮೀನಾಕ್ಷಿಯು ಬಂದು ಕರೆದರುಸಹ ಹೋಗಲಿಲ್ಲ ; ಅವಳಿಗೆ ಯಾವುದೂ ಬೇಡವಾಗಿತ್ತು. ಕೆಲಸಗಳನ್ನೆಲ್ಲ ಮುಗಿಸಿಕೊಂಡುಬಂದು ಮೀನಾಕ್ಷಿಯೂ ಇಂದಿರೆಯ ಜೊತೆಯಲ್ಲಿ ಕುಳಿತಳು. ಬೆಂಗಳೂರಿನ ರೈಲುಬಂದು ಹೊರಟು ಹೋಯಿತು. ಬೀದಿಯಲ್ಲಿ ಜನಸಂಚಾರ ನಿಂತಿತು. ಆದರೂ ಇಂದಿರೆಗೆ ಅಲ್ಲಿಂದ ಏಳಲು ಮನಸಿಲ್ಲ. ಪ್ರತಿದಿನವೂ ಮೀನಾಕ್ಷಿಯ ಮನೆಯಲ್ಲಿ ಮಲಗುತ್ತಿದ್ದವಳು ಈ ದಿನ ತಮ್ಮ ಮನೆಯಲ್ಲೇ ಮಲಗುತ್ತೇನೆಂದಳು. ಅಣ್ಣನು ಯಾವಾಗ ಬರುತ್ತಾನೋ ಏನೋ, ಅವನು ಬಂದಾಗ ತಾನು ಮನೆಯಲ್ಲಿಲ್ಲ

ದಿದ್ದರೆ! ಹುಡುಗಿಯ ಈ ಚಪಲವನ್ನು ನೋಡಿ ಮೀನಾಕ್ಷಿಯೂ ಇಂದಿರೆಯ ಜೊತೆಯಲ್ಲೇ ಮಲಗಿದಳು.

ಬೆಳಗಿನಿಂದ ಅಳುತ್ತಿದ್ದು ಪಟ್ಟ ಆಯಾಸವನ್ನು, ಸಂತೋಷದ ಸುದ್ದಿಯನ್ನು ಕೇಳಿ ಮರೆತ ಇಂದಿರೆಗೆ ಎರಡುಗಳಿಗೆಯೊಳಗಾಗಿ ನಿದ್ದೆಬಂತು. 'ಅಣ್ಣ ಬಂದನೆ?' ಎಂದು ಕನವರಿಸುತ್ತ ಅವಳು ಕಣ್ಣು ತೆರೆದಾಗ ಬೆಳಕು ಹರಿದಿತ್ತು.

— ೧೭ —

ವಸಂತಾದೇವಿಯ ಅಪೇಕ್ಷೆಯಮೇರೆಗೆ ಟ್ರಸ್ಟಿಗಳ ಸಭೆಯು ಅವಳ ಮನೆಯಲ್ಲಿ ಮಧ್ಯಾಹ್ನ ಮೂರುಗಂಟೆಗೆ ಕಲೆಯುವುದಾಗಿತ್ತು. ಅವಳು ಹೇಳಿ ಕಳುಹಿಸದೆಯೇ ಅವರು ಒಬ್ಬೊಬ್ಬರೂ ಬಂದು ವಸಂತಳನ್ನು ಕಾಣಬೇಕೆಂಬ ಆತುರದಲ್ಲಿದ್ದರು. ಆದಿನ ಬೆಳಗ್ಗೆ ಪ್ರಕಟವಾದ ವಿಶ್ವಪ್ರೇಮಿ ಪತ್ರಿಕೆಯಲ್ಲಿ ವಸಂತಳು ನಟೇಶನೊಡನೆ ಮದುವೆಯಾದುದು ಮೊದಲುಗೊಂಡು ಹಿಂದಿನ ದಿನದ ಸಮಾರಂಭದಲ್ಲಿ ನಡೆದ ಹಗರಣದವರೆಗೆ ಎಲ್ಲ ಸುದ್ದಿಯನ್ನೂ ಅವರಿಬ್ಬರ ಭಾವಚಿತ್ರಗಳೊಡನೆ ಪ್ರಕಟಿಸಿತ್ತು. ಅವರಿಬ್ಬರೂ ಮದುವೆಯಾದ ದಾಖಲೆಗೆ ರಿಜಿಸ್ಟ್ರಾರರು ಕೊಟ್ಟ ಸರ್ಟಿಫಿಕೇಟನ್ನು ಸಹ ಯಥಾವತ್ತಾಗಿ ಅಚ್ಚುಮಾಡಿದ್ದರು. ಈ ಸುದ್ದಿ ಸ್ವಲ್ಪಮಟ್ಟಿಗೆ ನಂಜುಂಡಯ್ಯನವರಿಗೆ ಗೊತ್ತಿತ್ತು. ಕಾರಣಾಂತರದಿಂದ ಸಮಾರಂಭಕ್ಕೆ ಬರಲಾರದೆಹೋದ ತಿರುಮಲಯ್ಯ ಸರ್ವೋತ್ತಮ ಶೆಟ್ಟರಿಗಂತೂ ಇದು ನಂಬಲಾರದ ಸುದ್ದಿಯಾಗಿತ್ತು. ಇದರ ವಾಸ್ತವಿಕತೆಯನ್ನು ವಸಂತಾದೇವಿಯ ಬಾಯಿಂದಲೇ ಕೇಳಿ ತಿಳಿಯಬೇಕೆಂಬ ಕುತೂಹಲದಿಂದ ಅವರು ತಳಮಳಿಸುತ್ತಿರುವಾಗ ಆಕೆಯಿಂದ ಕರೆ ಬಂದಿತು. ಎಲ್ಲರೂ ಕಲೆತಾಗ ಮಾತು ಮಿತವಾಗುವುದರಿಂದ ಮುಂಚಿತವಾಗಿ ಆಕೆಯೊಡನೆ ಮಾತಾಡಬೇಕೆಂದು ಯೋಚಿಸಿ ಶೆಟ್ಟರು ಅರ್ಧಗಂಟೆ ಮುಂಚಿತವಾಗಿಯೇ ಬಂದರು. ಇವರಂತೆಯೇ ಯೋಚಿಸಿದ ತಿರುಮಲಯ್ಯನವರೂ ಒಂದೆರಡು ನಿಮಿಷಗಳು ಕಳೆಯುವುದರೊಳಗಾಗಿ ಬಂದು ಕಲೆತರು. ಇಬ್ಬರ ಕೈಯಲ್ಲೂ ವಿಶ್ವಪ್ರೇಮಿಯ ಆ ದಿನದ ಸಂಚಿಕೆಯಿತ್ತು.

ಹಾಸಿಗೆಯಿಂದ ಎದ್ದು ಕಾಫಿ ಕುಡಿಯುತ್ತ ಕುಳಿತಹಾಗೇ ವಸಂತಳು ಪತ್ರಿಕೆಯನ್ನು ನೋಡಿದ್ದಳು. ಅದರಲ್ಲಿ ಬಂದ ವಿಷಯವಾವುದೂ ಅವಳಿಗೆ

ಹೊಸದಾಗಿರಲಿಲ್ಲ; ಆದರೆ ಅಷ್ಟು ವಿಷಯಗಳು ಪತ್ರಿಕೆಯವರಿಗೆ ತಿಳಿದುದು ಹೇಗೆ; ಮದುವೆಯ ಸರ್ಟಿಫಿಕೇಟು, ತನ್ನ ಮತ್ತು ನಟೇಶನ ಫೋಟೋಗಳು, ಹಿಂದಿನದಿನ ತನ್ನ ಮನೆಯಲ್ಲಿ ನಡೆದ ದೃಶ್ಯದ ಭಾವಚಿತ್ರ ಇವನ್ನೆಲ್ಲಾ ಅವರು ಹೇಗೆ ಯಾವಾಗ ಯಾರಿಂದ ದೊರಕಿಸಿಕೊಂಡರು; ಇದೊಂದು ಸಮಸ್ಯೆ ಯಾಯಿತು. ನಟೇಶನು ಸಾಮಾನ್ಯ ಕೂಲಿ ಆಳೆಂದು ಅವಳು ತಿಳಿದಿದ್ದುದು ಸರಿಯಲ್ಲವೆಂದು ತೋರಿತು. ತಳಮಳಗೊಂಡು ಸಾಕಾಗಿ ಒಂದು ನೆಲೆಗೆ ಬಂದಿದ್ದ ಮನಸ್ಸು ಉದ್ವೇಗಕ್ಕೆಡೆಕೊಡದೆ ಸಮಾಧಾನವಾಗಿ ಪರಿಸ್ಥಿತಿಯನ್ನು ವಿಮರ್ಶಿಸತೊಡಗಿತ್ತು. ತನ್ನ ಸ್ವಂತಕ್ಕೆ ಸಂಬಂಧಿಸಿದ ಈ ವಿಷಯವನ್ನು ಪತ್ರಿಕೆಯಲ್ಲಿ ಪ್ರಕಟಿಸಿದುದಕ್ಕಾಗಿ ಅವರಮೇಲೆ ನ್ಯಾಯಾಸ್ಥಾನದಲ್ಲಿ ತಾನು ಮೊಕದ್ದಮೆಯೇಕೆ ಹೂಡಬಾರದೆಂದು ಯೋಚಿಸಿದಳು. ಹಿಂದೆಯೇ ಅವಳ ಬುದ್ಧಿ ಬೇರೆರೀತಿ ಹೇಳಿತು. ಈ ಪತ್ರಿಕೆಗಳವರ ಸಹವಾಸ ವಿಚಿತ್ರವಾದುದು. ಅವರನ್ನು ಕೆಣಕಿದಷ್ಟೂ ತನಗೆ ಕೇಡೇ ಹೊರತು ಒಳ್ಳೆಯದಲ್ಲ. ಸುಮ್ಮ ನಿದ್ದರೆ ಅಷ್ಟಕ್ಕೇ ಮುಗಿಯಬಹುದಾದ ಈ ಪ್ರಕರಣವು ಅವರ ವಿರೋಧ ಕಟ್ಟಿಕೊಂಡರೆ ಬ್ರಹ್ಮಾಂಡವಾಗಿ ಬೆಳೆಯಬಹುದು. ಹೀಗೆಂದು ಯೋಚಿಸಿ ವಸಂತಳು ಪತ್ರಿಕೆಯಮೇಲೆ ಆಗ್ರಹಮಾಡುವ ಹವ್ಯಾಸವನ್ನು ಮರೆತು ಟ್ರಸ್ಟಿಗಳನ್ನು ಮಧ್ಯಾಹ್ನ ಮೂರುಗಂಟೆಗೆ ತನ್ನ ಮನೆಗೆ ಬರಹೇಳಿದ್ದಳು. ಆದರಿಂದ ತಿರುಮಲಯ್ಯ, ಸರ್ವೋತ್ತಮ ಶೆಟ್ಟಿಯವರ ಕೈಯಲ್ಲಿ ಪತ್ರಿಕೆಗಳನ್ನು ನೋಡಿದಾಗ ಅವಳ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ.

ವಸಂತಳನ್ನು ಕಂಡ ಸ್ವಲ್ಪಹೊತ್ತು ಮಾತನ್ನು ಹೇಗೆ ಪ್ರಾರಂಭಿಸಬೇಕೆಂದು ತಿಳಿಯದೆ ಅವರು ತೊಳಲಿದರು. ತಿರುಮಲಯ್ಯನು ಇದ್ದುದರಲ್ಲಿ ಚೇತರಿಸಿಕೊಂಡು ಬಲವಂತದ ನಗುವನ್ನು ಮುಖದ ಮೇಲೆ ತೋರಿಸುತ್ತ 'ಅಂತೂ ಮದುವೆಯಾಗಿಬಿಟ್ಟೆಯಲ್ಲಮ್ಮ!' ಎಂದ.

'ಹೌದು. ಮದುವೆಮಾಡಿಕೊಳ್ಳಬೇಕು ಎಂತ ನೀವು ಆ ದಿನ ಹೇಳ ಲಿಲ್ಲವೆ? ಆಗಿದ್ದೇನೆ.'

ಸಮಯವನ್ನು ನೋಡಿ ಶೆಟ್ಟರೂ ಜೊತೆಗೆ ಸೇರಿಕೊಂಡರು.

'ಇನ್ವಿಟೇಷನ್ ಇಲ್ಲ, ಸಂಗೀತಕಚೇರಿ ಇಲ್ಲ ಚಿರೋಟಿ ಊಟ ಹಾಕ ಲಿಲ್ಲ!'

'ಅವೆಲ್ಲಾ ಮಾಡಬೇಕು ಎಂತ ನಮ್ಮ ತಾತ ಉಯಿಲಿನಲ್ಲಿ ಬರೆದಿದ್ದಾರೆಯೆ ?'

'ಹಾಗೆಲ್ಲಾ ಬರೀತಾರೆಯೆ? ಒಬ್ಬರಿಗೂ ತಿಳಿಯದಹಾಗೆ ಮದುವೆ ಮಾಡಿಕೊಂಡುಬಿಟ್ಟೆಯಲ್ಲಮ್ಮ! ನಿನ್ನ ಮದುವೆ ಎಷ್ಟೋ ವಿಜೃಂಭಣೆಯಿಂದ ಮಾಡಬೇಕೆಂದು ನಾವೆಲ್ಲ ಯೋಚಿಸುತ್ತಿದ್ದೆವು.'

'ತಮಗೆ ನಿರಾಶೆಯಾಯಿತೇನೋ, ಕ್ಷಮಿಸಬೇಕು. ಆದರ್ಶ ಜೀವನ ನಡೆಸಬೇಕೆನ್ನುವ ಹೆಣ್ಣು ಆದರ್ಶ ರೀತಿಯಲ್ಲಿ ನಡೆದುಕೊಳ್ಳಬೇಕು. ಮದುವೆಯ ಆಡಂಬರಕ್ಕಾಗಿ ಖರ್ಚುಮಾಡುವುದೂ ಗಂಡು ಹೆಣ್ಣಿಗೆ ಸಂಬಂಧಿಸಿದ ಈ ವಿಷಯವನ್ನು ಸಾರ್ವಜನಿಕ ಸಮಾರಂಭವಾಗಿ ಮಾಡುವುದೂ ನನಗೆ ಒಪ್ಪಿಗೆಯಿಲ್ಲ.'

ಈ ಮಾತುಗಳನ್ನು ಹೀಗೆ ಆಡಬೇಕೆಂದು ವಸಂತಳು ಉದ್ದೇಶಿಸಿರಲಿಲ್ಲ; ತಾನಾಗಿ ಅವು ಬಾಯಲ್ಲಿ ಬರುತ್ತಿದ್ದುವು. ಹದಿನೆಂಟು ವರ್ಷ ಬೆಳೆದ ಅವಳ ದೇಹದಲ್ಲಿ ಸೇರಿದ್ದ ಸ್ವಾಭಿಮಾನವು ಅವಳು ಮಾಡಿದ ಕೆಲಸವೇ ಸರಿಯೆಂದು ಸಮರ್ಥನೆ ಮಾಡುತ್ತಿತ್ತು. ಅರ್ಧಮೆಚ್ಚಿಕೆ ಅರ್ಧಹಾಸ್ಯದ ಧ್ವನಿಯಿಂದ ತಿರುಮಲಯ್ಯ ಮಾತನ್ನು ಮುಂದುವರಿಸಿದ.

'ಅಂತೂ ಹೊಸದೊಂದು ಫ್ಯಾಷನ್ನಿಗೆ ಅಸ್ತಿಭಾರ ಹಾಕಿದೆ.'

'ಫ್ಯಾಷನ್ ಏನು ? ವಾಸ್ತವವಾಗಿ ಹಿಂದಿದ್ದ ಪದ್ಧತಿಯಲ್ಲಿ ಫ್ಯಾಷನ್ ಇತ್ತು. ಈಗ ಅದು ಹೋಗಿಬಿಟ್ಟಿತು.'

'ನಾನು ಹೇಳಿದ್ದು ಹಾಗಲ್ಲಮ್ಮಾ, ಹಿಂದೆಲ್ಲಾ ಅಗ್ನಿಸಾಕ್ಷಿಕ ವಿವಾಹ, ಗಾಂಧರ್ವ ವಿವಾಹ, ರಾಕ್ಷಸ ವಿವಾಹ, ಪೈಶಾಚ ವಿವಾಹ ಹೀಗೆ ಹದಿನಾರು ತೆರವ ವಿವಾಹ ಪದ್ಧತಿಗಳಿದ್ದುವು. ಇದು ಹದಿನೇಳನೆಯರೀತಿಯ ಮದುವೆ —ಕಾನೂನಿನ ಮದುವೆ. ಅಂತೂ ಚಿರೋಟಿ ಊಟ ತಪ್ಪಿಸಿಬಿಟ್ಟೆ!

ಇಷ್ಟುಹೊತ್ತಿಗೆ ರಾವ್ ಸಾಹೇಬರು ಬಂದರು. ತನಗಿಂತ ಮುಂಚಿತವಾಗಿ ಉಳಿದ ಇಬ್ಬರೂ ಬಂದಿದ್ದುದನ್ನು ಕಂಡು ತಮ್ಮ ಕೈಗಡಿಯಾರದ ಕಡೆ ನೋಡಿ 'ಈಗ ತಾನೇ ಮೂರುಗಂಟೆ' ಎಂದು ಸಮಾಧಾನ ಹೇಳಿಕೊಂಡರು. ಕಿಟ್ಟಿರು ತಾವು ಮುಂಚಿತವಾಗಿ ಬಂದುದೇ ತಪ್ಪಾಯಿತೇನೋ ಎಂಬಂತೆ ಕ್ಷಮಾಯಾಚನೆಯ ಧ್ವನಿಯಲ್ಲಿ

'ನಾವು ಸ್ವಲ್ಪ ಮುಂದಾಗಿ ಬಂದುಬಿಟ್ಟೆವು. ವೇಳೆ ಸರಿಯಾಗಿ ತಿಳಿಯ ಲಿಲ್ಲ' ಎಂದರು.

'ಚಿಂತೆಯಿಲ್ಲ, ಕುಳಿತುಕೊಳ್ಳಿ.'

ರಾವ್ ಸಾಹೇಬರ ನಡೆನುಡಿಗಳು ಎಂದಿನಂತೆ ಇರದೆ ಮನಸಿನಲ್ಲಿ ಅಡಗಿದ್ದ ಅಸಮಾಧಾನವನ್ನು ಸೂಚಿಸುತ್ತಿದ್ದುವು. ತಮಗಾಗಿ ಹಾಕಿದ್ದ ಕುರ್ಚಿಯಲ್ಲಿ ಕುಳಿತವರೇ ಬೇರೆ ಮಾತಿಗೆ ಎಡೆಗೊಡದೆ ವಸಂತಾದೇವಿಯಕಡೆ ನೋಡುತ್ತ

'ಏನಮ್ಮ ಬರಹೇಳಿದ್ದು?' ಎಂದರು.

ವಸಂತಾದೇವಿಗೆ ಅವರಲ್ಲಾಗಿದ್ದ ಈ ಬದಲಾವಣೆಯು ತಿಳಿಯದೆ ಇರಲಿಲ್ಲ. ಆದರೆ ಅದನ್ನು ಗಮನಿಸದವಳಂತೆ

'ಆದಿನ ನೀವಿಲ್ಲಿ ಕಲೆತಾಗ ನನ್ನ ಮದುವೆಯಾಗುವವರೆಗೆ ನನ್ನ ಆಸ್ತಿ ನನ್ನ ಕೈಗೆ ಬರತಕ್ಕುದಲ್ಲವೆಂದು ಹೇಳಿದ್ದಿರಿ; ಈಗ ನನಗೆ ಮದುವೆ ಯಾಗಿದೆ' ಎಂದಳು.

'ಹೌದು, ಅದು ನಿನ್ನೆಯೇ ನನಗೆ ತಿಳಿಯಿತು. ಬಹುಶಃ ಇವರಿಗೂ ತಿಳಿದಿರಬಹುದು.'

ಅವರಿಬ್ಬರೂ ತಮಗೆ ತಿಳಿದಿದೆಯೆಂದು ಹೇಳುವಂತೆ ತಲೆಯಾಡಿಸಿದರು. ಮುಂದಿನ ಪ್ರಶ್ನೆಹಾಕಲು ವಸಂತಳಿಗೆ ಇನ್ನಾವ ಅಡಚಣೆಯೂ ಕಾಣಲಿಲ್ಲ.

'ಹಾಗಿದ್ದರೆ ಈಗಲಾದರೂ ನನ್ನ ಆಸ್ತಿ ನನಗೆ ಕೊಡಬಹುದಲ್ಲ!'

ರಾವ್‌ಸಾಹೇಬರು ತಮ್ಮ ಅಂಗಿಯೊಳಗಿನಿಂದ ಉಯಿಲನ್ನು ಇಟ್ಟಿದ್ದ ಲಕೋಟೆಯನ್ನು ತೆಗೆದು ಉಯಿಲಿನಲ್ಲಿ ತಮ್ಮ ಗಮನಕ್ಕೆ ಬಂದಿದ್ದ ನಿಬಂಧನೆ ಯನ್ನು ಬೆರಳಿಟ್ಟು ತೋರಿಸಿ ಅದನ್ನು ತಿರುಮಲಯ್ಯನ ಕೈಗೆ ಕೊಟ್ಟರು. ತಿರುಮಲಯ್ಯನು ಮುಖದಲ್ಲಿ ನಾನಾ ಮುದ್ರೆಗಳನ್ನು ತೋರಿಸಿ ಉಯಿಲನ್ನು ಶೆಟ್ಟರಕೈಗೆ ಕೊಟ್ಟ. ಶೆಟ್ಟರು ಆಶ್ಚರ್ಯ ಪಟ್ಟವರಂತೆ ತಲೆದೂಗುತ್ತ ಅದನ್ನು ಓದುತ್ತಿದ್ದರು. ವಸಂತಳಿಗೆ ಈ ನಾಟಕವನ್ನು ಕಂಡು ಮೈ ಉರಿಯುತ್ತಿತ್ತು. ಸ್ವಲ್ಪ ಗಡುಸಾಗಿಯೇ ಕೇಳಿದಳು,

'ಏಕೆ, ಉತ್ತರ ಕೊಡುವುದಿಲ್ಲವಲ್ಲ?'

ತಿರುಮಲಯ್ಯ ಅದಕ್ಕೆ ಉತ್ತರ ಕೊಟ್ಟರು.

'ಮದುವೆಯೇನೋ ಆಯಿತು ಎಂದು ನೀನು ಹೇಳಿದೆ; ನಾವೂ ಒಪ್ಪಿಕೊಂಡೆವು. ಆದರೆ ನಿನ್ನ ಗಂಡ ಯಾರು, ಎಲ್ಲಿದ್ದಾನೆ ನಾವೂ ಸ್ವಲ್ಪ ನೋಡಬಾರದೇನಮ್ಮಾ?'

'ಯಾರಾದರೇನು, ಎಲ್ಲಿದ್ದರೇನು? ನನ್ನ ಗಂಡನನ್ನು ನಿಮಗೆ ತೋರಿಸಬೇಕು ಎಂತ ನಮ್ಮ ತಾತ ಉಯಿಲಿನಲ್ಲಿ ಬರೆದಿದ್ದಾರೆಯೇ?'

'ಹ್ಹಾಗೆ ಬರೆದಿಲ್ಲ, ಬೇರೆ ರೀತಿ ಬರೆದಿದ್ದಾರೆ.'

'ಏನು ಬರೆದಿದ್ದಾರೆ?'

ವಸಂತಳಿಗೆ ಸ್ವಲ್ಪ ಅಧೀರತೆ ತಲೆಹಾಕತೊಡಗಿತು. ತಿರುಮಲಯ್ಯ ರಾವ್ ಸಾಹೇಬರಕಡೆ ನೋಡಿದ. ಉಯಿಲಿನಲ್ಲಿದ್ದ ನಿಬಂಧನೆಯನ್ನು ಅವರೇ ಹೇಳಲಿ ಎಂಬರ್ಥ ಆ ನೋಟದಲ್ಲಿತ್ತು. ನಂಜುಂಡಯ್ಯನವರಿಗೆ ಅಪೇಕ್ಷೆಯಿದ್ದುದೂ ಅದೇ; ತನ್ನ ಮಗನನ್ನು ಅವಳು ನಿರ್ಲಕ್ಷ್ಯ ಮಾಡಿದ್ದಕ್ಕೆ ತಕ್ಕ ಪ್ರತೀಕಾರವದು.

'ವಿದ್ಯಾವತಿಯಾಗುವ ತನ್ನ ಮೊಮ್ಮಗಳು ತನ್ನ ಮದುವೆಯ ವಿಷಯದಲ್ಲಿ ಬಹಳ ಬುದ್ಧಿಯನ್ನುಪಯೋಗಿಸಬಹುದೆಂದು ತಿಳಿದೇ ದಿವಂಗತ ವೆಂಕಪ್ಪಯ್ಯನವರು ಒಂದು ನಿಬಂಧನೆಯನ್ನು ಹಾಕಿದ್ದಾರೆ ವಸಂತಾದೇವಿ. ನಿನಗೆ ಮದುವೆಯಾಗಿದ್ದ ಮಾತ್ರಕ್ಕೆ ಸಾಲದು. ನಿನ್ನ ಗಂಡನೊಡನೆ ಒಂದು ತಿಂಗಳಕಾಲ ವಿಹಿತವಾಗಿ ಸಂಸಾರ ಮಾಡಿಕೊಂಡಿದ್ದರೆ ಮಾತ್ರವೇ ಅವರ ಆಸ್ತಿ ನಿನಗೆ ಬರುತ್ತದೆ.'

ಮಳೆಯಿಲ್ಲದ ಸಿಡಿಲೊಂದು ವಸಂತಳ ತಲೆಯಮೇಲೆ ಬಿದ್ದಂತಾಯಿತು. ಕ್ಷಣಕಾಲ ಬಾಯಿಂದ ಮಾತು ಹೊರಡಲಾರದೆಹೋಗಿ ಅನಂತರ ಮೆಲ್ಲನೆ ಚೇತರಿಸಿಕೊಂಡು 'ಒಂದು ತಿಂಗಳು ಸಂಸಾರ ಮಾಡಬೇಕೆ?' ಎಂದಳು.

'ಹೌದು.'

ತಿರುಮಲಯ್ಯನು ಹಾಸ್ಯಮಾಡುತ್ತ

'ಒಂದು ಜೀವಮಾನವೆಲ್ಲ ಜೊತೆಯಲ್ಲಿರಬೇಕು, ಅದೂ ಸಾಲದೆ ಜನ್ಮ ಜನ್ಮಾಂತರಕ್ಕೂ ಇದೇ ಗಂಡನೇ ಇರಬೇಕು ಅಂತ ಮದುವೆಯಾಗುವಾಗ, ಒಂದು ತಿಂಗಳಕಾಲ ಏನು ಹೆಚ್ಚಮ್ಮ?' ಎಂದ.

'ಹಾಗೆ ಸಂಸಾರ ಮಾಡದಿದ್ದರೆ?'

ರಾವ್ ಸಾಹೇಬರು ಅದಕ್ಕೆ ಉತ್ತರಕೊಟ್ಟರು.

'ಉಯಿಲಿನಲ್ಲಿ ಬರೆದಿರುವ ನಿಬಂಧನೆಯನ್ನು ನಾವು ಎಳ್ಳಷ್ಟೂ ಮೀರು ವಂತಿಲ್ಲ.'

ಶೆಟ್ಟರು ಸಮಾಧಾನ ಮಾಡುತ್ತ

'ತಿಂಗಳು ಎನ್ನುವುದೇನು, ಆಡುತ್ತ ಬಂದುಬಿಡುತ್ತೆ. ಅದರೊಳಗಾಗಿ ಅವನನ್ನ ನಿನ್ನ ಹತೋಟಿಗೆ ತೊಗೊ' ಎಂದರು.

'ಆಗಲಾದರೂ ಅವನನ್ನ ನಮಗೆ ಕಾಣಿಸುತೀಯೋ ಅಥವಾ ಘೋಷಾನೇ ಇಟ್ಟಿರುತೀಯೋ ?' ಎಂದು ತಿರುಮಲಯ್ಯ ಸೇರಿಸಿದ.

ವಸಂತಳಿಗೆ ಅವರ ಹಾಸ್ಯ ಬೇಕಿರಲಿಲ್ಲ. ಅವಳ ಹೃದಯ ಮಂದಿರವು ಹತ್ತಿ ಉರಿಯುತ್ತಿತ್ತು. ಹಿಂದೆಯೇ ಈ ನಿಬಂಧನೆಯನ್ನು ತಿಳಿಸದೆ ಅವರು ತನಗೆ ಮೋಸ ಮಾಡಿದರೆಂದು ಅವರ ಮೇಲೆ ಉಗ್ರಕೋಪ. ಈ ನಿಬಂಧನೆಯು ಆಗಲೇ ತಿಳಿದಿದ್ದರೆ ಮೃತ್ಯು ಮುಖದಲ್ಲಿದ್ದ ನಟೇಶನನ್ನು ತಾನು ಮದುವೆ ಯಾಗುತ್ತಲೇ ಇರಲಿಲ್ಲ. ಕಾರ್ಯ ಮಿಂಚಿದಮೇಲೆ ಈಗ ಇದನ್ನು ಹೇಳು ತ್ತಿದ್ದಾರೆ. ಈಗೇನು ಮಾಡುವುದೆಂಬ ಚಿಂತೆ ಅವಳ ತಲೆಯಮೇಲೆ ಪರ್ವತಾ ಕಾರವಾಗಿ ಕುಳಿತಿತ್ತು. ಹಾಗೆಯೇ ಇನ್ನೂ ಯಾವ ನಿಬಂಧನೆಗಳನ್ನು ಮುಚ್ಚಿಟ್ಟಿವ್ರು ಒಂದೊಂದಾಗಿ ಇವರು ಈಚೆಗೆ ಬಿಡುತ್ತಾರೋ ಎಂಬ ಶಂಕೆ ಯಿಂದ ಕೇಳಿದಳು.

'ಆಸ್ತಿಯ ಸಂಬಂಧವಾಗಿ ನಮ್ಮ ತಾತ ಏನೇನು ನಿಬಂಧನೆಗಳನ್ನು ಹಾಕಿದ್ದಾರೆಂದು ದಯವಿಟ್ಟು ಒಂದೇಸಲ ನನಗೆ ಹೇಳಿಬಿಡಿ. ಇಲ್ಲವಾದರೆ ಆ ಉಯಿಲನ್ನಾದರೂ ನನ್ನ ಕೈಗೆಕೊಡಿ, ನಾನೇ ನೋಡಿಕೊಳ್ಳುತ್ತೇನೆ.'

ರಾವ್ ಸಾಹೇಬರಿಗೆ ಈ ಮಾತುಕೇಳಿ ಸ್ವಲ್ಪ ಸಿಟ್ಟೇ ಬಂತು.

'ನಾವು ಏನು ಮಾಡಿದರೂ ನಿಮ್ಮ ತಾತನ ಅಪೇಕ್ಷೆಯಂತೆ ಮಾಡು ತ್ತಿದ್ದೇವಮ್ಮಾ; ಉಯಿಲನ್ನಾಗಲಿ ಅದರಲ್ಲಿರುವ ನಿಬಂಧನೆಗಳನ್ನಾಗಲಿ ನಿನ್ನಿಂದ ಮುಚ್ಚಿಟ್ಟು ನಾವೇನೂ ಗುಡಿಗೋಪುರ ಕಟ್ಟಿಕೊಳ್ಳಬೇಕಾಗಿಲ್ಲ. ಈ ನಿಬಂಧನೆಗಳನ್ನು ಯುಕ್ತಕಾಲ ಬರುವವರೆಗೆ ನಿನಗಾಗಲಿ ಯಾರಿಗೇ ಆಗಲಿ ತಿಳಿಸಕೂಡದೆಂದು ನಿಮ್ಮತಾತ ಬರೆದಿದಾರೆ. ಅದರಂತೆ ನಾವೂ ಅವನ್ನು ರಹಸ್ಯವಾಗಿಟ್ಟಿವು. ಈಗ ಅವನ್ನು ಹೇಳಿಯಾಯಿತು. ಇನ್ನು

ನಮ್ಮ ಜವಾಬ್ದಾರಿ ತೀರಿತು, ಅವುಗಳಿಗನುಸಾರವಾಗಿ ನೀನು ನಡೆದುಕೊಂಡರೆ ಆ ಕೂಡಲೇ ನಿನ್ನ ಆಸ್ತಿಯನ್ನು ನಿನಗೆ ಕೊಟ್ಟುಬಿಡುತ್ತೇವೆ. ಸದ್ಯಕ್ಕೆ ಈ ನಿಷ್ಠುರ ನಮಗೆ ತಪ್ಪಿದರೆ ಸಾಕು.'

'ನಿಮ್ಮ ಮನಸ್ಸನ್ನು ನೋಯಿಸಿದ್ದರೆ ಕ್ಷಮಿಸಿ. ಇನ್ನು ಉಯಿಲಿನಲ್ಲಿ ರಹಸ್ಯವೇನೂ ಇಲ್ಲದಮೇಲೆ ನಾನೂ ಅದನ್ನು ಒಂದುಸಲ ನೋಡಬಹುದಲ್ಲ!'

ರಾವ್ ಸಾಹೇಬರು ಮಾತಾಡದೆ ಉಯಿಲನ್ನು ವಸಂತಳ ಮುಂದೆಸೆದರು. ಅವಳು ಅದನ್ನು ಓದಿಕೊಂಡು ದೀರ್ಘವಾಗಿ ಒಮ್ಮೆ ಉಸಿರೆಳೆದುಬಿಟ್ಟು ಉಯಿಲನ್ನು ಹಿಂದಕ್ಕೆ ಕೊಡುತ್ತ 'ಒಂದು ತಿಂಗಳು ಸಂಸಾರ ಮಾಡಬೇಕು' ಎಂದು ತನ್ನಲ್ಲಿ ತಾನೇ ಅಂದುಕೊಂಡಳು.

— ೧೮ —

ಹೊಸ ಪಾಂಟೀಕ್ ಕಾರನ್ನು ಇಕ್ಕಟ್ಟಾದ ರಸ್ತೆಗಳಲ್ಲಿ ನಿಧಾನವಾಗಿ ವಸಂತಾದೇವಿಯು ನಡೆಸಿಕೊಂಡು ಹೋಗುತ್ತಿರುವ ದೃಶ್ಯ ಕೂಲಿಗಾರರ ಕಾಲೊನಿಯ ಜನರನ್ನು ಆಕರ್ಷಿಸಿತ್ತು. ಮೇಘವರ್ಣದ ಸೀರೆಯುಟ್ಟು, ಮುಡಿಯನ್ನು ಸಡಿಲವಾಗಿ ತುರುಬುಕಟ್ಟಿ, ಅದಕ್ಕೊಂದು ಕರಿಯುಬಲೆಯ ಆವರಣಕೊಟ್ಟು, ತೆಳುವಾದ ಸುವಾಸನೆಯನ್ನು ಸೂಸುತ್ತಿದ್ದ ಪನ್ನೀರು ಗುಲಾಬಿಯ ಹೂವೊಂದನ್ನು ಅಂದವಾಗಿ ಅಳವಡಿಸಿ, ಮುಖಚಂದಿರ ನನ್ನೊಲಿದುಬಂದಿರುವ ರೋಹಿಣಿಯಂತೆ ಹಣೆಯಲ್ಲಿ ಕುಂಕುಮದ ಬೊಟ್ಟನ್ನಿಟ್ಟು, ಅತ್ತ ಇತ್ತ ಕಿವಿಗಳಲ್ಲಿ ಧರಿಸಿರುವ ಓಲೆಗಳ ಮುತ್ತುಗಳು ಮಾಟವಾದ ಅವಳ ತುಟಿಗಳನ್ನು ಚುಂಬಿಸಲು ಅತ್ತಿತ್ತ ಎಳೆಯುತ್ತಿವೆಯೋ ಎನ್ನುವಂತೆ ಮುಗುಳುನಗೆ ಬೀರುತ್ತ, ಏಕಾಂಗಿಯಾಗಿ ಕಾರಿನಲ್ಲಿ ಕುಳಿತು ತನ್ನ ಕೋಮಲವಾದ ಕೈಗಳಿಂದ ಚಕ್ರವನ್ನು ಹಿಡಿದಿರುವುದೇ ನೋಡುವವರ ಕಣ್ಣಿಗೆ ಹಬ್ಬವಾಗಿತ್ತು. ತರುಣನೊಬ್ಬನು, ಇವಳಿಲ್ಲಿ ನಿಂತು ನನ್ನನ್ನು ಕರೆದು ಮಾತನಾಡಬಾರದೆ ಎಂದುಕೊಂಡ; ಕಾಸುಬಡ್ಡಿಯ ವ್ಯಾಪಾರಿಯೊಬ್ಬ ಇವಳೊಂದು ದಿನ ನನ್ನೊಡನೆ ಇದ್ದರೆ ನನ್ನ ಐಶ್ವರ್ಯವನ್ನೆಲ್ಲ ಇವಳಿಗೆ ಕೊಟ್ಟೇನು ಎಂದು ಹಲುಬಿದ: ನಾಟಕ ಪ್ರಿಯನಾದ ಮತ್ತೊಬ್ಬ ಇಂಥ ಹೆಣ್ಣು ಪಾರ್ಟುಮಾಡಿದರೆ ಹಣ ಸೂರೆಯಾದೀತೆಂದ; ಮುಳ್ಳು ಮುಖದ ಕುಬ್ಜೆಯೊಬ್ಬಳು ಈ ರೂಪ

ನನಗಿದ್ದರೆ ಈ ಜಗತ್ತನ್ನೇ ಆಳುತ್ತಿದ್ದೆ ಎಂದು ಜಗವನ್ನಾಳುವ ಕನಸು ಕಂಡಳು; ಕೂಲಿಯವನೊಬ್ಬ ಇವಳು ಕರೆದರೆ ಎಷ್ಟು ಸಾಮಾನನ್ನಾದರೂ ಎಷ್ಟು ದೂರವಾದರೂ ಹೊತ್ತೇನು ಎಂದು ಯೋಚಿಸುತ್ತಿದ್ದ; ರಸಿಕ ನವ ಯುವಕನೊಬ್ಬ ಇಂಥ ಸೌಂದರ್ಯವನ್ನು ನೋಡಿದಮೇಲೆ ಇನ್ನಾವುದನ್ನೂ ನೋಡಲು ಮನಸೊಪ್ಪುವುದಿಲ್ಲ, ಇನ್ನು ಬದುಕಿದ್ದು ಫಲವೇನು, ಇವಳ ಕಾರಿಗೆ ಅಡ್ಡಲಾಗಿಯೇ ತಾನೇಕೆ ಬೀಳಬಾರದು ಎಂದು ಹಂಚಿಕೆ ಹಾಕುತ್ತಿದ್ದ; ಇವರೊಬ್ಬರನ್ನೂ ಲಕ್ಷಿಸದೆ ಕಾರು ಮುಂದೆ ಸಾಗುತ್ತಿತ್ತು.

ಕಾರು ನಿಂತಕಡೆ ಅದನ್ನು ಜನರು ಮುತ್ತಿಕೊಂಡರು. ವಸಂತಳು ಅವರಲ್ಲಿ ಒಬ್ಬನನ್ನು ಸನ್ನೆಮಾಡಿ ಕರೆದಳು; ಹತ್ತುಜನ ಒಂದೇ ಹೆಜ್ಜೆಗೆ ಹತ್ತಿರಬಂದರು.

'ಇಲ್ಲಿ, ನಟೇಶ್ ಎಂಬಾತನ ಮನೆಯಾವುದು?'

'ಎಂದ ನಟೇಶ್' ಎಂದು ನಾಲ್ಕುಜನ ಒಟ್ಟಿಗೇ ಕೇಳಿದರು.

'ಅಂದ ಪೇರಾಳು ಇಂಗೆ ನರಿಯಾ ಇರಕರಾ' ಎಂದು ಮತ್ತೊಬ್ಬನೆಂದ. ವಸಂತಳು ತನ್ನಬಳಿ ಇದ್ದ ಸರ್ಟಿಫಿಕೇಟನ್ನು ನೋಡಿ

'ನಂಬರು 63. ಕೋರಲ್ ಮರ್ಚೆಂಟ್ ಸ್ಟ್ರೀಟ್' ಎಂದಳು.

'ಪವಳಕಾರ ತೆರುವಾ!' ಎಂದು ದೀರ್ಘವಾಗಿ ಎಳೆದು ಹೇಳಿ ಅವರಲ್ಲಿ ಒಬ್ಬನು ಅಲ್ಲಿಗೆ ಹೋಗಲು ದಾರಿಯನ್ನು ಹೇಳಿದ.

ಕಾರು ಮುಂದಕ್ಕೆ ಹೊರಟಿತು. ಅದು ಸ್ವಲ್ಪದೂರ ಹೋದಾಗ ಹಿಂದೆ ಇದ್ದ ಗುಂಪಿನವರಿಗೆ ಹೊಳೆಯಿತು—ಅವಳು ನಟೇಶನ ಹೆಂಡತಿ ಇರಬೇಕೆಂದು. ಆಮುವರೆಗೆ ನಟೇಶನು ಕಾಲೊನಿಗೆ ಹಿಂತಿರುಗಿ ಬಂದಿದ್ದ. ಹಿಂದಿನದಿನ ಸಂಜೆ ಅವನಿಗಾಗಿ ಅಭಿನಂದನಸಭೆ ನಡೆದಿತ್ತು. ಹಾಗೆಯೇ ಅವನಿಗೆ ಮದುವೆ ಯಾಗಿದ್ದ ವಿಷಯವೂ ಅವನ ಹೆಂಡತಿಯು ಒಬ್ಬ ಶ್ರೀಮಂತಳೆಂದೂ ಪತ್ರಿಕೆ ಗಳಿಂದ ತಿಳಿದಿತ್ತು. ಅವಳೇ ಇವಳಿರಬೇಕೆಂದು ಒಬ್ಬಿಬ್ಬರು ಸೂಚಿಸಿದರು. ಮೊದಲು ಅದು ತಮಗೆ ತಿಳಿಯದೆಹೋಯಿತಲ್ಲಾ ಎಂದು ಕೆಲವರು ಪಶ್ಚಾ ತ್ತಾಪಪಟ್ಟರು; ನಟೇಶ ತುಂಬಾ ಅದೃಷ್ಟಶಾಲಿಯೆಂದು ಹಲವರು ನಿಟ್ಟುಸಿರು ಬಿಟ್ಟರು.

ವಸಂತಳ ಕಾರು ನಟೇಶನ ಮನೆಯಮುಂದೆ ಬಂದು ನಿಂತಾಗ ಆ ಕೇರಿಯ ಹುಡುಗರೆಲ್ಲ ಅದರ ಸುತ್ತಲೂ ಮುತ್ತಿಕೊಂಡರು. ಅಕ್ಕಪಕ್ಕದ ಮನೆಗಳ ಹೆಂಗಸರು ತಾವು ಮಾಡುತ್ತಿದ್ದ ಕೆಲಸವನ್ನು ಹಾಗೆಯೇ ಬಿಟ್ಟು ಹೊರಗಡೆ ಬಂದುನಿಂತರು. ಬೀದಿಯಲ್ಲಿ ಹೋಗುತ್ತಿದ್ದ ಜನ ಮುಂದೇನಾಗುವುದೋ ನೋಡೋಣವೆಂಬ ಕುತೂಹಲದಿಂದ ಅಲ್ಲಲ್ಲಿಯೇ ನಿಂತುಕೊಂಡರು. ಮನೆಯ ಮುಂದೆ ವಿಶಾಲವಾಗಿದ್ದ ಅಂಗಳದ ತುಂಬ ಜನರು ನಿಮಿಷಾರ್ಧದಲ್ಲಿ ಸೇರಿಬಿಟ್ಟರು. ಸುರಸುಂದರಿಯಂತೆ, ಚಲನಚಿತ್ರದ ತಾರೆಯಂತೆ, ಜೀವಕಳೆ ತುಂಬಿದ ದಂತದ ಪುತ್ಥಳಿಯಂತೆ, ಥಳಥಳನೆ ಹೊಳೆಯುತ್ತಿರುವ ಆ ರೂಪ ರಾಶಿಯನ್ನು ನೋಡಿ ಬಿಟ್ಟ ಕಣ್ಣುಬಾಯಿಗಳನ್ನು ಮುಚ್ಚದೆ ಜನರು ನಿಂತಿದ್ದರು. ದೇವಿಯು ಸಮೀಪದಲ್ಲಿ ನಿಂತಿದ್ದ ಒಬ್ಬ ಹುಡುಗನನ್ನು 'ನಟೇಶ್ ಮನೆ ಇದೇನೆ ?' ಎಂದು ಕೇಳಿದಳು.

ಕಾರು ಬಂದುದನ್ನು ಕಂಡು ಅದುವರೆಗೆ ಹೊರಕ್ಕೆ ಬಂದಿದ್ದ ಇಂದಿರೆಯು 'ಹೌದು, ಇದೇ ನಮ್ಮಮನೆ' ಎಂದು ಉತ್ಸಾಹದಿಂದ ಉತ್ತರಕೊಟ್ಟಳು. ವಸಂತಳು ಕಾರನ್ನಿಳಿದುಬಂದು ಇಂದಿರೆಯನ್ನು ನೋಡಿ

'ನೀನು ಇಂದಿರೆಯಲ್ಲವೆ?' ಎಂದು ಕೇಳಿದಳು. ಅಪರಿಚಿತಳಾದ ಈ ಅಪ್ಸರೆಯ ಪ್ರಶ್ನೆ ಇಂದಿರೆಗೆ ಸಂತೋಷ ಆಶ್ಚರ್ಯಗಳನ್ನುಂಟುಮಾಡಿತು. ತನ್ನ ಹೆಸರು ಇವಳಿಗೆ ಗೊತ್ತಿದೆ!

'ನಿಮ್ಮ ಅಣ್ಣ ಮನೆಯಲ್ಲಿದ್ದಾರೆಯೆ ?'

'ಇದ್ದಾರೆ, ನೀವು....ನೀವು....'

ಹುಡುಗಿಗೆ ಏನು ಕೇಳಬೇಕೆಂದು ತೋರದು, ನೀವು ಯಾರೆಂದು ಕೇಳಬಹುದೋ ಕೇಳಬಾರದೋ ಎಂಬ ಸಂದೇಹ. ಅದನ್ನರಿತ ವಸಂತಳೇ ಉತ್ತರ ಕೊಟ್ಟಳು.

'ನಾನು ನಿನ್ನ ಅತ್ತಿಗೆ ಇಂದಿರಾ, ನಿನ್ನ ಅಣ್ಣನ....ಹೆಂಡತಿ.'

ಇಂದಿರೆಗೆ ಸ್ವರ್ಗಲೋಕ ಕೈಗೆ ಸಿಕ್ಕಿದಂತಾಯಿತು. ಕುಣಿಕುಣಿಯುತ್ತ 'ಅಣ್ಣಾ, ಅತ್ತಿಗೆ ಬಂದಿದ್ದಾಳೆ' ಎಂದು ಸಾರುತ್ತ ಮನೆಯೊಳಗೆ ಹೋಗುವುದರಲ್ಲಿದ್ದಳು. ಅಷ್ಟುಹೊತ್ತಿಗೆ ನಟೇಶನು ಹೊರಗೆಬಂದಿದ್ದ. ಇಂದಿರೆಯು ಅಣ್ಣನ ಹತ್ತಿರಕ್ಕೆಹೋಗಿ ಉತ್ಸಾಹದಿಂದ

'ಅತ್ತಿಗೆ ಬಂದಿದಾಳಣ್ಣ' ಎಂದಳು.

ನಟೇಶನು ಒಮ್ಮೆ ತಿರಸ್ಕಾರದಿಂದ ವಸಂತಳಕಡೆ ನೋಡಿ

'ಅತ್ತಿಗೆಯೆ! ಸುಮ್ಮನಿರು ಇಂದಿರಾ; ನಿನಗೆ ಅತ್ತಿಗೆ ಎಂಬುವಳಿಲ್ಲ' ಎಂದು ಗದರಿಸಿದ.

ಅಂಗಳದ ತುಂಬ ನೆರೆದಿದ್ದ ಜನ ಅಚ್ಚರಿಯಿಂದ ಈ ಮಾತುಗಳನ್ನು ಕೇಳುತ್ತಿದ್ದರು. ನಟೇಶನ ಕೋಪ ಅವರನ್ನೂ ಬಿಡಲಿಲ್ಲ. ಒಂದು ಸಲ ಗರ್ಜಿಸಿ ಗದರಿಸಿ ಅವರನ್ನು ಚದುರಿಸಿದ. ಕಾರನ್ನು ಮುತ್ತಿದ್ದ ಹುಡುಗರು ಅವನ ಗರ್ಜನೆಯನ್ನುಕೇಳಿ ದೂರ ಸರಿದರು; ವಿನೋದ ನೋಡುತ್ತಿದ್ದ ಹೆಂಗಸರು ಮೂತಿ ತಿರುಗಿಸಿ ತಮ್ಮ ಅಸಮಾಧಾನವನ್ನು ಸೂಚಿಸುತ್ತ ತಮ್ಮ ತಮ್ಮ ಮನೆಗಳನ್ನು ಹೊಕ್ಕರು. ಬೀದಿಯಜನ ತಮ್ಮ ಗಮನವನ್ನು ಮುಂದು ವರಿಸಿದರು. ಅದರಲ್ಲಿಯೂ ಕುತೂಹಲಿಗಳಾದವರು ಮರೆಯಲ್ಲಿ ನಿಂತು ಇಣಿಕಿನೋಡುತ್ತ ನಿಂತಿದ್ದರು.

ನಟೇಶನು ಹೀಗೆ ಹೇಳಬಹುದೆಂದು ನಿರೀಕ್ಷಿಸಿದ್ದ ವಸಂತಳು ಅವನ ಹತ್ತಿರಕ್ಕೆ ಹೋದಳು. ಅವಳು ಬರುತ್ತಿರುವುದನ್ನು ತಡೆಯುವಂತೆ ನಟೇಶನು

'ಯಾರು ನೀನು, ಇಲ್ಲೇಕೆಬಂದೆ?' ಎಂದ.

'ನಾನು ನಿಮ್ಮ ಹೆಂಡತಿಯಲ್ಲವೆ? ವಸಂತಾ.'

'ನನಗೆ ಹೆಂಡತಿಯೆಂಬುವಳಿಲ್ಲ; ನೀನೆಲ್ಲೋ ತಪ್ಪಾಗಿ ಇಲ್ಲಿಗೆ ಬಂದಿರ ಬೇಕು; ಹೊರಟುಹೋಗು ಇಲ್ಲಿಂದ. ಇದು ಕೂಲಿಯವನ ಮನೆ; ಇದು ಕೂಲಿಜನರ ಕೇರಿ; ನಿನ್ನಂತಹ ಶ್ರೀಮಂತರು ಇಲ್ಲಿಗೆ ಬರಬಾರದು.'

'ನನ್ನನ್ನು ಕ್ಷಮಿಸಿ ನಟೇಶ್. ಮೊನ್ನೆ ನಡೆದುದನ್ನು ದಯವಿಟ್ಟು ಮರೆತುಬಿಡಿ. ಮನೆಗೆ ಬನ್ನಿ.'

'ಮನೆಗೆ!!'

'ಹೌದು, ನನ್ನ ಮನೆಗೆ, ನಮ್ಮ ಮನೆಗೆ ಬನ್ನಿ. ತಿಳಿಯದೆ ಮಾಡಿದ ತಪ್ಪನ್ನು ಮರೆತುಬಿಡಿ.'

'ತಪ್ಪು ಮಾಡಿದವನು ನಾನು ದೇವಿ, ತಿಳಿಯದೆ ತಪ್ಪುಮಾಡಿದೆ; ಈಗ ಅದೆಲ್ಲವನ್ನೂ ಮರೆತುಬಿಟ್ಟಿದ್ದೇನೆ. ಪುನಃ ಆ ತಪ್ಪನ್ನು ಜ್ಞಾಪಿಸಬೇಡ, ಹೋಗು.'

'ನಿಮ್ಮನ್ನು ಬಿಟ್ಟು ನಾನು ಹಿಂದಕ್ಕೆ ಹೋಗಲಾರೆ.'

ನಟೇಶನು ಇಂದಿರೆಯಕಡೆ ನೋಡಿದ. ತಮ್ಮ ಮಾತನ್ನು ಕೇಳುತ್ತ ಹುಡುಗಿಯು ನಿಂತಿದ್ದಳು.

'ಸ್ಕೂಲಿಗೆ ಹೊತ್ತಾಗಲಿಲ್ಲವೆ ಇಂದಿರಾ?'

'ಇದೋ ಹೊರಡುತ್ತೇನಣ್ಣ.'

ಹೊರಡುತ್ತೇನೆ ಎಂದವಳು ಹೊರಡಲಿಲ್ಲ. ನಟೇಶನು ತನ್ನ ಅಂಗಿಯನ್ನು ಹೆಗಲಮೇಲೆ ಹಾಕಿಕೊಂಡು ಕೆಲಸಕ್ಕೆ ಹೋಗಲು ಹೆಜ್ಜೆಯನ್ನು ಮುಂದಿಟ್ಟ. ವಸಂತಳೊಡನೆ ಆಡಬೇಕಾದ ಮಾತು ಅವನ ಮಟ್ಟಿಗೆ ಪೂರೈಸಿತ್ತು. ಹೊರಡಲು ಮುಂದಕ್ಕೆ ಹೆಜ್ಜೆಯಿಟ್ಟ ಗಂಡನನ್ನು ಅಡ್ಡಗಟ್ಟಿ ವಸಂತ ಮತ್ತೆ ಕೇಳಿಕೊಂಡಳು,

'ನಿಮ್ಮ ದಮ್ಮಯ್ಯ, ನನ್ನನ್ನು ಬಿಟ್ಟುಹೋಗಬೇಡಿ, ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ.'

'ಸಾಧ್ಯವಿಲ್ಲ ವಸಂತಾ, ನನ್ನ ನಿನ್ನ ಸಂಬಂಧವು ಎಂದಿಗೂ ಸಾಧ್ಯವಿಲ್ಲ. ಸಿರಿವಂತಿಕೆಯ ಸೊಕ್ಕಿನಲ್ಲಿ ಮೆರೆಯುತ್ತಿರುವವಳು ನೀನು, ಬಡತನದ ಬಯಲಿನಲ್ಲಿ ಶ್ರಮಿಸುತ್ತಿರುವವನು ನಾನು; ನಿನ್ನ ಗೆಳೆಯ ಗೆಳತಿಯರಿಗೆ ನಾನು ಸರಿಸಮನಲ್ಲ, ನನ್ನನ್ನು ಗಂಡನೆಂದು ಕರೆಯುವುದು ನಿನಗೆ ಅವಮಾನ; ಇಂಥವನೊಡನೆ ನೀನು ಹೇಗೆ ಇರಬಲ್ಲೆ? ಕೂಲಿಯವನಾದರೂ ನನಗೆ ಆತ್ಮಗೌರವವಿದೆ; ಸ್ವತಂತ್ರವಾಗಿ ಮರ್ಯಾದೆಯಿಂದ ಬಾಳಬಲ್ಲೆನೆಂಬ ಅಭಿಮಾನವಿದೆ.'

'ನಿಮ್ಮ ಕಾಲಿಗೆ ಬೀಳುತ್ತೇನೆ ನಟೇಶ್. ನನ್ನನ್ನು ನಿರಾಕರಿಸಬೇಡಿ.

ನಟೇಶನು ಅದನ್ನು ಲಕ್ಷಿಸದೆ ಮುಂದೆ ಮತ್ತೊಂದು ಹೆಜ್ಜೆಯನ್ನಿಟ್ಟ. ವಸಂತಳು ತಟ್ಟನೆ ಕುಳಿತು ಅವನ ಕಾಲನ್ನು ಹಿಡಿದುಬಿಟ್ಟಳು. ಮೇಲಕ್ಕೆ ಎತ್ತುತ್ತಿದ್ದ ನಟೇಶನ ಕಾಲು ನೆಲದಮೇಲೆ ಊರಿತ್ತು; ಮುಂದಿಟ್ಟ ಕಾಲು ಹಿಂದಕ್ಕೆ ಬಂತು. ಅವನ ಮೃದು ಹೃದಯವನ್ನು ಮುಸುಕಿದ್ದ ಗಡಸುತನವು ಒಂದೇ ಕ್ಷಣದಲ್ಲಿ ಪುಡಿಪುಡಿಯಾಯಿತು. ಪ್ರಯತ್ನವಿಲ್ಲದೆ ವಸಂತಳ ಮುಖವನ್ನು ನೋಡಿದ. ಅವಳ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ಅವಳ ಕಣ್ಣೀರಿನ ಹಬೆ ನಟೇಶನ ಹೃದಯವನ್ನು ಕರಗಿಸಿಬಿಟ್ಟಿತು. ಕಾಲನ್ನು ಬಿಡಿಸಿಕೊಳ್ಳುತ್ತ ನಯವಾಗಿ,

'ಏಳು ವಸಂತಾ, ಹೆಂಗಸು ಅತ್ತರೆ ನನ್ನಜೀವ ಹಿಂಡಿದಂತಾಗುತ್ತದೆ. ನನ್ನಿಂದ ನಿನಗೆ ಏನೂ ಉಪಯೋಗವಿಲ್ಲ. ಹೋಗು ನಿನ್ನ ಮನೆಗೆ' ಎಂದ.

ವಸಂತಳು ಮೇಲಕ್ಕೆದ್ದು ಅಳುತ್ತಲೇ

'ನಾನು ನಿಮ್ಮ ಹೆಂಡತಿಯಲ್ಲವೆ ? ಶ್ರೀಮಂತಳಾಗಿರುವುದೇ ನನ್ನತಪ್ಪೆ ? ನನ್ನ ಐಶ್ವರ್ಯ ನಿಮ್ಮದಲ್ಲವೆ ?' ಎಂದಳು.

ವಸಂತಳು ಹೂಸಬಾಣಗಳನ್ನು ಬಿಟ್ಟು ನೋಡಿದಳು; ಅವು ಸಹ ನಟೇಶನ ನಿರ್ಧಾರವನ್ನು ಕದಲಿಸಲಾರದೆ ಹೋದುವು. ಕೊನೆಗೆ ನಿರುಪಾಯಳಾಗಿ

'ನೀವು ಅಲ್ಲಿಗೆ ಬರಲಾಗದಿದ್ದರೆ ನಾನೇ ನಿಮ್ಮ ಮನೆಯಲ್ಲಿರುತ್ತೇನೆ. ಅದಕ್ಕಾದರೂ ಅವಕಾಶಕೊಡಿ' ಎಂದಳು.

'ನನ್ನ ಮನೆಯಲ್ಲಿರುತ್ತೀಯಾ ! ಈ ಗುಡಿಸಿಲಿನಲ್ಲಿ?'

'ಹೌದು ಇದೇ ನನಗೆ ಅರಮನೆ.'

'ಒಂದುಸಲ ಮೋಸಹೋದೆ ವಸಂತಾ, ಪುನಃ ಮೋಸ ಹೋಗಲಾರೆ. ನೀನು ಇಲ್ಲಿರಬೇಕಾದರೆ ನನ್ನ ಹೆಂಡತಿಯಹಾಗೆ ಇರಬೇಕು ; ನಿನ್ನ ಶ್ರೀಮಂತಿಕೆಗೆ ನನ್ನ ಮನೆಯಲ್ಲಿ ಸ್ಥಾನವಿಲ್ಲ.'

'ನೀವು ಹೇಳಿದಂತೆ ಇರುತ್ತೇನೆ ; ನಿಮ್ಮ ದಾಸಿಯಾಗಿ ಇರುತ್ತೇನೆ.'

ನಟೇಶನು ತನ್ನ ಕಿವಿಗಳನ್ನೇ ನಂಬಲಾರದಾದ. ಇದೇನು ನಿಜವಾಗಿ ನಡೆಯುತ್ತಿರುವ ಸಂಭಾಷಣೆಯೋ ಅಥವಾ ಕನಸಿನ ಕಲ್ಪನೆಯೋ ಎಂದು ಭ್ರಮಿಸಿದ. ಭಾಗ್ಯಲಕ್ಷ್ಮಿಯು ಬಡವನ ಕುಟೀರದಲ್ಲಿರಲು ಬಯಸುತ್ತಿದ್ದಾಳೆ! ತನ್ನ ಜೀವನದಲ್ಲಿ ಏನೋ ಒಂದು ವಿಚಿತ್ರವಾದ ಘಟನೆ ನಡೆಯುತ್ತಿರುವಂತೆ ಅವನಿಗೆ ತೋರಿತು. ಏನಾದರೂ ತನ್ನ ಬಿಗುವನ್ನು ಬಿಡದೆ

'ನೀನು ಇಲ್ಲಿರಬೇಕಾದರೆ ನನ್ನ ಸಂಪಾದನೆಯಲ್ಲಿ ಮಾತ್ರ ಜೀವನ ನಡೆಸಬೇಕು, ಮನೆಯ ಕೆಲಸಗಳನ್ನೆಲ್ಲಾ ನೀನೇ ಮಾಡಬೇಕು, ಪೇಟೆಗೆ ಹೋಗಿ ಸಾಮಾನುಗಳನ್ನು ತರಬೇಕು, ಮನೆಯಲ್ಲಿ ಅಡಿಗೆ ಮಾಡುವುದು ಕಸಗುಡಿಸುವುದು ಪಾತ್ರೆ ತೊಳೆಯುವುದು ಬಟ್ಟೆ ಒಗೆಯುವುದು ಈ ಎಲ್ಲ ಕೆಲಸಗಳನ್ನೂ ನೀನೇ ಮಾಡಬೇಕು' ಎಂದ.

'ಮಾಡುತ್ತೇನೆ.'

'ನಿನ್ನ ಹಣವನ್ನು ಯಾವುದಕ್ಕೇ ಆಗಲಿ ಯಾವಾಗಲೇ ಆಗಲಿ ಉಪಯೋಗಿಸಕೂಡದು.'

'ಇಲ್ಲ.'

'ಈ ನಿನ್ನ ಕಾರನ್ನು ಎಂದಿಗೂ ಉಪಯೋಗಿಸಕೂಡದು.'

'ಇಲ್ಲ; ಉಪಯೋಗಿಸುವುದಿಲ್ಲ.'

'ಈ ನಿಯಮಗಳಿಗೆ ಒಪ್ಪಿದರೆ ಮಾತ್ರ ನೀನು ನನ್ನ ಮನೆಯಲ್ಲಿರಬಹುದು. ಯಾವಾಗ ನೀನು ಇವಕ್ಕೆ ತಪ್ಪಿ ನಡೆಯುತ್ತೀಯೋ ಆಗಲೇ ಇಲ್ಲಿಂದ ಹೊರಡಬೇಕಾದೀತು. ಒಪ್ಪಿಗೆಯೆ?'

'ಹಾಗೇ ಆಗಲಿ. ನಿಮ್ಮ ನಿಯಮಗಳನ್ನೆಲ್ಲ ನಾನು ಒಪ್ಪಿಕೊಂಡೆ, ನಾನೊಂದು ಮಾತು ಕೇಳಬಹುದೆ?'

'ಕೇಳು.'

'ನನ್ನ ಸಮ್ಮತಿಯಿಲ್ಲದೆ ನೀವಾದರೂ ನನ್ನನ್ನು ಮುಟ್ಟಕೂಡದು.'

ಈ ಮಾತು ಕೇಳಿ ನಟೇಶನಿಗೆ ನಗುಬಂತು. ಆ ನಗುವಿನಲ್ಲೇ

'ಓ! ಆಗಬಹುದು' ಎಂದ.

'ಬಹಳ ಥ್ಯಾಂಕ್ಸ್.'

'ಕೂಲಿಯವನ ಹೆಂಡತಿಗೆ ಇಂಗ್ಲೀಷು ಬರುವುದಿಲ್ಲ ವಸಂತಾ' ಎಂದವನೇ ತಂಗಿಯ ಕಡೆ ತಿರುಗಿ 'ಇಂದಿರಾ, ನಿನ್ನ ಅತ್ತಿಗೆಗೆ ಅಡಿಗೆಯ ಮನೆಯನ್ನು ತೋರಿಸು. ನಾನು ಗಣಿಯಿಂದ ಈ ದಿನ ಹನ್ನೆರಡು ಗಂಟೆಗೆ ಬರುತ್ತೇನೆ. ಅದರೊಳಗಾಗಿ ಅಡಿಗೆಯಾಗಿರಬೇಕು. ನಿನ್ನ ಕಾರನ್ನು ಮೊದಲು ಒಳಗೆ ಬಿಡು ವಸಂತಾ.'

ಪಕ್ಕದಲ್ಲಿದ್ದ ಒಂದು ಷೆಡ್ಡಿನ ಬಾಗಿಲನ್ನು ನಟೇಶನು ತೆಗೆದ. ವಸಂತಳು ಕಾರನ್ನು ಹಿಮ್ಮುಖವಾಗಿ ತಿರುಗಿಸಿ ಅದರೊಳಕ್ಕೆ ಬಿಟ್ಟಳು. ಬಾಗಿಲಿಗೆ ಬೀಗ ಹಾಕಿ ಬೀಗದ ಕೈಯನ್ನು ತನ್ನ ಅಂಗಿಯಲ್ಲಿ ಹಾಕಿಕೊಂಡು ನಟೇಶನು ಗಣಿಯ ಕೆಲಸಕ್ಕೆ ಹೊರಟ.

ಅಣ್ಣನು ಹೋಗುವವರೆಗೂ, ನಗುಮುಖದಿಂದ ನಿಂತಿದ್ದ ಇಂದಿರೆಯು ಅತ್ತಿಗೆಯ ಕೈ ಹಿಡಿದುಕೊಂಡು ಅವಳನ್ನು ಮನೆಯೊಳಕ್ಕೆ ಕರೆದೊಯ್ದಳು.

ಬಾಗಿಲಬಳಿ ಹೋಗುತ್ತಲೇ ಬಹಳ ಅನುಭವವಿರುವ ಅಜ್ಜಿಯಂತೆ 'ಬಲಗಾಲು ಒಳಗಿಟ್ಟುಬಾ ಅತ್ತಿಗೆ' ಎಂದು ಕತ್ತನ್ನು ಓರೆಮಾಡಿಕೊಂಡು ಹೇಳಿದಳು.

ವಸಂತಳಿಗೆ ಇಲ್ಲಿಯ ವಾತಾವರಣ, ಜನ, ನಡೆನುಡಿ, ಸಂಪ್ರದಾಯ ಎಲ್ಲವೂ ಹೊಸರೀತಿ ಇರುವಂತೆ ತೋರುತ್ತಿತ್ತು. ಆ ನವೀನತೆಯು ಅವಳ ಮನಸಿನಲ್ಲಿ ಒಂದುತೆರದ ಉತ್ಸಾಹವನ್ನು ಉಲ್ಲಾಸವನ್ನು ಉಂಟುಮಾಡುತ್ತಿತ್ತು.

ನಟೇಶನ ಮನೆಯೆಂದರೆ ಎರಡು ಕೋಣೆಗಳು ಮತ್ತು ಒಂದು ಬಚ್ಚಲು ಮನೆ. ಒಂದು ಕೋಣೆ ನಟೇಶನ ಉಪಯೋಗಕ್ಕೆ, ಮತ್ತೊಂದು ಅಡಿಗೆಮನೆ. ಊಟದಮನೆ, ಮಲಗುವ ಮನೆ, ಪಡಸಾಲೆ ಎಲ್ಲವೂ ಅದೇ. ಆ ಮನೆಯ ಪರಿಚಯಮಾಡಿಸಿ ಅಡಿಗೆಯ ಸಾಮಾನುಗಳು ಪಾತ್ರೆಗಳು ಇರುವ ಸ್ಥಳವನ್ನು ತೋರಿಸಿ ಇಂದಿರೆಯು ಸ್ಕೂಲಿಗೆ ಹೊತ್ತಾಗಿದ್ದುದರಿಂದ ಹೊರಟುಹೋದಳು. ಗಳಿಗೆಗೊಮ್ಮೆ ಹಿಂತಿರುಗಿ ಅತ್ತಿಗೆಯನ್ನು ನೋಡಿ ಹಿಗ್ಗುತ್ತ ಬೇಗ ಹಿಂತಿರುಗಿ ಬರುವೆನೆಂದು ಭರವಸೆ ಹೇಳುತ್ತ ಹೋಗಿ ಬರಲೆ ಎಂದು ಅಪ್ಪಣೆಕೇಳುತ್ತ ಕುಣಿ ಕುಣಿಯುತ್ತ ಹೋಗುತ್ತಿದ್ದ ನಾದಿನಿಯನ್ನು ಕಂಡು ವಸಂತಳಿಗೆ ಸಹಜವಾದ ಮಮತೆ ಹುಟ್ಟಿತು.

— ೧೯ —

ಗಂಡ ನಾದಿನಿಯರು ಹೊರಟುಹೋದಮೇಲೆ ಒಮ್ಮೆ ವಸಂತಾದೇವಿಯು ತನ್ನ ಹೊಸಮನೆಯನ್ನು ಕಣ್ಣುತುಂಬ ನೋಡಿದಳು. ತಾನೀಗ ಆ ಮನೆಯ ರಾಣಿ. ಹತ್ತು ಹನ್ನೆರಡುಅಡಿ ಉದ್ದ, ಹೆಚ್ಚುಕಡಿಮೆ ಅಷ್ಟೇ ಅಗಲವಿರುವ ಆ ರಾಜ್ಯಕ್ಕೆ ತಾನೇ ಮಹಾರಾಣಿ. ತಾತನು ತನಗೆ ಕೊಟ್ಟಿರುವ ಭವ್ಯವಾದ ಬಂಗಲೆಗೆ ಸರಿಸಮನಾದ ಅಥವಾ ಅದನ್ನು ಮೀರಿಸುವ ಮಹಲು ತನ್ನ ಪತಿಗೃಹವಾಗಿರುತ್ತದೆಂದು, ಅವರ ಸಜ್ಜು ಶೃಂಗಾರಗಳು ಕಲೋಪಾಸಕರ ಮನಸನ್ನು ಸೆಳೆಯುವಂತಿರುತ್ತವೆಂದು, ಕಲ್ಪನಾಲೋಕದಲ್ಲಿ ಕನಸು ಕಾಣುತ್ತಿದ್ದ ಚಪಲೆಗೆ ದೊರೆತಿದ್ದ ಭವನ ಇದು. ಹಿಂಗಿದ ಅನೇಕ ಅಪೇಕ್ಷೆಗಳ ನೆನಪು ಕ್ಷಣಕಾಲ ಅವಳ ಮನಸ್ಸನ್ನು ಶೂನ್ಯಸಾಗರದಲ್ಲಿ ಮುಳುಗಿಸಿತು. ಧೀರೆಯಾದ ಅವಳು ಅಲ್ಲಿಂದ ಹೊರಚಿಮ್ಮಿ ಮನಸ್ಸನ್ನು ಗಟ್ಟಿಮಾಡಿಕೊಂಡು ಮುಂದಿನ ಕೆಲಸದಕಡೆ ಗಮನಕೊಟ್ಟಳು.

ಕೋಣೆಯ ಒಂದು ಮೂಲೆಯಲ್ಲಿ ಒಂದು ಸಣ್ಣ ಚಪ್ಪಡಿಯನ್ನು ಹಾಕಿ ಅದರಮೇಲೆ ಒಲೆಯಿಟ್ಟಿತ್ತು. ಬೆಳಗ್ಗೆ ಕಾಫಿಮಾಡಿ ಕಟ್ಟಿಗೆಯನ್ನು ಹಾಗೇ ಒಲೆಯಲ್ಲಿ ಬಿಟ್ಟಿದ್ದುದರಿಂದ ಅದು ಸಣ್ಣಗೆ ಹೊಗೆಯಾಡುತ್ತಿತ್ತು. ಒಲೆಯ ಹತ್ತಿರ ಮೂರು ನಾಲ್ಕು ಅಲ್ಯೂಮಿನಿಯಂ ಪಾತ್ರೆಗಳು, ಎರಡು ಲೋಟಗಳು, ಇನ್ನೊಂದು ಮೂಲೆಯಲ್ಲಿ ಮಡಕೆಗಳ ಒಂದುಸಾಲು, ಎರಡು ಡಬ್ಬಗಳು, ಅವುಗಳಮೇಲೆ ಮುಚ್ಚಿದ್ದ ಒಂದು ಹಲಗೆಯಮೇಲೆ ಸುತ್ತಿಟ್ಟಿದ್ದ ಕಂಬಳಿ ಕೌದಿಗಳ ಹಾಸಿಗೆ, ಅವುಗಳ ಪಕ್ಕದಲ್ಲೇ ಗೋಡೆಗೆ ಒರಗಿಸಿದ್ದ ಒಂದು ಹರಕು ಚಾಪೆ. ಬಾಗಿಲ ಪಕ್ಕದಲ್ಲಿದ್ದ ಮೂಲೆಯಲ್ಲಿ ಒಂದು ಒರಳು, ರುಬ್ಬುವ ಗುಂಡು, ಒರಳಿನ ಮೇಲೊಂದು ಬೀಸುವ ಕಲ್ಲು, ಒಂದು ಒನಕೆ, ಅದರ ಪಕ್ಕದಲ್ಲೇ ಒಂದು ಪೊರಕೆ. ಬಾಗಿಲಹಿಂದೆ ಮರದ ಗೂಟವೊಂದಕ್ಕೆ ನೇತುಹಾಕಿದ್ದ ಎರಡು ಮೊರಗಳು, ಒಂದು ಜರಡಿ. ಎದುರು ಗೋಡೆಗೆ ಕಬ್ಬಿಣದ ದೊಡ್ಡ ಮೊಳೆಗಳನ್ನು ಹೊಡೆದು ಅವುಗಳಮೇಲೆ ಹಲಗೆಗಳನ್ನಿಟ್ಟು ಎರಡು ಅಟ್ಟಗಳನ್ನು ನಿರ್ಮಿಸಿತ್ತು; ಅಟ್ಟಗಳ ಮೇಲೆ ಕೆಲವು ಸಣ್ಣಪುಟ್ಟ ಪಾತ್ರೆಗಳು, ಚಿಕ್ಕ ಚಿಕ್ಕ ಡಬ್ಬಿಗಳಲ್ಲಿ ಸಾಸವೆ, ಮೆಣಸಿನಕಾಯಿ, ಉಪ್ಪು ಇತ್ಯಾದಿಗಳು. ಅವುಗಳ ಪಕ್ಕದಲ್ಲಿ ಹೊಗೆ ಸೂರಿ ಕಪ್ಪಾಗಿದ್ದ ಒಂದು ಬುಟ್ಟಿಯಲ್ಲಿ ಹುಣಸೆಹಣ್ಣು. ನಟೇಶನ ಕೊಟಡಿಗೆ ಎದುರಾಗಿ ಗೋಡೆಗೆ ಒಂದು ಲಕ್ಷ್ಮಿದೇವಿಯ ಚಿಕ್ಕಪಟ, ಅದರ ಕೆಳಗೆ ಒಂದು ಚಿಕ್ಕ ಹಲಗೆಯನ್ನು ಮೊಳೆಗಳಮೇಲೆ ಕೂಡಿಸಿ ಅದರಮೇಲೆ ಎರಡು ಸೊಡರುಗಳು, ಅರಿಸಿನ ಕುಂಕುಮದ ಬಟ್ಟಲುಗಳು, ಪಟದ ಪಕ್ಕದಲ್ಲೇ ಚಿಕ್ಕದೊಂದು ಕನ್ನಡಿ.

ಕೋಣೆಯಲ್ಲಿದ್ದ ಒಂದೊಂದು ವಸ್ತುವೂ ತಾನು ಮುಟ್ಟಲು ಅಯೋಗ್ಯವಾದುದೆಂಬ ತಿರಸ್ಕಾರ ವಸಂತಳಿಗೆ ಉಂಟಾಯಿತು. ಆದರೆ ವಿಧಿ ತನ್ನನ್ನು ಅಲ್ಲಿಗೇ ತಂದು ದೂಡಿದೆ. ತನಗೆ ಇಷ್ಟವಿರಲಿ ಇಲ್ಲದಿರಲಿ ಒಂದು ತಿಂಗಳಕಾಲ ಈ ನಿರುಪಯೋಗವಸ್ತುಗಳೇ ತನ್ನ ಸರ್ವಸ್ವ. ಅವುಗಳೊಡನೆ ತನ್ನ ಬಾಳ್ವೆ ಬೆಸಗೆಯಾಗಿದೆಯೆಂಬ ಅರಿವು ಉಂಟಾಗಿ ವಸಂತಳು ಅವನ್ನು ಮತ್ತೊಂದು ಸಲ ನೋಡಿದಳು. ಒಂದು ಪುಟ್ಟ ಪ್ರಪಂಚವೇ ಆ ಕೋಣೆಯಲ್ಲಿ ಅಡಕವಾಗಿತ್ತು. ಎರಡು ಜೀವಗಳು ಈ ಪುಟ್ಟ ಪ್ರಪಂಚದಲ್ಲಿ ಜೀವಿಸುತ್ತಿದ್ದುವು. ಮೂರನೆಯವಳಾದ ತನಗೆ ಇದು ಈಗ ಆಶ್ರಯ ಕೊಡುತ್ತಿದೆ. ತನ್ನ ಮಹಲು

ಇದಕ್ಕಿಂತ ನೂರಾರು ಪಾಲು ದೊಡ್ಡದಾಗಿದೆ. ಒಂದೊಂದು ವಸ್ತುವನ್ನಿಡುವುದಕ್ಕೆ, ಒಂದೊಂದು ಕೆಲಸ ಮಾಡುವುದಕ್ಕೆ ಒಂದೊಂದು ವಿಸ್ತಾರವಾದ ಕೋಣೆಯಿದೆ. ಅವೆಲ್ಲಸೇರಿ ಪೋಷಿಸುತ್ತಿರುವುದು ತನ್ನ ಒಂದೇ ಜೀವವನ್ನು. ಆ ಮಹಲು ತನಗೆ ಸಾಲದೆಂದು, ತನ್ನ ಗಂಡನಿಂದ ತನಗೆ ದೊರೆಯುವ ಮಹಲು ಇನ್ನೂ ಭವ್ಯವಾಗಿರಬೇಕೆಂದು ಬಯಸುತ್ತಿದ್ದ ಅವಳಿಗೆ ಇಷ್ಟುಚಿಕ್ಕ ಸ್ಥಳದಲ್ಲಿ ಮೂರು ವ್ಯಕ್ತಿಗಳು ಜೀವಿಸಿರುವುದು ಸಾಧ್ಯ ಎಂಬುದು ಒಂದು ಆಶ್ಚರಿಯಾಗಿ ತೋರುತ್ತಿತ್ತು.

ಬಡವರ ಮನೆಯನ್ನು ವಸಂತ ಅಮುವರೆಗೆ ಕಂಡಿರಲಿಲ್ಲ; ಅದನ್ನು ಕಂಡಿದ್ದುದೆಂದರೆ ಸಿನಿಮಾಗಳಲ್ಲಿ ಮಾತ್ರ. ಅವು ಚಿತ್ರದ ಡೈರೆಕ್ಟರು ಜೋಡಿಸಿದ ಕೃತಕವಾದುವೆಂದು ಅವಳಿಗೆ ಗೊತ್ತು. ಸಹಜವಾದ ಮನೆ ಇಂದು ತನ್ನೆದುರಿಗಿದೆ. ಚಲನಚಿತ್ರದಲ್ಲಿ ಶ್ರೀಮಂತ ಕನ್ಯೆಯೊಬ್ಬಳು ಬಡತನಕ್ಕೆ ಸಿಕ್ಕಿದ ದೃಶ್ಯವನ್ನು ನೋಡಿ 'ಅಬ್ಬಾ ! ಅವಳು ಈ ಕಷ್ಟವನ್ನು ಸಹಿಸುವುದು ಹೇಗೆ' ಎಂದುಕೊಂಡಿದ್ದಳು. ಕತೆ ಕಾದಂಬರಿಗಳನ್ನು ಓದಿಓದಿ ಕಲ್ಪನಾಸುಖದುಃಖಗಳನ್ನು ಊಹಿಸುವುದರಲ್ಲಿ ಅನುಭವಿಸುವುದರಲ್ಲಿ ಹದವಾಗಿದ್ದ ಅವಳ ಮೆದುಳು ಒಬ್ಬ ಬಡವ್ಯಕ್ತಿಯು ಒಮ್ಮಿಂದೊಮ್ಮೆಯೇ ಶ್ರೀಮಂತನಾದರೆ ಅವನ ವರ್ತನೆ ಏನಾಗಬಹುದು ಅಥವಾ ಶ್ರೀಮಂತನೊಬ್ಬನು ಹಾಗೆಯೇ ಬಡವನಾದರೆ ಅವನ ಸ್ಥಿತಿ ಏನಾಗಬಹುದೆಂದು ಊಹಿಸುತ್ತಿದ್ದಳು. ಜೀವನದಲ್ಲಿ ಅನುದಿನವು ನಡೆಯುವ ಸಾಮಾನ್ಯ ಘಟನೆಗಳಿಗಿಂತ ಹೃದಯವನ್ನು ಕ್ಷಣಕಾಲವಾದರೂ ಝಲ್ಲೆನಿಸುವ, ಮೈಯನ್ನೊಮ್ಮೆ ಕುಲುಕಿಸಿ ರೋಮಾಂಚವನ್ನುಂಟುಮಾಡುವ ಅಸಾಧಾರಣ ಕೃತಿಗಳಲ್ಲಿ ಅವಳಿಗೆ ಆದರವಿತ್ತು. ಜೇಲು ಕಡಿವರೆ ಹೇಗಿರುತ್ತದೆಂಬುದನ್ನು ಅನುಭವಿಸಲು ಒಮ್ಮೆ ಬೈರನ್ ಮಹಾಕವಿಯು ತಾನೇ ಜೇಲಿನಿಂದ ಕಡಿಸಿಕೊಂಡನಂತೆ. ಅದೇ ಮನೋವೃತ್ತಿ ವಸಂತಳದು. ಬಡತನದ ಬಾಳು ಎಂಥದೆಂಬುದನ್ನು ಕಲ್ಪನಾಲೋಕದಲ್ಲಿ ಕಂಡಿದ್ದ ಅವಳಿಗೆ ದೈವದತ್ತವಾಗಿ ಅದನ್ನು ಅನುಭವಿಸುವ ಸಮಯ ಒದಗಿತ್ತು. ವಾಸ್ತವಿಕತೆಯು ಊಹೆ ಕಾಣುವುದಕ್ಕಿಂತ ಹೆಚ್ಚು ತೀಕ್ಷ್ಣವಾದುದು ಘೋರವಾದುದು ಊಹೆಗೆ ನಿಲುಕದಷ್ಟು ಸಹಜವಾದುದು ಎಂಬ ಅರಿವು ವಸಂತಾದೇವಿಗೆ ಆಗ ಉಂಟಾಯಿತು.

ತನ್ನ ಜೀವನದಲ್ಲಿ ಮೊದಲನೆಯ ಬಾರಿ—ಮೊಟ್ಟಮೊದಲನೆಯಬಾರಿ ವಸಂತಾದೇವಿಯು ಅಂದು ಅಡಿಗೆ ಮಾಡಬೇಕು. ಆ ಪುಟ್ಟ ರಾಜ್ಯವನ್ನು ಒಮ್ಮೆ ಇತ್ತಲಿಂದ ಅತ್ತ ಅಳೆಯುತ್ತ ತನ್ನವಾಗಿದ್ದ ಅಲ್ಲಿನ ಹಳೆಯ ಡಬ್ಬಗಳನ್ನು ಕರಿಯ ಮಡಕೆಗಳನ್ನು ಮಣುಕು ಪಾತ್ರೆಗಳನ್ನು ನೋಡಿದಳು. ಅವುಗಳಲ್ಲಿ ಏನೇನೋ ವಿಚಿತ್ರವಾದ ಪದಾರ್ಥಗಳಿರುವಂತೆ ತೋರಿತು; ಕೆಲವು ವಸ್ತುಗಳ ಹೆಸರೇ ತನಗೆ ತಿಳಿಯದು. ಅಟ್ಟದಂತಿದ್ದ ಹಲಗೆಯಮೇಲೆ ನಾಲ್ಕು ಬದನೆಕಾಯಿಗಳು ಹತ್ತು ಹನ್ನೆರಡು ಈರುಳ್ಳಿ ಇದ್ದುವು; ಬಹುಶಃ ಅಂದಿನ ತರಕಾರಿ ಅವೇ ಇರಬೇಕು. ಬದನೆಯ ಕಾಯನ್ನೇನೋ ತುಂಡು ಮಾಡಬಹುದು, ಆದರೆ ಈರುಳ್ಳಿಯನ್ನು ಏನು ಮಾಡಬೇಕು ? ತನ್ನ ಪುಣ್ಯಕ್ಕೆ ಇಂದಿರೆಯು ಒಲೆ ಹೊತ್ತಿಸಿಟ್ಟದ್ದಾಳೆ, ಒಲೆಯಲ್ಲಿ ಬೆಂಕಿಇದೆ ಇನ್ನೆರಡು ಸೌದೆ ಹಾಕಿದರೆ ಉರಿದೀತು, ಆಮೇಲೆ ? ? ?

ದಿಕ್ಕುತೋರದೆ ವಸಂತಳು ತನ್ನ ತಲೆಯನ್ನು ಒಡಿಸ ತೊಡಗಿದಳು. ಅಷ್ಟರಲ್ಲಿ ಪಕ್ಕದ ಮನೆಯ ಮೀನಾಕ್ಷಿ ಬಂದಳು. ಬಂದವಳು 'ಒಳಗೆ ಬರಲೆ' ಎಂದು ಕೇಳಲಿಲ್ಲ; ಮನೆಯ ಹಕ್ಕುದಾರಳಂತೆ ನೇರವಾಗಿ ಒಳಗೆಬಂದು ವಸಂತಳನ್ನು ಕಾಲಿನಿಂದ ತಲೆಯವರೆಗೆ ನೋಡುತ್ತ ಕೆನ್ನೆಯಮೇಲೆ ಕೈಯಿಟ್ಟುಕೊಂಡು ಕಣ್ಣು ಬಾಯಿಗಳನ್ನು ಬಿರಿಯಬಿಟ್ಟು ಏನೋ ಒಂದು ವಿಚಿತ್ರವಸ್ತುವನ್ನು ಕಂಡವಳಂತೆ ಬೆರಗಾಗಿ ನಿಂತುಬಿಟ್ಟಳು. ಅವಳು ಬಂದ ಪರಿಕ್ಷಣದಲ್ಲಿ ಆ ಕೇರಿಯ ಹೆಂಗಸರು ಅವರ ಮಕ್ಕಳು ಒಬ್ಬರ ಹಿಂದೊಬ್ಬರು ಬಂದು ಕೋಣೆಯನ್ನು ಆಕ್ರಮಿಸಿಯೇ ಬಿಟ್ಟರು. ಆಶ್ಚರಿಯ ಅವರ ನೋಟ, ಕೃತಕವಾದ ಕಿಲಕಿಲ ಧ್ವನಿ, ಒಳಗೆ ತುಂಬಿದ ಶೂನ್ಯತೆಯನ್ನೂ ಸೂಸುತ್ತಿದ್ದ ಬರಿನಗು ಇವು ವಸಂತಳನ್ನು ಬಹು ಇಕ್ಕಟ್ಟಿಗೆ ಸಿಕ್ಕಿಸಿದ್ದುವು. ಇಲ್ಲಿನ ಜನರು ತನ್ನನ್ನು ಸ್ವಾಗತಿಸುತ್ತಿರುವ ರೀತಿ ಇದೆಂದು ತಿಳಿದ ವಸಂತ ಅದೆಲ್ಲವನ್ನೂ ಸಹಿಸಿಕೊಂಡು 'ನನಗೆ ಈಗ ಸ್ವಲ್ಪ ಕೆಲಸವಿದೆ. ಮನೆಯಲ್ಲಿ ಬೇರೆ ಯಾರೂಇಲ್ಲ. ಆ ಮೇಲೆ ಬನ್ನಿ' ಎಂದಳು. ಬಂದವರಲ್ಲಿ ಒಬ್ಬ ಗಟ್ಟಿಗಿತ್ತಿಯು 'ನಟೇಶನು ಮದುವೆಯಾಗಿರುವುದು ನಿಮ್ಮನ್ನೇತಾನೇ? ' ಎಂದು ಅವಳ ತಮಿಳು ಮಿಶ್ರಿತವಾದ ಹರಕು ಮುರುಕು ಕನ್ನಡದಲ್ಲಿ ಕೇಳಿಯೇಬಿಟ್ಟಳು.

'ಹೌದು' ಎಂದು ಉತ್ತರ ಬಂತು.

'ನಿಮ್ಮ ಹೆಸರು ?'

'ವಸಂತಾ ದೇವಿ.'

'ಹೆಸರು ಚೆನ್ನಾಗಿದೆ.'

ಬಂದವರು ಸಮಾಧಾನ ಹೊಂದಿದವರಂತೆ ಒಬ್ಬೊಬ್ಬರಾಗಿ ಸರಿದರು. ಕಡೆಯಲ್ಲಿ ನಿಂತಿದ್ದ ಒಬ್ಬಿಬ್ಬರು ಹುಡುಗರನ್ನು ಮೀನಾಕ್ಷಿ ಗದರಿಸಿ ಕಳಿಸಿ

'ನನ್ನದು ಪಕ್ಕದಮನೆ; ಇಂದಿರೆಯೂ ನಾನೂ ಅಕ್ಕ ತಂಗಿಯರಂತೆ ಇದೇವೆ; ಏನಾದರೂ ಬೇಕಿದ್ದರೆ ಸಂಕೋಚವಿಲ್ಲದೆ ಕೇಳು' ಎಂದು ಅರೆಕನ್ನಡ ದಲ್ಲಿ ಹೇಳಿದಳು. ತನಗೆ ಅರ್ಥವಾದಷ್ಟು ಭಾಗಕ್ಕೇ ವಸಂತಳು 'ಥ್ಯಾಂಕ್ಸ್' ಎಂದು ಹೇಳಿ ಹಿಂದೆಯೇ ಅದು ಅನಾವಶ್ಯಕವಾದ ಮಾತೆಂದುಕೊಂಡಳು. ಅವರ ತಮಿಳು ತನಗೆ ಹೇಗೆ ತಿಳಿಯಲಿಲ್ಲವೋ ಹಾಗೇ ತನ್ನ ಇಂಗ್ಲೀಷೂ ಅವರಿಗೆ ಬಾರದಿದ್ದರೆ ತಾನು 'ಥ್ಯಾಂಕ್ಸ್' ಹೇಳಿ ಫಲವೇನು ?

ಅಡಿಗೆಯ ಯೋಚನೆಯನ್ನು ಅಡ್ಡಹಾಕಿದ ಅವರ ಆಕ್ರಮಣವು ನಿವಾರಣೆಯಾದಮೇಲೆ ವಸಂತಳಿಗೆ ಮತ್ತೆ ಆ ಸಮಸ್ಯೆಯು ಎದುರಿಗೆ ಬಂದು ನಿಂತಿತು. ನಟೇಶನು 12 ಗಂಟೆಗೆ ಬರುತ್ತಾನೆ. ಅದರೊಳಗಾಗಿ ಅಡಿಗೆ ಮಾಡಬೇಕು. ಮೊದಲನೆಯ ದಿನವೇ ಟೀಕೆಗೆ ಗುರಿಯಾಗಬಾರದು ; ತಾನು ಒಂದು ಕೈ ಕಡಮೆಯೆಂದು ತೋರಿಸಿಕೊಳ್ಳಬಾರದು. ಸ್ಕೂಲುಗಳಲ್ಲಿ ಈಚೆಗೆ ಅಡಿಗೆ ಮಾಡುವುದನ್ನು ಹೇಳಿಕೊಡುತ್ತಿದ್ದಾರೆ; ತಾನು ಓದಿದ ಕಾಲದಲ್ಲಿ ಅಥವಾ ತಾನು ಓದಿದ ಸ್ಕೂಲಿನಲ್ಲಿ ಆ ಹಾಳು ಜನರು ಅದನ್ನೂ ಕಲಿಸಲಿಲ್ಲ ; ಗಂಡು ಹುಡುಗರಿಗೆ ಹೇಳಿಕೊಡುವಂತೆ ಆಲ್ಜಿಬ್ರಾ, ಟ್ರಿಗೊನೋಮೆಟ್ರಿ, ಜಾಮೆಟ್ರಿ, ಕ್ಯಾಲಿಕ್ಯುಲಸ್, ಅಸ್ಟ್ರಾನಮಿ ಇತ್ಯಾದಿ ಇತ್ಯಾದಿಗಳನ್ನು ತಲೆಯಲ್ಲಿ ತುಂಬಿದರು; ಅಷ್ಟು ಶಾಸ್ತ್ರಗಳಲ್ಲಿನ ಪಾಂಡಿತ್ಯವೂ ಸೇರಿ ಈ ಒಂದು ಹೊತ್ತು ಅಡಿಗೆ ಮಾಡುವ ವಿಧಾನವನ್ನು ತಿಳಿಸಬಾರದೆ ?

ತಾನು ಕಲಿತ ಶಾಸ್ತ್ರಗಳ, ಓದಿದ ಪುಸ್ತಕಗಳ ವಿಚಾರವು ಮನಸಿಗೆ ಬರುತ್ತಲೇ ಅಡಿಗೆ ಮಾಡುವ ವಿಧಾನವನ್ನು ತಿಳಿಸುವ ಪುಸ್ತಕವೂ ಇರಬೇಕಲ್ಲ ಎಂದು ಹೊಳೆಯಿತು. ಹೌದು; ಪಾಕಶಾಸ್ತ್ರವೆಂಬ ಪುಸ್ತಕವೊಂದಿದೆ. ಮತ್ತೀನ್ನೇನು ಕಷ್ಟ !

ಸಮಸ್ಯೆಯ ಪರಿಹಾರ ದೊರೆತ ಸಂತೋಷದಲ್ಲಿ ವಸಂತಳು ಮನೆಗೆ ಬೇಗಹಾಕಬೇಕೆಂಬುದನ್ನು ಸಹ ಯೋಚಿಸದೆ ಪೇಟೆಯಕಡೆ ಹೊರಟಳು. ಕಾರಿನಲ್ಲಿ ಬಂದಿದ್ದ ಈ ದೊರೆಸಾನಿ ಈಗ ಸಡಗರದಿಂದ ನಡೆದು ಹೋಗುತ್ತಿರುವುದನ್ನು ಕಂಡ ಜನ ಅವಳನ್ನು ತಮ್ಮ ಕಣ್ಣುಗಳಲ್ಲಿಟ್ಟು ಹೀರುತ್ತಿದ್ದರು. ಪಿಸು ಮಾತಾಡುತ್ತಿರುವಂತೆ, ಆದರೆ ಅವಳಿಗೆ ಕೇಳಿಸುವಹಾಗೆ 'ದೊರೆಸಾನಿ' ಎನ್ನುವರು ಕೆಲವರು, 'ನಮ್ಮ ನಟೇಶನ ಹೆಂಡತಿ' ಎನ್ನುವರು ಕೆಲವರು, 'ಚೆನ್ನಾಗಿದಾಳಯ್ಯ' ಎಂದು ಮೆಚ್ಚುವರು ಕೆಲವರು, ಅರ್ಥಗರ್ಭಿತವಾಗಿ ಕೆವ್ಮಿ ಅದರ ಪ್ರತಿ ಕ್ರಿಯೆಯನ್ನೆದುರು ನೋಡುತ್ತಿದ್ದ ಪುಂಡರು ಕೆಲವರು; ವಸಂತಳಿಗೆ ಹೆಜ್ಜೆಹೆಜ್ಜೆಗೂ ಮುಳ್ಳಿನಮೇಲೆ ನಡೆಯುತ್ತಿರುವಂತೆ ತೋರುತ್ತಿತ್ತು.

ಪುಸ್ತಕದ ಅಂಗಡಿಯನ್ನು ಹುಡುಕುವುದು ಅವಳು ಊಹಿಸಿದಷ್ಟು ಸುಲಭವಾಗಿರಲಿಲ್ಲ. ಯಾವ ಅಂಗಡಿಯಲ್ಲೂ ಗಾಜಿನ ಬೀರುಗಳಾಗಲಿ, ಷೆಲ್ಫುಗಳಾಗಲಿ ಇಲ್ಲ. ಎಲ್ಲಿ ನೋಡಿದರೂ ಕ್ಷೌರದ ಅಂಗಡಿಗಳು, ಹೋಟಲುಗಳು, ಜವಳಿ ಅಂಗಡಿಗಳು ಇವುಗಳಿಗೆ ಬೋರ್ಡುಗಳಿದ್ದುವೇ ಹೊರತು ಪುಸ್ತಕಗಳನ್ನು ಮಾರುವ ಸುಳಿವೇ ಕಾಣದು. ಕಣ್ಣಿಗೆಬಿದ್ದ ಒಂದೆರಡುಕಡೆ ಬರಿಯ ವರ್ತಮಾನ ಪತ್ರಗಳನ್ನು ಮಾರುತ್ತಿದ್ದರು. ಯಾರನ್ನಾದರೂ ಕೇಳಿ ತಿಳಿದುಕೊಳ್ಳುವುದಕ್ಕೆ ಸ್ವಾಭಿಮಾನ ಅಡ್ಡಬರುತ್ತಿತ್ತು. ಹಾಗೂ ಹೀಗೂ ಪರದಾಡಿ ಕಡೆಗೆ ಒಂದು ಪುಸ್ತಕದ ಅಂಗಡಿಯನ್ನೇ ಹೊಕ್ಕಳು. ಒಳ ಹೊಕ್ಕಮೇಲೆ ಅದು ಅಂಗಡಿಯೋ ಪುಸ್ತಕ ಭಂಡಾರವೋ ಎಂದು ಸಂದೇಹವಾಯಿತು. ಹಿಂದೆಂದೋ ಗಾಜನ್ನು ಹಾಕಿದ್ದು ಈಗ ಅದನ್ನು ಕಳೆದುಕೊಂಡಿದ್ದ ಬೀರುಗಳ ಅಪವಾದದಲ್ಲಿ ಅಸ್ತವ್ಯಸ್ತವಾಗಿ ಅಡಕಿದ್ದ ಪುಸ್ತಕಗಳ ರಾಶಿ, ಮೇಜಿನಮೇಲೆ, ಕಾಲುಮಣೆಗಳಮೇಲೆ ಧೂಳಿನ ಜೊತೆಯಲ್ಲಿ ಧೂಳಾಗಿ ಬೆರೆತಿದ್ದ ಕನ್ನಡ ಕೃತಿಗಳು ಅವಳಿಗೆ ಆ ಸಂದೇಹವನ್ನುಂಟುಮಾಡಿದುವು. ಅವುಗಳಲ್ಲಿ ವಸಂತಳ ಕಣ್ಣಿಗೆಬಿದ್ದ ಒಂದು ಕವಿತೆಯ ಸಂಗ್ರಹದ ದುಸ್ಥಿತಿ ಅವಳ ಮನವನ್ನು ಮುಟ್ಟಿತು. ಅದು ಕನ್ನಡ ಸಾಹಿತ್ಯದಲ್ಲಿ ಹೆಸರಾದ ಒಬ್ಬ ಕವಿಶ್ರೇಷ್ಠರ ಮೆಚ್ಚಿನ ಕಲಾಕೃತಿ. ತಮ್ಮ ಕವಿತೆಯ ಔನ್ನತ್ಯಕ್ಕೆ ತಕ್ಕುದಾಗಿ ಪುಸ್ತಕವು ಇರಬೇಕೆಂಬ ಇಚ್ಛೆಯಿಂದ ಅವರು ಪುಸ್ತಕಕ್ಕಾಗಿ

ಠಕ್ಕ ಕಾಗದವನ್ನು ಆರಿಸುವುದರಲ್ಲಿ, ಕವಿತೆಗಳನ್ನು ಅಂದವಾಗಿ ಒಂದೂ ಮುದ್ರಣ ದೋಷವಿಲ್ಲದೆ ಒಂದಾದರೂ ಒಡಕು ಅಕ್ಷರವನ್ನು ಜೋಡಿಸದೆ ಮುದ್ರಿಸುವುದರಲ್ಲಿ ಪಟ್ಟ ಶ್ರಮವನ್ನು ವಸಂತಳು ಕೇಳಿದ್ದಳು. ಆ ಪುಸ್ತಕ ದಲ್ಲಿನ ಮುಖಚಿತ್ರವನ್ನು ಅವರು ಜರ್ಮನಿ ದೇಶದಿಂದ ಮುದ್ರಿಸಿ ತರಿಸಿದ್ದ ರಂತೆ. ಮುಟ್ಟಿದರೆ ಎಲ್ಲಿ ಮಾಸುವುದೋ ಎಂದು ಅವರು ನೋಡಿಕೊಂಡ ಗ್ರಂಥ ಇಲ್ಲಿ ಧೂಳಿನ ಅಲೆಗಳಲ್ಲಿ ಹೊರಳುತ್ತಿತ್ತು. ಮೂಲೆಯಲ್ಲಿ ಹಳೆಯ ದಾಗಿದ್ದ-ಬಹುಶಃ ಮುರಿದೂಇದ್ದ-ಒಂದು ಬೆತ್ತದ ಕುರ್ಚಿಯ ಮೇಲೆ ನಡುಪ್ರಾಯ ಕಳೆದ ಒಬ್ಬಾತ ಒಂದು ಪತ್ರಿಕೆಯನ್ನೋದುತ್ತ ಕುಳಿತಿದ್ದ. ಮೂರುದಿನಕ್ಕೊಮ್ಮೆ ಊಟ ಮಾಡುವವನಂತೆ ತೋರುತ್ತಿದ್ದ ಇನ್ನೊಬ್ಬನು ಮೇಜಿನ ಬಳಿನಿಂತು ಯಾರೊಡನೆಯೋ 'ಕೋಣ–ಮಣ' ಎಂದು ಮಾತಾಡು ತ್ತಿದ್ದ. ಮೂರು ನಾಲ್ಕು ಮಂದಿ–ಬಹುಶಃ ಗಿರಾಕಿಗಳಿರಬಹುದು, ಅವರು–ಪುಸ್ತಕಗಳ ಬೀರುಗಳ ಬಳಿನಿಂತು ಕೈಯಲ್ಲಿ ಒಂದೊಂದು ಪುಸ್ತಕ ವನ್ನು ಹಿಡಿದುಕೊಂಡು ಓದುತ್ತಿದ್ದರು. ವಸಂತಳು ಒಳಕ್ಕೆಹೋಗಿ ಐದು ನಿಮಿಷವಾದರೂ 'ನೀನಾರು, ಏಕೆಬಂದೆ' ಎಂದು ಯಾರೂ ಕೇಳುವಂತೆಯೇ ತೋರಲಿಲ್ಲ.

ಅಲ್ಲಿದ್ದ ಐದಾರು ಜನರಲ್ಲಿ ಅಂಗಡಿ ಮಾಲೀಕರು ಯಾರೆಂಬುದೇ ತಿಳಿಯುವಹಾಗಿರಲಿಲ್ಲ. ಅಂತೂ ಪ್ರಯತ್ನಮಾಡಿ ಮೇಜಿನಬಳಿ ನಿಂತಿದ್ದ ಬರಗಾಲದ ಭೀಮನನ್ನು ಮಾತಾಡಿಸಿ ಅವನೂ ಅಂಗಡಿಯಲ್ಲಿನ ನೌಕರನೇ ಎಂದು ತಿಳಿದಮೇಲೆ ತನಗೆ ಬೇಕಾಗಿದ್ದ ಪಾಕಶಾಸ್ತ್ರದ ಪುಸ್ತಕವಿದೆಯೆ ಎಂದು ಕೇಳಿದಳು. ಅಂಗಡಿಯಲ್ಲಿದ್ದವರೆಲ್ಲ ಏನೋ ಒಂದು ವಿಚಿತ್ರವನ್ನು ಕೇಳಿ ದವರಂತೆ ಇವಳಕಡೆ ನೋಡತೊಡಗಿದರು; ನೌಕರನಿಗಾದರೂ ಅದು ತಮ್ಮಲ್ಲಿ ಇದೆಯೆ ಇಲ್ಲವೆ ಎಂದು ತಿಳಿಯದೋ ಅಥವಾ ಅಲ್ಲಿನ ಸಂಪ್ರ ದಾಯವೇ ಹಾಗೋ, ಅಂತೂ ಯಜಮಾನನ ಹತ್ತಿರಹೋಗಿ ಅದನ್ನು ವರದಿ ಮಾಡಿದ. ಮಾಲೀಕನು ಪತ್ರಿಕೆಯನ್ನು ಒಂದು ಕಡೆಗೆ ಸರಿಸಿ ಮೂಗಿನ ಮೇಲಿದ್ದ ಚಾಲೀಸು ಕನ್ನಡಕವನ್ನು ಕೈಗೆ ತೆಗೆದುಕೊಂಡು ತುಂಬು ಕಣ್ಣಿನಿಂದ ಗಿರಾಕಿಯನ್ನು ನೋಡಿದ. ಇದು ಕೊಳ್ಳುವ ಗಿರಾಕಿ ಎಂಬ ಭರವಸೆ ಅವನಿಗೆ ಬಂತೆಂದು ಕಾಣುತ್ತದೆ. ನೌಕರನಿಗೆ ಆ ಪುಸ್ತಕವಿರ

ಬಹುದಾದ ಸ್ಥಳವನ್ನು ನಿರ್ದೇಶಿಸಿ 'ಅಲ್ಲಿದೆಯೇನೋ ನೋಡು' ಎಂದ. ವಸಂತಳ ಪುಣ್ಯಕ್ಕೆ ಒಂದು ಪ್ರತಿ ಇತ್ತು; ಎರಡು ಪ್ರತಿಗಳ ಬೆಲೆಯನ್ನು ಆ ಒಂದಕ್ಕೆ ಕೊಟ್ಟು ವಸಂತಾದೇವಿಯು ದೊಡ್ಡದೊಂದು ಕೆಲಸವನ್ನು ಸಾಧಿಸಿದ ಹೆಮ್ಮೆಯಿಂದ ಮನೆಗೆ ಹಿಂತಿರುಗಿದಳು.

ಮನೆಯಹತ್ತಿರ ಬರುತ್ತಿದ್ದಹಾಗೇ ತಾನು ಬಾಗಿಲಿಗೆ ಬೀಗಹಾಕದೆ ಬಂದುದು ನೆನಪಾಗಿ ಅದುವರೆಗೆ ಏನಾಗಿದೆಯೋ ಎಂಬ ಭಯಹುಟ್ಟಿತು. ಬೆಂಗಳೂರು ಪೇಟೆಯಾಗಿದ್ದರೆ ಅವಳು ಹಿಂತಿರುಗಿ ಬರುವುದರೊಳಗಾಗಿ ಆ ಪುಸ್ತುಕದ ಉಪಯೋಗಕ್ಕೆ ಎಡೆಯಿರುತ್ತಿರಲಿಲ್ಲ. ಆದರೆ ಅದು ಕೂಲಿಯವರ ಕೇರಿ; ಅದು ಕೂಲಿಯವನ ಮನೆ. ಕಳ್ಳತನಕ್ಕೆ ಪ್ರೇರಣೆಯಿಲ್ಲ, ಆಕರ್ಷಣೆಯಿಲ್ಲ.

— ೨೦ —

ಪಾಕಶಾಸ್ತ್ರದ ಪುಸ್ತಕವನ್ನು ತಂದ ಮಾತ್ರಕ್ಕೇ ವಸಂತಾದೇವಿಯ ಮುಂದಿದ್ದ ಸಮಸ್ಯೆ ಬಗೆಹರಿಯಲಿಲ್ಲ. ಅವಳು ಹಿಂತಿರುಗಿಬರುವ ವೇಳೆಗಾಗಲೇ ಹತ್ತುಗಂಟೆಯಾಗಿತ್ತು; ಇನ್ನು ಎರಡು ಗಂಟೆ-ಎರಡೇಗಂಟೆ ಅವಕಾಶವಿರುವುದು. ಅಷ್ಟು ಅವಧಿಯೊಳಗಾಗಿ ಏನು ಮಾಡುವುದು! ಬೆಳಗ್ಗೆ ಹೊತ್ತಿಸಿದ್ದ ಒಲೆ ಆರಿಹೋಗಿತ್ತು; ಈಗ ಅದನ್ನು ಹೊತ್ತಿಸುವುದು ಹೇಗೆ? ಪುಸ್ತಕದಲ್ಲಿ ಅದನ್ನು ಕೊಟ್ಟೇಇರಬೇಕಲ್ಲ! ಒಲೆ ಹೊತ್ತಿಸುವ ಕ್ರಮವನ್ನೇ ತಿಳಿಸದೆ ಉಂಟೆ ಎಂಬ ನಂಬಿಕೆಯಿಂದ ಪುಸ್ತಕವನ್ನೊಮ್ಮೆ ಅವಲೋಕಿಸಿದಳು. ಅಡಿಗೆ ಮಾಡುವ ವಿಧಾನವನ್ನು ತಿಳಿಸಿದ ಆ ಗ್ರಂಥಕರ್ತ ತನ್ನ ವಿದ್ಯಾರ್ಥಿಗಳಿಗೆ ಒಲೆಹೊತ್ತಿಸುವ ಪಾಠ ಮುಗಿದಿರುತ್ತದೆಂದು ತಿಳಿದನೋ ಏನೋ. ವಸಂತಳಿಗೆ ಅದು ಮೊದಲನೆಯ ನಿರಾಸೆ ಹುಟ್ಟಿಸಿತು. ಕಟ್ಟಿಗೆಯನ್ನು ಒಲೆಯಲ್ಲಿ ತುರುಕಿ ಬೆಂಕಿಕಡ್ಡಿ ಗೀರಿಡಲು ಪ್ರಾರಂಭಿಸಿದಳು. ಕಡ್ಡಿ ಉರಿಯುವಷ್ಟು ಹೊತ್ತು ಬೆಳಕಾಗಿದ್ದು ಹಿಂದೆಯೇ ಅದು ಆರಿಹೋಗುತ್ತಿತ್ತು. ಅಡಿಗೆ ಮಾಡುವುದರಲ್ಲಿನ ಮೊದಲನೆಯ ಪಾಠವೇ ಬಹು ಕಷ್ಟವಾಗಿತ್ತು. ಆದರೂ ಧೈರ್ಯಗುಂದುವ ಜೀವವಲ್ಲ ಅದು............ರಾಬಿನ್ಸನ್ ಕ್ರೂಸೋ ನಿರ್ಜನ ದ್ವೀಪದಲ್ಲಿ ಏಕಾಂಗಿಯಾಗಿ ಎಸೆಯಲ್ಪಟ್ಟಾಗ ಏನೇನು ಕಷ್ಟಗಳ

ನ್ನೆದುರಿಸಿದ್ದನೆಂಬುದನ್ನು ಓದಿದ್ದ ಅವಳು ಇಷ್ಟು ಸ್ವಲ್ಪಕ್ಕೆ ಎದೆಗುಂದು ತ್ತಾಳೆಯೇ ? ಒಂದು ಬೆಂಕಿ ಪಟ್ಟಣದಲ್ಲಿದ್ದ ಪೂರಾ ಅರವತ್ತು ಕಡ್ಡಿಗಳನ್ನೂ ಗೀಚಿ ಒಲೆ ತಣಕು-ಮಣಕು ಎನ್ನುವಂತೆ ಮಾಡಿದಳು.

ಇನ್ನು ಸಾರಿಗೆ ಅಥವಾ ಹುಳಿಗೆ ಎಸರಿಡಬೇಕು. ಎಷ್ಟು ನೀರಿಡಬೇಕು ? ಪುಸ್ತಕವನ್ನು ನೋಡಿದಳು. ತಾವಿರುವುದು ಮೂರು ಜನ ; ಒಬ್ಬರಿಗೆ ಎರಡು ಲೋಟ, ಎಂದರೆ ಒಟ್ಟು ಆರುಲೋಟ ನೀರು. ಸರಿ, ನೀರಿಟ್ಟಾಯಿತು. ಅದು ಸುಮಾರಾಗಿ ಕಾದು ಹಬೆ ಬಂದಮೇಲೆ ಆರುತೊಲ ಬೇಳೆಯನ್ನು ಅದರಲ್ಲಿ ಹಾಕಬೇಕು. ಆರು ತೊಲ ಎಂದರೆ ಎಷ್ಟಿರುತ್ತದೋ ತಿಳಿಯದಲ್ಲ ! ಅವರ ಮನೆಯಲ್ಲಿ ತಕ್ಕಡಿ ತೂಕದ ಬಟ್ಟುಗಳಿವೆಯೇನೋ ಎಂದು ಹುಡುಕಿ ನೋಡಿದಳು ; ಎಲ್ಲೂ ಕಾಣಲಿಲ್ಲ. ಈಗೇನು ಮಾಡುವುದು ? ಹುಣಸೆಹಣ್ಣು, ಮೆಣಸಿನಪುಡಿ, ಉಪ್ಪು ಎಲ್ಲಾ ತೂಕಮಾಡಿಯೇ ಹಾಕಬೇಕಾಗಿದೆ. ಅಂಗಡಿಗೆ ಹೋಗಿ ಕೊಂಡುತರಲೆ ? ಅದು ನಟೇಶನ ಕಣ್ಣಿಗೆ ಬಿದ್ದರೆ ತನ್ನನ್ನು ಬಯ್ಯಬಹುದು. ಇಷ್ಟು ದಿನವೂ ಇವರು ಹೇಗೆ ಅಡಿಗೆ ಮಾಡು ತ್ತಿರಬಹುದು ? ಆ ಪದಾರ್ಥಗಳನ್ನು ಅಂಗಡಿಗೇ ಕೊಂಡೊಯ್ದು ತೂಕ ಮಾಡಿಸಿಕೊಂಡು ಬರಲೆ ? ಅದು ಸರಿಯೆಂದು ತೋರುವುದಿಲ್ಲ. ತನ್ನ ಅಸಹಾಯ ಕತೆ ಊರ ಮಾತಾಗಿಬಿಡುತ್ತದೆ.

ಇಷ್ಟು ಯೋಚಿಸುತ್ತಿರುವಲ್ಲಿ ಒಲೆ ಮತ್ತೆ ಆರಿಹೋಯಿತು. ಅದನ್ನು ಊದಲು ಮತ್ತೆ ಪ್ರಯತ್ನಿಸಿದಳು ; ಹೊಗೆ ಕಣ್ಣು ಮೂಗುಗಳಲ್ಲಿ ತುಂಬಿ ಕೊಂಡಿತು ; ಬೂದಿ ಮುಖವನ್ನು ತಲೆಯನ್ನು ಮುಚ್ಚಿಕೊಂಡಿತು. ಮುಖ ವನ್ನು ಹಿಂದಕ್ಕೆ ತೆಗೆದುಕೊಂಡು ಕಣ್ಣುಗಳನ್ನುಜ್ಜಿಕೊಂಡು ಮತ್ತೆ ಒಲೆ ಯಊದಲು ಪ್ರಯತ್ನಿಸಿದಳು. ಅಪರಿಚಯಸ್ಥಳೆಂದೋ ಏನೋ ಅದು ಬಹಳ ಅಸಹಕಾರ ತೋರಿಸುತ್ತಿತ್ತು.

ಸ್ಕೂಲಿನಿಂದ ಹಿಂತಿರುಗಿದ ಇಂದಿರೆಯು ಅತ್ತಿಗೆಯ ಅವಸ್ಥೆಯನ್ನು ನೋಡುತ್ತ ಎರಡು ನಿಮಿಷ ಬಾಗಿಲಬಳಿ ನಿಂತಿದ್ದಳು. ಕೆದರಿದ್ದ ಮುಂಗುರುಳು, ಕೆಂಪೇರಿದ್ದ ಕೆನ್ನೆಗಳು, ಆಯಾಸದಿಂದ ಅಲುಗುತ್ತಿದ್ದ ತುಟಿಗಳು ಸಹಜ ಸುಂದರಿಯಾಗಿದ್ದ ದೇವಿಯ ಲಾವಣ್ಯವನ್ನು ಇಮ್ಮಡಿಸಿದ್ದುವು. ಇಂದಿರೆಯು ತನ್ನ ಪುಸ್ತಕಗಳ ಚೀಲವನ್ನು ಒತ್ತಟ್ಟಿಗೆಸೆದು ಓಡಿಬಂದು ಕುಳಿತಿದ್ದ

ಅತ್ತಿಗೆಯ ಕೊರಳನ್ನು ತಬ್ಬಿಕೊಂಡು ಒಂದು ಮಾತಿಲ್ಲದೆ ಅವಳ ಕೆನ್ನೆ ಕುತ್ತಿಗೆ ಹಣೆಗಳ ಮೇಲೆ ಒಂದೇ ಸಮನೆ ಮುತ್ತುಗಳ ಮಳೆಗೆರೆದುಬಿಟ್ಟಳು. ಅಪೂರ್ವವಾದ ಈ ಅನುಭವವು ವಸಂತಾದೇವಿಯ ಮೈ ಕಲುಕಿತು; ಹೃದಯ ತಲದಲ್ಲಿ ಹುದುಗಿದ್ದ ಅವ್ಯಕ್ತ ಆನಂದದ ಅಲೆಯು ಉಕ್ಕಿಬಂತು. ತಾನೇನು ಮಾಡುತ್ತಿದ್ದೇನೆಂಬುದರ ಅರಿವಾಗುವುದರೊಳಗಾಗಿ ಇಂದಿರೆಯ ತೋಳ ತೆಕ್ಕೆಯಿಂದ ಬಿಡಿಸಿಕೊಂಡು ಅವಳ ಮುಖವನ್ನು ತನ್ನ ಎರಡು ಕೈಗಳಲ್ಲೂ ಹಿಡಿದು ಪ್ರತಿಚುಂಬನ ಕೊಟ್ಟಳು. ಸರಳವಾದ ಎರಡು ಜೀವಗಳ ನಿಷ್ಕಳಂಕ ಪ್ರೇಮ ಹೀಗೆ ಹೊರಹೊಮ್ಮಿ ಮನಸಿಗೆ ಸಮಾಧಾನವನ್ನು ಕೊಟ್ಟನಂತರ ವಸಂತಾದೇವಿಯು ಏನೋ ತಪ್ಪು ಮಾಡಿದವಳಂತೆ ಆದರೆ ಅದನ್ನು ಒಪ್ಪಿ ಕೊಳ್ಳದವಳಂತೆ ನಗುತ್ತ ಮಾತೆತ್ತಿ

'ಆಗಲೇ ಸ್ಕೂಲು ಬಿಡುವ ಹೊತ್ತಾಯಿತೆ ಇಂದಿರಾ?' ಎಂದಳು.

'ನಾನು ಸ್ವಲ್ಪ ಮುಂದಾಗಿಯೇ ಬಂದೆ ಅತ್ತಿಗೆ; ನನಗೇಕೋ ಅಲ್ಲಿ ಪಾಠಗಳೇ ತೋಚಲಿಲ್ಲ. ಅಣ್ಣನಂಥವನು ಈ ದಿನ ಮಧ್ಯಾಹ್ನಕ್ಕೇ ಬಂದು ಬಿಡುತ್ತಾನೆ!' ಎಂದು ಇಂದಿರೆ ಹಾಸ್ಯ ಮಾಡಿದಳು.

'ಎಂದರೆ ನಿಮ್ಮ ಅಣ್ಣ ಪ್ರತಿದಿನವೂ ಎಷ್ಟುಹೊತ್ತಿಗೆ ಬರುತ್ತಾರೆ?'

'ಅವನ ಡ್ಯೂಟಿ ಪ್ರಕಾರ ಇರುತ್ತೆ ಅತ್ತಿಗೆ. ಒಂದೊಂದುಸಲ ನಾಲ್ಕು ಗಂಟೆಗೇ ಬರುತ್ತಾನೆ, ಕೆಲವು ದಿನ ರಾತ್ರಿ ಹನ್ನೆರಡು ಗಂಟೆಗೆ ಹೋಗಿ ಬೆಳಗ್ಗೆ ಎಂಟು ಗಂಟೆಗೆ ಬರುತ್ತಾನೆ. ಈ ದಿನ ಸಂಜೆ ನಾಲ್ಕಕ್ಕೆ ಬರಬೇಕಾ ಗಿತ್ತು, ನೀನು ಬಂದಿದೀಯಲ್ಲಾ ಅಂತ ಕೆಲಸಕ್ಕೆ ಚಕ್ಕರ್ ಹಾಕುತಿದ್ದಾನೆ.'

ವಸಂತಳು ಕೈ ಗಡಿಯಾರದಕಡೆ ನೋಡಿಕೊಂಡು 'ಏನು ಗತಿ ಇಂದಿರಾ, ಇನ್ನೂ ಅಡಿಗೆಯೇ ಆಗಲಿಲ್ಲ' ಎಂದಳು.

ಇಂದಿರೆ ನಗುತ್ತ 'ಪುಸ್ತಕ ನೋಡಿಕೊಂಡು ಅಡಿಗೆ ಮಾಡುವುದ ಕ್ಕಾಗುತ್ತೆಯೆ ಅತ್ತಿಗೆ? ಬಿಡಿ, ಇತ್ತಕಡೆ ಬನ್ನಿ' ಎಂದು ತಾನು ಹೋಗಿ ಒಲೆಯಮುಂದೆ ಕುಳಿತಳು. ತಂಟೆಯಿಲ್ಲದೆ ಒಲೆ ಹೊತ್ತಿಕೊಂಡಿತು.

ಸ್ವಲ್ಪವೂ ಶ್ರಮಪಡದೆ ನಗು ನಗುತ್ತ ಆ ಮಾತು ಈ ಮಾತು ಆಡುತ್ತ ಅತ್ತಿಗೆಯನ್ನು ಹಾಸ್ಯಮಾಡಿ ನಗಿಸುತ್ತ ಅದೊಂದು ಆಟವೆಂಬಂತೆ ಇಂದಿರೆಯು ಅಡಿಗೆ ಮಾಡುತ್ತಿರುವುದನ್ನು ಕಂಡು ವಸಂತಾದೇವಿಯು ಬೆರಗಾದಳು.

ಸೀರೆಯುಡುವುದಕ್ಕೆ ಸರಿಯಾಗಿ ಬರದ ಹಾಲು ಹಸುಳೆ ಮನೆ ಕೆಲಸದಲ್ಲಿ ಎಷ್ಟು ನುರಿತಿದ್ದಾಳೆ! ಸಭೆಗಳಲ್ಲಿ ತಾನು ಭಾಷಣ ಮಾಡುತ್ತ ಸ್ತ್ರೀಯರ ಹಕ್ಕುಬಾಧ್ಯತೆಗಳಿಗಾಗಿ ಪುರುಷರ ಸರಿಸಮಾನರಾಗಿ ತಾವು ಹೊಡೆದಾಡ ಬೇಕೆಂದು, ಹೆಣ್ಣುಜೀವ ಗಂಡಿನ ಸಂಸಾರದಲ್ಲಿ ಅಡಿಗೆ ಕೆಲಸಮಾಡಿಕೊಂಡಿ ರುವ ದಾಸಿಯಾಗಿರದೆ ತಾನೂ ಅವನಿಗೆ ಸಮನಾಗಿರಬೇಕೆಂದು ವಾದ ಮಾಡಿದಾಗ ಆಡುತ್ತಿದ್ದ ಮಾತುಗಳು, ತೋರುತ್ತಿದ್ದ ಮನೋಭಾವ ಅವಳ ನೆನಪಿಗೆ ಬಂದುವು. ಇಂದಿರೆಯು ಇಲ್ಲಿ ಅಡಿಗೆ ಮಾಡುತ್ತಿರುವುದು ಯಾರ ದಾಸಿಯಾಗಿಯೂ ಅಲ್ಲ. ಗಂಡುಜೀವ ದುಡಿದು ತಂದುದನ್ನು ಅವನೊಡನೆ ಜೀವನದಲ್ಲಿ ಸಹಕರಿಸುತ್ತಿರುವ ಹೆಣ್ಣುಜೀವ—ಮಾತೃದೇವಿ, ಗೃಹಿಣಿ, ಸಹೋದರಿ—ಒಪ್ಪಮಾಡಿ ಉಣ್ಣಲು ಅಣಿಮಾಡಿ ನೀಡುತ್ತಿದೆ. ಇವನು ತರದೆ ಅವಳು ಮಾಡಲಿಲ್ಲ, ಇವಳು ಮಾಡದೆ ಅವನು ಉಣುವಂತಿಲ್ಲ. ಇವರಲ್ಲಿ ಯಾರು ಯಾರಿಗೆ ದಾಸರು ? ಗಂಡಿಗಿಂತ ತಾನೇನು ಕಡಿಮೆಯೆಂದು ತಿಳಿದ ಪ್ರೌಢೆ, ವಿದ್ಯಾವತಿ, ಭಾಗ್ಯವತಿ ಅವನಿಗಾಗಿ ಹೋಗಲಿ ತನ್ನ ಹೊಟ್ಟೆ ಗಾಗಿಯಾದರೂ ಒಂದು ಹೊತ್ತು ಅನ್ನಮಾಡಿಕೊಳ್ಳಲಾರದೆ ಹೋದೆ.

ಗಂಡು ಹೆಣ್ಣಿನ ಜೀವನ ವೀಣೆಯ ಬುರುಡೆ ತಂತಿಗಳ ಸಂಬಂಧದಂತೆ; ತಂತಿಯಿಲ್ಲದೆ ಬುರುಡೆ ಹಾಡಲಾರದು, ಬುರುಡೆಯಿಲ್ಲದೆ ತಂತಿ ನುಡಿಯ ಲಾರದು. ವಿಶ್ವದೊಡನೆ ಇದಕ್ಕೆ ನಿಕಟ ಸಂಬಂಧ. ಜೀವನದ ವೀಣೆಯನ್ನು ನುಡಿಸುವ ವೈಣಿಕನು ಶ್ರುತಿಮಾಡಿ ಲಯಬದ್ಧವಾಗಿ ತಂತಿಯನ್ನು ನುಡಿಸಿ ದಾಗ ಅದು ಮಧುರಗಾನವಾಗುತ್ತದೆ. ಪ್ರಕೃತಿ ದೇವಿಯ ಜೀವದುಸಿರಾದ ಗಾಳಿಯು ಆ ಗಾನವನ್ನೊಯ್ದು ರಸಿಕನ ಕಿವಿಗೆ ಮುಟ್ಟಿಸಿ ಮನಸಿಗೆ ಉಲ್ಲಾಸ ವನ್ನುಂಟುಮಾಡುತ್ತದೆ. ವೀಣೆಯಿದ್ದು ವೈಣಿಕನೆ ಇಲ್ಲದಿದ್ದರೆ! ವೀಣೆಯೂ ವೈಣಿಕನೂ ಇದ್ದು ಅವನು ನುಡಿಸಿದ ಗಾನವನ್ನೊಯ್ಯಲು ಗಾಳಿ ಇಲ್ಲದಿದ್ದರೆ! ಎಲ್ಲವೂ ಇದ್ದರೂ ಕೇಳುವವನಿಗೆ ಕಿವಿಯಿಲ್ಲದಿದ್ದರೆ! ಇವುಗಳಲ್ಲಿ ಹೆಚ್ಚಾವುದು, ಕಡಿಮೆಯಾವುದು, ಯಾವುದು ಯಾವುದಕ್ಕೆ ಅಧೀನ!'

ಮೊದಲ ಅಡಿಗೆಯ ಅನುಭವ ವಸಂತಾದೇವಿಯ ವಿಚಾರಲಹರಿ ಯನ್ನು ಹೊಡೆದೆಬ್ಬಿಸಿತ್ತು. ಅಡಿಗೆ ಮಾಡುವುದರಲ್ಲೂ ಒಂದು ಚಾತುರ್ಯ- ಕುಶಲತೆ ಇವೆಯೆಂದು ಅವಳಿಗೆ ತೋರಿತು. ತನ್ನನ್ನು ಸಾಕಿ ಬೆಳೆಸಿದ ಗೌರಮ್ಮ

ಹೇಳುತ್ತಿದ್ದ ಮಾತು ಒಂದು ಅವಳ ನೆನಪಿಗೆ ಬಂತು. 'ಅಡಿಗೆಗೆ ರುಚಿ ಕೊಡುವುದು ಅದಕ್ಕೆ ಉಪಯೋಗಿಸುವ ಪದಾರ್ಥಗಳಿಗಿಂತ ಹೆಚ್ಚಾಗಿ ಮಾಡಿ ಬಡಿಸುವವರ ಮನಸ್ಸು' ಎಂದು ಆಕೆ ಹೇಳುತ್ತಿದ್ದಳು. ಪಾಕಶಾಸ್ತ್ರದಲ್ಲಿ ಸೂತ್ರ ಹಾಕಿಕೊಟ್ಟಿರುವಂತೆ ಇಷ್ಟಿಷ್ಟು ಪದಾರ್ಥಗಳನ್ನೇ ಉಪಯೋಗಿಸ ಬೇಕೆಂದಾದರೆ ಎಲ್ಲರೂ ಮಾಡುವ ಅಡಿಗೆಯ ರುಚಿಯೂ ಒಂದೇ ಆಗಿರಬೇಕು. ಅದು ಹಾಗಿರುವುದಿಲ್ಲ; ಏಕೆ ? ಇದರ ಮರ್ಮವನ್ನು ತಾನು ತಿಳಿಯಬೇಕು. ಸಂಸಾರದ ಗುಟ್ಟು ತಕ್ಕಮಟ್ಟಿಗೆ ಇದರಲ್ಲಿರುವಂತೆ ಕಾಣುತ್ತದೆ. ತನಗೆ ಸಿಕ್ಕಿರುವ ಈ ಒಂದು ತಿಂಗಳ ಅವಧಿಯಲ್ಲಿ ಈ ಗುಟ್ಟನ್ನು ತಾನು ಗ್ರಹಿಸ ಬೇಕು.

ನಟೇಶನು ಬರುವುದಕ್ಕೆ ಇನ್ನೂ ಕಾಲುಗಂಟೆಯ ಅವಧಿ ಇರುವಾಗಲೇ ಅಡಿಗೆ ಸಿದ್ಧವಾಗಿಬಿಟ್ಟಿತು. ಇಂದಿರೆಯು ಅತ್ತಿಗೆಗೆ ಒಂದು ಎಚ್ಚರಿಕೆ ಕೊಟ್ಟಳು; ತನ್ನ ಅಣ್ಣನು ಕೇಳಿದರೆ ಅಡಿಗೆಯನ್ನು ಇಂದಿರೆ ಮಾಡಿದಳೆಂದು ಹೇಳ ಕೂಡದು; ತನ್ನ ಹೆಂಡತಿ ಮಾಡಲಿಲ್ಲವೆಂದು ತಿಳಿದರೆ ಅವನಿಗೆ ಕೋಪ ಬರುತ್ತದೆ. ತಮ್ಮ ಮುಂದಿದ್ದ ಆ ಹದಿನೈದು ನಿಮಿಷಗಳಲ್ಲಿ ಮನೆಯ ಕಸ ಗುಡಿಸಿ, ನೀರು ಚಿಮುಕಿಸಿ ಎಲ್ಲವನ್ನೂ ಸಜ್ಜುಗೊಳಿಸಿ ಯಜಮಾನನ ನಿರೀಕ್ಷೆ ಯಲ್ಲಿ ಅತ್ತಿಗೆ ನಾದಿನಿಯರು ಕುಳಿತುಕೊಂಡರು.

ಗಣಿಯಿಂದ ದಣಿದುಬಂದ ನಟೇಶನಿಗೆ ಮನೆಯೆಲ್ಲ ಬೆಳಕಾಗಿರುವಂತೆ ಕಂಡಿತು. ಗೃಹಿಣಿಯಿಲ್ಲದೆ ನಿಸ್ತೇಜವಾಗಿದ್ದ ತನ್ನ ಮನೆಗೆ ಇಂದು ಜೀವಕಳೆ ಬಂದಿತ್ತು. ಗಣಿಯಲ್ಲಿ ಕೆಲಸ ಮಾಡುತ್ತಿದ್ದಷ್ಟು ಹೊತ್ತೂ ಅವನ ಮನಸ್ಸು ಮನೆಯ ಕಡೆಗೆ ಎಳೆಯುತ್ತಿತ್ತು. ಅಗೋಚರವಾದ, ಅವ್ಯಕ್ತವಾದ, ಅನಿವಾರ್ಯವಾದ ಯಾವುದೋ ಒಂದು ಶಕ್ತಿಯು ತನ್ನ ಮೇಲೆ ಪ್ರಭಾವ ಬೀರುತ್ತಿರುವಂತೆ ಅವನಿಗೆ ತೋರುತಿತ್ತು. ಅವನು ಅಂದು ಕೆಲಸಕ್ಕೆ ಹೋದಾಗ ಬಾಗಿಲು ಕಾಯುವವರು ಮೊದಲುಗೊಂಡು ಇನ್ಸ್ಪೆಕ್ಟರವರೆಗೆ ಇವನ ವಿಷಯದಲ್ಲಿ ನಡೆದುಕೊಂಡ ನಡವಳಿಕೆಯಲ್ಲಿ ಏನೋ ವಿಶೇಷ ಇವನಿಗೆ ಕಂಡಿತು. ಶ್ರೀಮಂತಳಾದ ವಸಂತಾದೇವಿಯನ್ನು ಇವನು ಮದುವೆ ಯಾಗಿರುವ ಸಂಗತಿ ಪತ್ರಿಕೆಗಳಲ್ಲಿ ಬಂದು ಅವರಿಗೆಲ್ಲಾ ಅದುವರೆಗೆ ತಿಳಿದಿತ್ತು. ಆ ದಿನ ಅಧಿಕಾರಿಗಳು ತನಗೆ ಮರ್ಯಾದೆ ತೋರಿಸುತ್ತಿದ್ದುದು ತನಗೆ

ದೊರೆತಿದ್ದ ಅಥವಾ ದೊರೆಯಬಹುದಾಗಿದ್ದ ಹಣದ ಬೆಲೆಯಿಂದ. ಆ ಹಣದ ಪ್ರಭಾವವಿನ್ನೆಷ್ಟಿರಬಹುದೆಂದು ನಟೇಶನು ತನ್ನಲ್ಲಿಯೇ ಒಂದೆರಡು ಸಲ ತಿರಸ್ಕಾರ ಭಾವದಿಂದ ನಕ್ಕಿದ್ದ. ಎಲ್ಲ ಜನರೂ ಬೆಟ್ಟದಷ್ಟು ಬೆಲೆ ಕೊಡುತ್ತಿರುವ ಆ ಹಣದ ರಾಶಿಯ ಒಡತಿಯನ್ನು ತಾನು ಮನೆಯ ಊಳಿಗಕ್ಕೆ ನೇಮಿಸಿದ್ದೇನೆ. ಅವಳು ಅದಕ್ಕೆ ಒಪ್ಪಿದಳೇಕೆ ? ಅವಳ ವಿಚಾರ ನಟೇಶನಿಗೆ ಇನ್ನೂ ಒಂದು ಸಮಸ್ಯೆಯಾಗಿಯೇ ಉಳಿದಿತ್ತು. ಸಾವನ್ನಪ್ಪಿದ್ದ ತನ್ನನ್ನು ಮದುವೆಯಾದಳು, ಬದುಕಿಬಂದು ಕಂಡಾಗ ನೀನಾರೋ ತಿಳಿಯದೆಂದು ಮನೆಯಿಂದಾಚೆ ನೂಕಿಸಿದಳು ; ಪುನಃ ಈ ದಿನ ಬಂದು ಮನೆಗೆ ಬಾರೆಂದು ಕರೆದಳು, ತಾನು ಬರುವುದಿಲ್ಲವೆಂದರೆ ಇಲ್ಲಿಯೇ ಇರುವೆನೆಂದು ಹಟಮಾಡಿ ನಿಂತಳು. ನಿಜವಾಗಿ ಅವಳು ಮನೆಯ ಕೆಲಸಗಳನ್ನು ಮಾಡಿಕೊಂಡು ಇರುತ್ತಾಳೆಯೆ ? ಅಥವಾ ಇದೊಂದು ಹುಸಿ ನಾಟಕವೊ ! ಗಣಿಯಿಂದ ತಾನು ಮನೆಗೆ ಬರುವವೇಳೆಗೆ ಬಹುಶಃ ಅವಳು ಬೆಂಗಳೂರಿಗೆ ಹೋಗಿದ್ದರೂ ಆಶ್ಚರ್ಯವಿಲ್ಲ. ಹೀಗೆಂದು ಯೋಚಿಸುತ್ತ ಬಂದ ನಟೇಶನಿಗೆ ತನ್ನ ಹೆಂಡತಿಯು ಇನ್ನೂ ಮನೆಯಲ್ಲೇ ಇರುವುದಲ್ಲದೆ ಅಡಿಗೆಮಾಡಿ ತನಗಾಗಿ ಕಾದಿರುವ ದೃಶ್ಯ ಬಹು ಹಿತವಾಗಿ, ಪ್ರಿಯವಾಗಿ ಕಂಡಿತು.

ಕೋಣೆಯೊಳಕ್ಕೆ ಹೋಗಿ ತನ್ನ ಕೆಲಸದ ಬಟ್ಟೆಗಳನ್ನು ತೆಗೆಯುತ್ತಿದ್ದ ನಟೇಶನನ್ನು ಊಟಕ್ಕೆ ಕರೆಯುವ ಪಾಠ ಅತ್ತಿಗೆ ನಾದಿನಿಯರ ನಡುವೆ ಮೌನವಾಗಿ ನಡೆಯಿತು. ಸಮಯದಲ್ಲಿ ತನ್ನ ಮೌನವನ್ನು ಕಾಯುತ್ತಿರುವ ಈ ಚಿಕ್ಕ ಗುರುವಿನ ಆಜ್ಞೆಯನ್ನು ಮೀರಲಾರದೆ ವಸಂತಾದೇವಿಯು ಬಾಗಿಲ ಬಳಿನಿಂತು 'ಕೈಕಾಲು ತೊಳೆದುಕೊಳ್ಳಿ' ಎಂದಳು.

ಊಟಕ್ಕೆ ಎರಡು ತಟ್ಟೆಗಳನ್ನು ಮಾತ್ರ ಹಾಕಿತ್ತು. ಎಲ್ಲರೂ ಜೊತೆಯಲ್ಲೆ ಕುಳಿತು ಊಟ ಮಾಡಬೇಕೆಂದು ಹೇಳಿದುದರ ಮೇಲೆ ವಸಂತಾದೇವಿಯೂ ಒಂದು ಎಲೆಯನ್ನು ಹಾಕಿಕೊಂಡು ಕುಳಿತಳು.

ಎರಡು ತುತ್ತು ಊಟಮಾಡಿ ನಟೇಶನು ಸಮಾಧಾನ ದೃಷ್ಟಿಯಿಂದ ತನ್ನ ಹೆಂಡತಿಯನ್ನೊಮ್ಮೆ ತಂಗಿಯನ್ನೊಮ್ಮೆ ನೋಡಿ

'ಅತ್ತಿಗೆ ಬಂದಿದಾಳೆ ಎಂತ ಅಡಿಗೆ ಚೆನ್ನಾಗಿ ಮಾಡಿದೀ ಇಂದಿರಾ' ಎಂದ.

'ನಾನೇಕೆ ಮಾಡಲಣ್ಣಾ ಇನ್ನು ಮೇಲೆ? ಅತ್ತಿಗೇದೇ ಈ ಕೈವಾಡ. ನೋಡಿದೆಯೋ ಹೇಗಿದೆ!'

ಎಂದು ತಂಗಿಯಿಂದ ಉತ್ತರಬಂತು. ಇನ್ನೂ ಹೆಚ್ಚು ಮಾತನಾಡಿಯಾಳೆಂದು ವಸಂತ ಅವಳನ್ನು ಸ್ವಲ್ಪ ಜಿಗುಟಿದಳು. ನಟೇಶನು ಅಡಿಗೆಯ ರುಚಿಯನ್ನು ಅನುಭವಿಸುತ್ತ ಚಪ್ಪರಿಸಿ ಅಣಕವಾಡುವವನಂತೆ

'ಸ್ವಲ್ಪ ಹುಳಿ ಹೆಚ್ಚಲ್ಲವೆ?' ಎಂದ.

'ಹೌದು, ಕೋಪಿಸಿಕೊಂಡು ಮಾಡಿದ್ದರೆ ಖಾರವಾಗಿರುತ್ತಿತ್ತು; ಪ್ರೀತಿಯಿಂದ ಮಾಡಿದ ಅಡಿಗೆಗೆ ಹುಳಿ ಹೆಚ್ಚಾಗಿ ಬೀಳುತ್ತೆ' ಎಂದು ನೂತನವಾದ ಒಂದು ಪಾಕಶಾಸ್ತ್ರ ಸಿದ್ಧಾಂತವನ್ನು ಇಂದಿರೆಯು ನಗುತ್ತ ಹೇಳಿದಳು.

ಊಟದ ಸಮಯದಲ್ಲಿ ತಾನೊಬ್ಬಳೇ ಮೇಜಿನ ಮುಂದೆ ಕುಳಿತು ಮೌನವಾಗಿ ತಟ್ಟೆ ಚಮಚಗಳಲ್ಲಿ ತನ್ನ ಮುಂದಿದ್ದ ಹತ್ತಾರು ವಸ್ತುಗಳಲ್ಲಿ ಒಂದೊಂದು ಚೂರನ್ನು ಬಾಯಲ್ಲಿಟ್ಟುಕೊಂಡು ಊಟದ ಶಾಸ್ತ್ರ ಮುಗಿಸುತ್ತಿದ್ದ ವಸಂತಾದೇವಿಗೆ ಇಂದಿನ ಊಟದ ಅನುಭವವು ನೂತನವಾದರೂ ಬಹಳ ತೃಪ್ತಿಯನ್ನುಂಟುಮಾಡುವುದಾಗಿ ಕಂಡಿತು. ಮಾಡಿರುವುದು ಅನ್ನ, ಹುಳಿ ಇವೆರಡೇ; ಆದರೂ ಹಿಂದೆಂದೂ ಮಾಡದಷ್ಟು ಹೆಚ್ಚು ಊಟವನ್ನು ತಾನು ಮಾಡಿರುವುದಾಗಿ, ಅದು ಹೆಚ್ಚು ರುಚಿಕರವಾಗಿರುವುದಾಗಿ ಅವಳಿಗೆ ಕಂಡಿತು.

ಊಟವಾದಮೇಲೆ ಗಂಡನಿಗೆ ಎಲೆ ಅಡಿಕೆ ಕೊಡುವ ವಿಷಯದಲ್ಲಿ ಒಂದು ಚಿಕ್ಕ ಪ್ರಹಸನ ನಡೆಯಿತು. ಕೋಣೆಯಲ್ಲಿ ಹರಕು ಚಾಪೆಯೊಂದರ ಮೇಲೆ ಹಾಸಿಗೆಯನ್ನೊರಗಿಕೊಂಡು ನಟೇಶನು ಕುಳಿತಿದ್ದ. ಒಳಗೆ ಹೋಗಿ ಅಡಿಕೆ ಎಲೆ ಕೊಡೆಂದು ಅತ್ತಿಗೆಯನ್ನು ಇಂದಿರೆಯು ಕಾಡುತ್ತಿದ್ದಳು. ವಸಂತಳಿಗೆ ಅದು ಇಷ್ಟವಿಲ್ಲ. ಅಲ್ಲದೆ ಒಳಗೆ ಹೋಗಲು ಸ್ವಲ್ಪ ಭಯವೂ ಇತ್ತು. ಒಬ್ಬಳೇ ಸಿಕ್ಕಿದ ತನ್ನನ್ನು ಅವನು ಮುಟ್ಟಿದರೆ? ಸಲಿಗೆಯಿಂದಿರಲು ಯತ್ನಿಸಿದರೆ? ಬೆಳಗ್ಗೆ ತನಗೆ ಕೊಟ್ಟ ಮಾತನ್ನು ಅವನು ನಡೆಸುತ್ತಾನೆಂಬ ಭರವಸೆಯೇನು? ಆದರಿಂದ ಒಳಗೆ ಹೋಗಲು ಧೈರ್ಯವಿಲ್ಲ; ಆದರೆ ಸಾಧಿಸಿಯೆಂಬ ಈ ಹೆಣ್ಣು ಬಿಡಬೇಕಲ್ಲ! ಸ್ವಲ್ಪಹೊತ್ತು ಹಾಗೆ ಹೀಗೆ ಘರ್ಷಣೆ ನಡೆದು ಕಡೆಗೆ ವಿಧಿಯಿಲ್ಲದೆ ಒಂದು ಅಲ್ಯೂಮಿನಿಯಂ ತಟ್ಟೆಯಲ್ಲಿ ಇಂದಿರೆಯು ಇಟ್ಟಿದ್ದ

ಅಡಿಕೆ ಎಲೆ ಸುಣ್ಣವನ್ನು ಒಯ್ದು ಕೋಣೆಯ ಬಾಗಿಲನ್ನು ಪೂರಾ ತೆಗೆದು ಕೊಂಡು ಒಳಕ್ಕೆ ಪ್ರವೇಶಿಸಿ ನಟೇಶನ ಪಕ್ಕದಲ್ಲಿಟ್ಟು ಛಂಗನೆ ಹಿಂದಕ್ಕೆ ಬಂದುಬಿಟ್ಟಳು.

ಮದ್ದಾನೆಯು ಶಕ್ತನಾದ ಮಾವಟಿಗನ ಕೈಯಲ್ಲಿ ಪಳಗುತ್ತಿತ್ತು.

— ೨೧ —

ಆ ದಿನವೆಲ್ಲಾ ನಟೇಶನಿಗೆ ವಿರಾಮವಿಲ್ಲ. ಅವನಿಗೆ ಪರಿಚಿತರಾಗಿದ್ದ ಜನರೆಲ್ಲ ಏನಾದರೊಂದು ನೆಪ ಹಾಕಿಕೊಂಡು ಅವನ ಮನೆಗೆ ಬರುತ್ತಿದ್ದರು. ಹೆಚ್ಚು ಸಲಿಗೆಯಿದ್ದ ಸ್ನೇಹಿತರು ನೇರವಾಗಿಯೇ ತಾವು ಬಂದ ಕಾರಣವನ್ನು ಹೇಳಿಬಿಡುತ್ತಿದ್ದರು. ಎಲ್ಲರ ಉದ್ದೇಶವೂ ಒಂದೇ—ತಮ್ಮ ಸರಿಯ ಕೂಲಿ ಗಾರ ನಟೇಶನ ಶ್ರೀಮಂತ ಹೆಂಡತಿಯನ್ನು ನೋಡಬೇಕೆಂಬುದು. ಗಂಡಸರು ನಟೇಶನನ್ನು ಕೂಗಿಕೊಂಡು ಬಂದರೆ ಹೆಂಗಸರು ಇಂದಿರೆಯೊಡನೆ ಮಾತಾಡಲು ಅಥವಾ ಏನಾದರೊಂದು ಸಣ್ಣಪುಟ್ಟ ಪದಾರ್ಥವನ್ನು ಸಾಲ ಕೇಳಲು ಬರು ತ್ತಿದ್ದರು. ಬಂದವರು ಹೊಸಬಳಾದ ವಸಂತಾದೇವಿಯನ್ನು ಕಂಡು ಪರಿಚಯ ಮಾಡಿಸಿಕೊಂಡು ಅಥವಾ ತಾವಾಗಿಯೇ ಹೇಳಿಕೊಂಡು ನಾಲ್ಕು ಮೆಚ್ಚಿಕೆಯ ಮಾತುಗಳನ್ನಾಡಿ, ನಟೇಶನ ಗುಣಗಾನಮಾಡಿ ಅಥವಾ ಏನಿಲ್ಲದಿದ್ದರೂ ಒಂದು ದೇಶಾವರದ ನಗುವನ್ನಾದರೂ ನಕ್ಕು ತಮ್ಮ ಸಂತೋಷವನ್ನು ಸೂಚಿಸಿ ಹೋಗುತ್ತಿದ್ದರು. ನೆರೆ ಹೊರೆಯವರು, ಆಚೆ ಈಚೆಯ ಕೇರಿಗಳವರು, ದೂರದಲ್ಲಿದ್ದರೂ ಇವರನ್ನು ಬಲ್ಲಜನ, ಬೀದಿಯಲ್ಲಿ ಹಣ್ಣು ಮಾರಲು ಬರುತಿದ್ದ ಹನುಮಕ್ಕ, ಬೆರಣಿಯ ಬೋರಜ್ಜಿ, ಬಳೆಗಾರ ಮರಿಶೆಟ್ಟಿ, ಮೊಸರು ಮಾರುವ ಮಾರಮ್ಮ, ಹಾಲುತರುವ ಹಾಲಪ್ಪ, 'ಎರಡೂವರಾಣೇಮೇ' ಗಫಾರ್‌ಖಾನ್, ಹಳೇಬಾಗಿನ ಕಂಬಿಯ ನೂರುಲ್ಲಾ, ಕಲಾಯಿ ಮಾಡುವ ಕರೀಂಸಾಬಿ, ಕಡಲೇಕಾಯಿ ಸೀಬೇಹಣ್ಣಿನ ಕಾಮಾಕ್ಷಿ, ಮೂರುದಿನ ಮುಗ್ಗಿದ ಹೂವು ತರುತ್ತಿದ್ದ ಮಂಗಮ್ಮ, ವಿಳೇದೆಲೆಯ ಲಕ್ಷ್ಮಕ್ಕ, ತರಕಾರಿಯ ತಮ್ಮಯ್ಯ ಎಲ್ಲರೂ ಆ ದಿನ ತಪ್ಪದೆ ನಟೇಶನ ಮನೆಗೆ ಬಂದು ತಮ್ಮ ತಮ್ಮ ಸಾಮಾನು ಗಳನ್ನು ಕೇಳಿ ಇವರು ಬೇಡವೆಂದರೂ ಮುಂದಕ್ಕೆ ಹೋಗದೆ ಸ್ವಲ್ಪಹೊತ್ತು ನಿಂತು ನೋಡುತ್ತಿದ್ದರು.

ಅನಾಥ ಪೋಷಕ ಸಂಘದವರಾದರೂ ಈ ಸುಸಮಯವನ್ನು ಕಳೆದು ಕೊಳ್ಳಲಿಲ್ಲ. ತಮ್ಮ ಸಂಘಕ್ಕೆ ಒಂದು ಸಾವಿರ ರೂಪಾಯಿಗಳು ದಾನವಾಗಿ ದೊರೆಯಲು ಕಾರಣಳಾದ ಭಾಗ್ಯಲಕ್ಷ್ಮಿಯ ದರ್ಶನಕ್ಕಾಗಿ ಐದುಮಂದಿ ಸಂಚಾಲಕರೂ ಬಂದರು. ದೇವಿಯ ರೂಪರಾಶಿಯನ್ನು ಕಂಡು ಬೆರಗಾದ ಅವರು ದಾರಿಯುದ್ದಕ್ಕೂ ಮನಸಿನಲ್ಲಿಯೇ ಪಾಠಮಾಡಿಕೊಳ್ಳುತ್ತ ಬಂದಿದ್ದ ಸಂವಾದದ ಸರಣಿಯನ್ನು ಮರೆತು ನಾ ಮುಂದು ತಾ ಮುಂದು ಎಂದು ತಮ್ಮ ಪರಿಚಯಗಳನ್ನು ಹೇಳಿಕೊಂಡರು. ತಬ್ಬಿಬ್ಬಾಗಿ ಅವರು ಆಡುತ್ತಿದ್ದ ಮಾತು ಗಳು ವಸಂತಾದೇವಿಗೆ ವಿನೋದವಾಗಿದ್ದುವು. ತಮ್ಮ ಸಂತೋಷವನ್ನು ವ್ಯಕ್ತಪಡಿಸುವ ಉತ್ಸಾಹದಲ್ಲಿ ಪೆರುಮಾಳು ತಮ್ಮ ಸಂಘದ ಪೋಷಕಳಾಗಿರ ಬೇಕೆಂದು ಆಕೆಯನ್ನು ಪ್ರಾರ್ಥಿಸಿದ; ಅವಳು ನಗುತ್ತ 'ಅನಾಥ ಪೋಷಕ ಸಂಘಕ್ಕೆ ನಾನು ಪೋಷಕಳಾಗಬೇಕೆ?' ಎಂದು ಕೇಳಿದಳು. ಅವಳ ಪ್ರಶ್ನೆಯ ಅರ್ಥ ತಿಳಿಯದೆ ಕಣ್ಣ 'ಹೌದು ತಾಯಿ' ಎಂದ. ಕೂಡಲೇ ವಸಂತಳು, 'ಹಾಗಾದರೆ ನಿಮ್ಮ ಸಂಘವೂ ಅನಾಥವಾಗುತ್ತದಲ್ಲಾ!' ಎಂದಳು. ಅವಳ ಮಾತಿನ ಭಾವ ಅರ್ಥವಾಗದಿದ್ದರೂ ಅವಳೊಡನೆ ಮಾತನಾಡಲು ಸಮಯ ಕಾಯುತ್ತಿದ್ದ ಮುನಿಸಾಮಿ 'ತಾವು ದಯವಿಟ್ಟು ದೊಡ್ಡ ಮನಸ್ಸುಮಾಡಿ ಒಪ್ಪಿಕೊಳ್ಳಬೇಕು' ಎಂದ.

ಸಂಘದವರನ್ನು ಬಿಟ್ಟರೆ ಆದಿನ ಅವರನ್ನು ನೋಡಲು ಬಂದವರಲ್ಲಿ ಮುಖ್ಯರಾದವರು ವೆಂಕಟಾಚಲಯ್ಯ; ಆ ಚಿತ್ರಗುಪ್ತ ಅದು ಹೇಗೆ ಬಂದನೋ ಏನೋ ಸಂಜೆ ಐದು ಗಂಟೆಯವೇಳೆಗೆ ಹಾಜರಾಗಿಬಿಟ್ಟ. ತಮ್ಮ ಪತ್ರಿಕೆ ಯಲ್ಲಿ ಅವನು ಕೊಟ್ಟಿದ್ದ ವಿವರಗಳು, ಫೋಟೋಗಳು ಮತ್ತಾವ ಪತ್ರಿಕೆ ಯಲ್ಲೂ ಬಂದಿರಲಿಲ್ಲ. ಬೆಂಗಳೂರು ನಗರದಲ್ಲಿ ಮಾತ್ರವೇ ಅಲ್ಲದೆ ಇಡೀ ದೇಶದಲ್ಲೆಲ್ಲಾ ಅದೊಂದು ಪ್ರಚಲಿತ ವಾರ್ತೆಯಾಗಿತ್ತು. ಆ ಸಂಬಂಧವಾದ ಸುದ್ದಿಯನ್ನು ಪ್ರಕಟಿಸಿದ ಪ್ರತಿಗಳು ಜನರಿಗೆ ಸಿಕ್ಕುವುದೇ ದುಸ್ತರವಾಯಿತು. ಜನರ ಉತ್ಸಾಹ ಇತ್ತಕಡೆ ಹರಿದಿರುವಾಗಲೇ ಅದರ ಸಂಪೂರ್ಣ ಪ್ರಯೋಜನ ವನ್ನು ಪಡೆದು ತನ್ನ ಪೆಟ್ಟಿಗೆಯನ್ನು ತುಂಬುವ ಸಲುವಾಗಿ ಪತ್ರಿಕೆಯ ಮಾಲೀ ಕರು ವೆಂಕಟಾಚಲಯ್ಯನನ್ನು ಗಣಿ ಪ್ರದೇಶಕ್ಕೆ ಕಳಿಸಿದರು. ಇವನಿಗಾದರೂ ಈ ಕೆಲಸ ಹಿತವಾಗಿ, ರಸಮಯವಾಗಿ ಕಾಣುತ್ತಿತ್ತು; ವಸಂತಾದೇವಿಯು

ನಟೇಶನನ್ನು ಮದುವೆಯಾದುದರಲ್ಲಿ ಏನೋ ರಹಸ್ಯವಿರಬೇಕು; ಅದನ್ನು ತಾನಿನ್ನೂ ಭೇದಿಸಬೇಕಾಗಿತ್ತು; ಆ ಕಥೆ ತಮ್ಮ ಪತ್ರಿಕೆಯ ಓದುಗರಿಗೆ ತಿಳಿಯಬೇಕು.

ವೆಂಕಟಾಚಲಯ್ಯನನ್ನು ನೋಡಿ ನಟೇಶನಿಗೆ ಸಂತೋಷವೇ ಆಯಿತು. ರತಿಯಂಥ ಈ ಹೆಣ್ಣು ತನ್ನನ್ನು ಹುಡುಕಿಕೊಂಡು ಬಂದು ತನ್ನ ಮನೆ ಕೆಲಸದಲ್ಲಿ ನಿಲ್ಲುವುದಕ್ಕೆ ವೆಂಕಟಾಚಲಯ್ಯನು ಪತ್ರಿಕೆಯಲ್ಲಿ ಮಾಡಿದ ಪ್ರಚಾರವೇ ಕಾರಣವೆಂದು ಅವನು ಊಹಿಸಿದ್ದ. ತಾವು ಗಂಡ ಹೆಂಡಿರೆನ್ನುವ ಮಾತನ್ನು ಆ ಸ್ನೇಹಿತನು ಜಗತ್ತಿಗೆ ಸಾರಿಹೇಳಿ ಸಿದ್ಧಾಂತ ಮಾಡಿಬಿಟ್ಟ. ಅವನ ಉಪಕಾರವು ಚಿರಸ್ಮರಣೀಯವಾದುದು. ಅಂಥವನು ಈಗ ತನ್ನ ಮನೆಗೆ ಬಂದುದೂ ಕೆಲವು ಕಾಲ ಬಂಗಾರಪೇಟೆಯಲ್ಲೇ ಯಾವುದೋ ಕಾರ್ಯಾಂತರದಿಂದ ಇರುತ್ತೇನೆಂದು ಹೇಳಿದುದೂ ನಟೇಶನಿಗೆ ಸಂತೋಷವನ್ನುಂಟುಮಾಡಿತು. ವೆಂಕಟಾಚಲಯ್ಯನು ವಸಂತಾದೇವಿಯ ಪರಿಚಯ ಮಾಡಿಕೊಂಡು ತನ್ನ ಸಂಶೋಧನೆಯನ್ನು ಆರಂಭಿಸಿದ. ಪತ್ರಿಕೆಯು ಮಾಡಿದ ಹಗರಣಕ್ಕೆಲ್ಲ ಇವನೇ ಮೂಲ ಪುರುಷನೆಂದು ಅರಿತ ವಸಂತಳು ತನ್ನ ಎಚ್ಚರಿಕೆಯಲ್ಲಿ ತಾನಿದ್ದು ಅವರೊಡನೆ ಮಾತಾಡುತ್ತಿದ್ದಳು. ತಾನು ಏನು ಮಾತಾಡಿದರೂ ಅದು ಪತ್ರಿಕೆಯಲ್ಲಿ ಬರುತ್ತದೆಂಬ ಸಂದೇಹ ಅವಳಿಗಿತ್ತು.

ಔಪಚಾರಿಕವಾದ ಕೆಲವು ಮಾತುಗಳನ್ನಾಡಿದ ತರುವಾಯ ನಟೇಶನೂ ವೆಂಕಟಾಚಲಯ್ಯನೂ ಹೊರಕ್ಕೆ ಹೋದರು. ತಾನು ಹಿಂತಿರುಗುವುದು ಹೊತ್ತಾದರೆ ಊಟಕ್ಕಾಗಿ ಕಾಯಬೇಕಾಗಿಲ್ಲವೆಂದೂ ಇಬ್ಬರೂ ಊಟ ಮಾಡಿ ಮಲಗಬಹುದೆಂದೂ ಹೇಳಿ ನಟೇಶನು ಮನೆಯನ್ನು ಬಿಟ್ಟು ಹೊರಟ.

ಹಗಲು ವೇಳೆಯನ್ನು ಹಾಗೂ ಹೀಗೂ ಕಳೆದುದಾಯಿತು; ಕತ್ತಲೆ ಆವರಿಸುತ್ತ ಬಂದಹಾಗೆಲ್ಲ ವಸಂತಾದೇವಿಯ ಮನಸ್ಸಿನಲ್ಲಿ ಅಧೈರ್ಯ ಹೆಚ್ಚುತ್ತಿತ್ತು. ನಟೇಶನು ಎಷ್ಟಾದರೂ ಅಸಂಸ್ಕೃತ, ವಿದ್ಯೆ, ವಿನಯ, ಸೌಜನ್ಯಗಳ ಸೋಂಕು ಸಹ ಇಲ್ಲದವ; ಕೂಲಿಯಾಳು. ಇಂಥವನು ತನಗೆ ಕೊಟ್ಟಿರುವ ಮಾತನ್ನು ನಡೆಸುತ್ತಾನೆಂಬ ಭರವಸೆಯೇನು? ತನ್ನೊಡನೆ ಮಲಗೆಂದು ಬಲಾತ್ಕರಿಸಿದರೆ? ಅಥವಾ, ತಾನು ಮಲಗಿ ನಿದ್ರೆಯಲ್ಲಿರುವಾಗ ಬಂದು ಮಾನಭಂಗ ಮಾಡಿದರೆ? ಆ ವೇಳೆಯಲ್ಲಿ ತನ್ನ ಸಹಾಯಕ್ಕೆ ಬರುವ

ರಾರು? ತಾನು ಮಾಡಿದುದು ಅವಿವೇಕವೆಂದು ಆಗ ಅವಳಿಗೆ ತೋರ ತೊಡಗಿತ್ತು.

ಗಂಟೆ ಏಳಾಯಿತು, ಎಂಟಾಯಿತು. ತನ್ನ ಜೀವನದಲ್ಲಿ ಎಂದಿಗೂ ಹಸಿವನ್ನೇ ಕಂಡರಿಯದ ವಸಂತಾದೇವಿಗೆ ಹಸಿವು ತೋರಿತು. ಅತ್ತಿಗೆ ನಾದಿನಿಯರು ಊಟ ಮಾಡಿದರು. ಒಂಭತ್ತು ಗಂಟೆಯ ವೇಳೆಗೆ ಇಂದಿರೆಗೆ ನಿದ್ರೆಬಂತು. ಇದ್ದಷ್ಟು ಬಟ್ಟೆಗಳನ್ನೇ ಹಂಚಿಕೊಂಡು ವಸಂತಳಿಗೆ ಒಂದು ಹರಕುಚಾಪೆ, ಹಳೆಯ ಮಣಕುಹಿಡಿದ ಒಂದು ದಿಂಬು, ಒಂದು ಮುಗ್ಗಲು ಹಾಸಿಗೆ ಬಟ್ಟೆಯನ್ನು ತೆಗೆದುಕೊಟ್ಟು ಅವಳು ನಿದ್ರೆ ಹೋದಳು. ಗೃಹಿಣಿಯು ಮನೆಯ ಬಾಗಿಲನ್ನು ಮುಂದಿಟ್ಟು ದಿಂಬನ್ನು ಮುಟ್ಟಲಾರದೆ ದೂರ ಸರಿಸಿ ನಾದಿನಿಯು ಕೊಟ್ಟಿದ್ದ ಬಟ್ಟೆಯನ್ನೇ ತಲೆಯ ಕೆಳಗಿಟ್ಟುಕೊಂಡು ಚಾಪೆಯಮೇಲೆ ಮುದುರಿಕೊಂಡಿದ್ದಳು. ಹಂಸತೂಲಿಕಾ ತಲ್ಪದಲ್ಲಿ ಪವಳಿಸು ತ್ತಿದ್ದವಳನ್ನು ವಿಧಿ ತಂದು ಹರಕು ಚಾಪೆಯಮೇಲೆ ಮಲಗಿಸಿತ್ತು.

ಬೆಳಗಿನಿಂದ ಪಟ್ಟಿದ್ದ ದೇಹಶ್ರಮ ನಿದ್ರೆಯನ್ನು ಕರೆಯುತ್ತಿತ್ತು; ನಟೇಶನು ತನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುವನೋ ಎಂಬ ಭಯ ನಿದ್ರೆಯನ್ನು ಮರೆಸುತ್ತಿತ್ತು. ಜೊತೆಗೆ ಅದೊಂದು ಹೊಸ ಅನುಭವ. ತನ್ನ ನಾಯಿ, ಕಡೆಗೆ ತನ್ನ ಜೀತದ ಆಳುಗಳಲ್ಲಿ ಬಹಳ ಕಡಿಮೆ ದರ್ಜೆಯವನು ಸಹ ಮಲಗಲು ಯೋಗ್ಯವಲ್ಲದ ಹಾಸಿಗೆಯ (?) ಮೇಲೆ ತಾನಿಂದು ಮಲಗಬೇಕಾ ಗಿದೆ. ಹಳ್ಳ ತಿಟ್ಟುಗಳಿದ್ದ ನೆಲ ಮೈಗೆ ಒತ್ತಿಕೊಳ್ಳುತ್ತಿದೆ; ಮಾರ್ಗಶಿರ ಮಾಸದ ಚಳಿ ಮೈಯನ್ನು ನಡುಗಿಸುತ್ತಿದೆ. ಚಳಿಯನ್ನು ತಡೆಯಲು ಇಟಾಲಿಯನ್ ರಗ್ಗುಗಳು, ರಜಾಯಿಗಳು ಹಾಗಿರಲಿ, ತೆಳುವಾದ ಒಂದು ಬಟ್ಟೆಸಹ ಇಲ್ಲ. ಇಂಥ ಸ್ಥಿತಿಯಲ್ಲಿ ನಿದ್ರೆ ಬರುವುದಾದರೂ ಹೇಗೆ?

ಚಳಿಯಿಂದ ದೇಹವನ್ನು, ಕಾಣದ ಭಯದಿಂದ ಜೀವವನ್ನು ಹಿಡಿಯಾಗಿ ಮಾಡಿಕೊಂಡು ವಸಂತಾದೇವಿ ಮಲಗಿದ ಒಂದು ಗಂಟೆಯಮೇಲೆ ನಟೇಶನು ಮುಚ್ಚಿದ್ದ ಬಾಗಿಲನ್ನು ಮೆಲ್ಲನೆ ತಳ್ಳಿ ಒಳಕ್ಕೆಬಂದ. ಅವನೆಷ್ಟು ಮೆದುವಾಗಿ ಅದನ್ನು ಹಿಂದಕ್ಕೆ ಸರಿಸಿದರೂ ಅದು ಒಮ್ಮೆ ಕಿರ್ರೆಂದು ಸದ್ದುಮಾಡೇ ಮಾಡಿತು. ಆದರೆ ಅದರಿಂದ ತನ್ನ ಹೆಂಡತಿಯ ನಿದ್ರಾಭಂಗವಾಗಲಿಲ್ಲವೆಂದು ಸಮಾಧಾನಗೊಂಡು ಸದ್ದುಮಾಡದೆ ಅಗಳಿಯನ್ನು ಹಾಕಿ ಅವರಿಬ್ಬರ ಕಡೆ

ನೋಡಿದ. ಸಣ್ಣಗೆ ಮಿನುಗುತ್ತಿದ್ದ ದೀಪ ದೂರದಲ್ಲಿದ್ದುದರಿಂದ ಹೆಂಡತಿಯ ಮುಖ ಕಾಣಲಿಲ್ಲ; ಮಲಗಿದ್ದ ರೀತಿ ಅವಳು ನಿದ್ರಿಸುತ್ತಿದಾಳೆಂದು ಸೂಚಿಸಿತು. ಅವನ ಕಾಲಲ್ಲಿ ಮೆಟ್ಟಿದ್ದ ಷೂಗಳಿಗೆ ಕೆಳಗೆ ಮೊಳೆ ಹೊಡೆದಿದ್ದುದರಿಂದ ನಡೆದಾಗ ಸದ್ದಾಗುತ್ತಿತ್ತು; ಅದರಿಂದ ನಟೇಶನು ಅವನ್ನು ಅಲ್ಲಿಯೇ ಬಿಚ್ಚಿ ಕೈಯಲ್ಲಿ ಹಿಡಿದುಕೊಂಡು ಮುಂಗಾಲಮೇಲೆ ಹೆಜ್ಜೆಯನ್ನಿಡುತ್ತ ಮೆಲ್ಲನೆ ತನ್ನ ಕೊಟಡಿಯೊಳಕ್ಕೆ ಸರಿದುಹೋದ. ಅರೆಗಣ್ಣುಬಿಟ್ಟು ಅವನ ಚಲನೆಯನ್ನೇ ನೋಡುತ್ತಿದ್ದ ವಸಂತಳಿಗೆ ಕೊಂಚ ಸಮಾಧಾನವಾಯಿತು.

ಮತ್ತೆ ಐದು ನಿಮಿಷ ಕಳೆಯಿತು. ನಟೇಶನು ತನ್ನ ಕೋಣೆಯಲ್ಲಿ ತನ್ನ ಹಾಸಿಗೆಯನ್ನು ಹಾಸಿಕೊಳ್ಳುವುದು ಕೇಳಿಸಿತು. ಒಂದು ಬೆಂಕಿಯಕಡ್ಡಿಯನ್ನು ಗೀರಿದ ಸದ್ದು–ಕಡ್ಡಿ ಹಚ್ಚಿದ ಬೆಳಕು—ಬೀಡಿ ಹೊಗೆಯವಾಸನೆ–ಅದನ್ನು ಎಳೆಯುವ ಸದ್ದು. ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದ ವಸಂತಳಿಗೆ ನಟೇಶನು ಗಟ್ಟಿಯಾಗಿ ಉಸಿರುಬಿಟ್ಟರೆ ಅದು ಸಹ ಕೇಳುತ್ತಿತ್ತು. ಬೀಡಿ ಸೇದಿ ಮುಗಿಯಿತೆಂದು ಕಾಣುತ್ತದೆ, ಇನ್ನು ಮಲಗಬಹುದೆಂದು ಅವಳು ತಿಳಿದಿದ್ದಳು. ಆದರೆ ಅವನು ಕೋಣೆಯ ಬಾಗಿಲಿಗೆ ಬಂದುದು ಕಂಡಿತು; ವಸಂತಳ ಎದೆ ಹೊಡೆದುಕೊಳ್ಳಲಾರಂಭಿಸಿತು. ಬಾಗಿಲಬಳಿ ಒಂದು ನಿಮಿಷ ನಿಂತ ನಟೇಶನು ಪುನಃ ಕೋಣೆಯೊಳಕ್ಕೆ ಹೋಗಿ ತನ್ನ ರಗ್ಗನ್ನು ಹೆಗಲ ಮೇಲೆ ಹಾಕಿಕೊಂಡು ಬಂದು ವಸಂತಳ ಕಡೆಗೆ ಹೆಜ್ಜೆ ಹಾಕಿದ.

ನಟೇಶನು ಬರುತ್ತಿರುವುದು ತನ್ನನ್ನು ಕುರಿತೆಂದು ವಸಂತಳಿಗೆ ನಿರ್ಧಾರವಾಯಿತು. ಈಗ ತಾನೇನು ಮಾಡಬೇಕು? ಸದ್ದಾಗದಂತೆ, ಬೆಕ್ಕಿನಂತೆ ಅವನು ಹೆಜ್ಜೆಯಿಡುತ್ತ ಬರುತ್ತಿದಾನೆ. ಅವನ ಒಂದೊಂದು ಹೆಜ್ಜೆಯೂ ತನ್ನ ಎದೆಯಮೇಲೆ, ಕಳಂಕರಹಿತವಾದ ತನ್ನ ಶೀಲದಮೇಲೆ, ಭವ್ಯವಾದ ತನ್ನ ಭವಿಷ್ಯದ ಮೇಲೆ ಇಡುತ್ತಿದ್ದಂತೆ ವಸಂತಳಿಗೆ ತೋರಿತು. ಮಿನುಗುತ್ತಿದ್ದ ದೀಪದಿಂದ ಗೋಡೆಯಮೇಲೆ ಬಿದ್ದ ಅವನ ನೆರಳು ಭೂಮ್ಯಾಕಾಶಗಳನ್ನು ಒಂದಾಗಿ ಸೇರಿಸುತ್ತಿದ್ದಂತೆ ಕಂಡಿತು. ಕೂಗಿಕೊಳ್ಳಬೇಕೆಂದು ಮನಸಾಯಿತು; ಆದರೆ ಸ್ವಾಭಿಮಾನ ಅದಕ್ಕೆ ಅಡ್ಡಬಂತು. ಕೂಗಿಕೊಳ್ಳುವುದು ಅಸಹಾಯಕತೆಯ, ದೌರ್ಬಲ್ಯದ, ಹೇಡಿತನದ ಹೆಗ್ಗುರುತು. ಹತ್ತಿರಬಂದು ಅವನು ಮಾಡುವುದಾದರೂ ಏನೆಂದು ನೋಡೋಣ, ತನಗೆ ಎಚ್ಚರವಿಲ್ಲವೆಂದು

ಅವನು ತಿಳಿದಿದ್ದಾನೆ. ದೇವರ ದಯೆಯಿಂದ ತಾನಿನ್ನೂ ಎಚ್ಚರವಾಗಿದ್ದೇನೆ, ಅವನ ದೌರ್ಜನ್ಯಕ್ಕೆ ತಾನೆಂದಿಗೂ ಬಲಿಯಾಗಲಾರೆ; ಈ ಧೈರ್ಯ ತಂದು ಕೊಂಡು ವಸಂತ ಅವನಕಡೆ ನೋಡುತ್ತಿದ್ದಳು.

ಚಾಪೆಯ ಹತ್ತಿರಕ್ಕೆ ಬಂದು ನಟೇಶ ನಿಂತುಕೊಂಡ. ಕಾಲು ಅವನ ಅರಿವಿಲ್ಲದಂತೆ ಚಾಪೆಯನ್ನು ಸೋಕಿತೆಂದು ಕಾಣುತ್ತದೆ; ಅಪಚಾರ ಮಾಡಿದವನಂತೆ ತಟ್ಟನೆ ಅದನ್ನು ಹಿಂದಕ್ಕೆ ತೆಗೆದುಕೊಂಡ. ಸೌಂದರ್ಯ ನಿಧಿಯು ತನ್ನೆದುರಿಗೆ ಮುದುರಿ ಮಲಗಿದೆ. ನಟೇಶನು ಕವಿಯಾಗಿದ್ದರೆ ಆಗಿನ ಅನುಭವದಿಂದ ಸ್ಫೂರ್ತಿಗೊಂಡು ಒಂದು ಗೀತೆಯನ್ನು ಬರೆಯುತ್ತಿದ್ದ; ಚಿತ್ರಕಾರನಾಗಿದ್ದರೆ ಕಲಾ ಪ್ರಪಂಚವೇ ಬೆರಗಾಗುವಂಥ ಉತ್ತಮ ಚಿತ್ರ ವನ್ನು ಚಿತ್ರಿಸುತ್ತಿದ್ದ; ರಸಿಕನಾಗಿದ್ದರೆ ಆ ಸುಖಾನುಭವದಲ್ಲಿ ಮೈಮರೆತು ತನ್ನ ಪ್ರೇಯಸಿಯನ್ನು ತೋಳ ತೊಟ್ಟಿಲಲ್ಲಿ ಮಲಗಿಸಿಕೊಂಡು ಸ್ವರ್ಗದ ಬಾಗಿಲನ್ನು ತೆರೆಯುತಿದ್ದ; ಆದರೆ ಅವನು ಕವಿಯೂ ಅಲ್ಲ, ಕಲಾವಿದನೂ ಅಲ್ಲ, ಕೇವಲ ಒಬ್ಬ ಕೂಲಿಯಾಳು. ಅವನಿಗೆ ಗೊತ್ತಿದ್ದುದು ಒಂದೇ, ಅದು ತಾನು ಅವಳಿಗೆ ಕೊಟ್ಟಿದ್ದ ಮಾತು; ಅವಳ ಒಪ್ಪಿಗೆಯಿಲ್ಲದೆ ತಾನವಳನ್ನು ಮುಟ್ಟಕೂಡದು. ಅವಳು ನಿದ್ರಿಸುತ್ತಿರುವಾಗಲೂ ತಾನು ಆ ಮಾತನ್ನು ಪಾಲಿಸಬೇಕು. ಆದರೆ ಹೆಣ್ಣುಜೀವ ಚಳಿಯಲ್ಲಿ ನಡುಗುತ್ತಿದೆ; ಹಾಸಿಗೆಯಿಲ್ಲ, ಹೊದಿಕೆಯಿಲ್ಲ; ತನಗಾಗಿ, ತನ್ನನ್ನು ಮೆಚ್ಚಿಸುವುದಕ್ಕಾಗಿ ಅದು ಕಷ್ಟವನ್ನು ಅಪ್ಪಿಕೊಂಡಿದೆ, ಒಪ್ಪಿಕೊಂಡಿದೆ; ಅದರ ಕ್ಷೇಮಚಿಂತನೆ ತನ್ನ ಕರ್ತವ್ಯ. ನಟೇಶನು ತನ್ನ ಹೆಗಲಮೇಲೆ ಹಾಕಿಕೊಂಡಿದ್ದ ರಗ್ಗನ್ನು ಬಿಚ್ಚಿ ವಸಂತಳಿಗೆ ಹೊದಿಸಿದ. ಸಂಶಯದ ಸುಳಿಯಲ್ಲಿ ಸಿಲುಕಿದ್ದ ಅವಳ ಹೃದಯ ಅವನ ಔದಾರ್ಯಕ್ಕೆ, ಹಿರಿಮೆಗೆ ಶರಣಿಕ್ಕಿತು. ಒಳಗೆ ಕಟ್ಟಿದ್ದ ಉಸಿರು ನಿಧಾನವಾಗಿ ಸದ್ದಿಲ್ಲದೆ ಹೊರಕ್ಕೆ ಬಂತು.

ರಗ್ಗನ್ನು ಹೊದಿಸಿದವನು ಒಂದುಗಳಿಗೆ ನಿಂತು ಮಡದಿಯಕಡೆ ನೋಡಿ ದೀಪವನ್ನು ಸಣ್ಣಗೆ ಮಾಡಿ ತನ್ನ ಕೋಣೆಯೊಳಕ್ಕೆ ಹೋದ. ಅಂದು ಬೆಳಗಿನಿಂದ ನಡೆದ ಘಟನೆಗಳನ್ನು ಅವನಾಡಿದ ಮಾತುಗಳನ್ನು ವಸಂತಳು ನೆನಪಿಗೆ ತಂದುಕೊಂಡಳು. 'ಹೆಂಗಸು ಅತ್ತರೆ ನನ್ನ ಜೀವ ಹಿಡಿದಂತಾಗು ತ್ತದೆ' ಎಂದು ಹೇಳಿದ. 'ನನ್ನ ಸಮ್ಮತಿಯಿಲ್ಲದೆ ನನ್ನನ್ನು ಮುಟ್ಟಕೂಡದು'

ಎಂದುದಕ್ಕೆ ಆಗಬಹುದೆಂದು ಮಾತುಕೊಟ್ಟ, ಹಾಗೆಯೇ ನಡೆದುಕೊಂಡೂ ಇದ್ದಾನೆ. ಧೂರ್ತನಂತೆ ಕಾಣುವ ಅವನಿಗೂ ಒಂದು ಹೃದಯವೆಂಬುದು ಇರುವಂತೆ, ಅದು ಮೃದುವಾದ ಹೃದಯವೆಂಬಂತೆ ಕಾಣುತ್ತದೆ. ತನಗಾಗಿ ಇಂದು ಕೆಲಸಬಿಟ್ಟು ಬಂದ, ತಾನು ಮಾಡಿದೆನೆಂಬ ಅಡಿಗೆ ಅವನಿಗೆ ರುಚಿಯಾಗಿ ಕಂಡಿತು. ಚಳಿಯಲ್ಲಿ ತಾನು ಮಲಗಿದ್ದರೆ ಅವನ ಜೀವ ತಳಮಳಿಸಿರಬೇಕು ; ಗಂಡಸಿನಲ್ಲಿ ಈ ಭಾವನೆಗಳು ಹುಟ್ಟುವುದರ ಅರ್ಥವೇನು ? ಅವನು ತನ್ನನ್ನು ಪ್ರೀತಿಸುತ್ತಿದ್ದಾನೆ. ಛೆ, ಅದೆಂತಹ ಪ್ರೀತಿ ! ಕೂಲಿಗಾರನ ಪ್ರೀತಿ. ಅವನನ್ನು ಪ್ರೀತಿಸುವುದೂ ಗಾಡಿಗೆ ಕಟ್ಟಿದ ಎತ್ತನ್ನು ಪ್ರೀತಿಸುವುದೂ ಒಂದೇ. ಹೀಗೆಲ್ಲ ವಿಚಾರ ನಡೆಯುತ್ತಿದ್ದಹಾಗೇ ದಣಿದಿದ್ದ ಅವಳ ದೇಹ ವಿಶ್ರಾಂತಿಯನ್ನು ಬಯಸಿತು.

— ೨೨ —

ಸ್ವಾಮಿಯು ತಲೆತಗ್ಗಿಸಿಕೊಂಡು ಕುಳಿತಿದ್ದ. ಗೌರಮ್ಮನು ಸಮಾಧಾನ ಮಾಡುತ್ತಿದ್ದಳು. ನಿಟ್ಟುಸಿರೊಂದನ್ನು ಬಿಟ್ಟು ಸ್ವಾಮಿಯು 'ವಸಂತ ಇಂಥ ಯೋಚನೆ ಮಾಡುತ್ತಾಳೆಂದು ನಾನು ತಿಳಿದಿರಲಿಲ್ಲ' ಎಂದ.

'ನೀವು ಇನ್ನೇನಾದರೂ ಆಸೆಯಿಟ್ಟುಕೊಂಡಿದ್ದಿರಾ ?'

'ಹೌದು ಗೌರಮ್ಮ, ನಿಮ್ಮ ಮುಂದೆ ಮರೆಮಾಚುವುದೇಕೆ—ಆಸೆಯಿಟ್ಟುಕೊಂಡಿದ್ದೆ. ವಸಂತಳು ನನ್ನನ್ನೇ ಮದುವೆಯಾಗುತ್ತಾಳೆಂಬ ಬಲವಾದ ಆಸೆ ನನಗಿತ್ತು.'

'ಅವಳ ಮುಂದೆ ಯಾವಾಗಲಾದರೂ ಹಾಗೆ ಹೇಳಿದ್ದೀರಾ ?'

'ಇಲ್ಲ. ಹೇಳಬೇಕೆಂದು ಅನೇಕಸಲ ಯೋಚಿಸಿದೆ ; ಆದರೆ ಅವಳನ್ನು ಕಂಡಾಗ ಈ ಸುದ್ದಿಯೆತ್ತುವ ಧೈರ್ಯ ಬರಲಿಲ್ಲ. ಅಲ್ಲದೆ ನನ್ನ ಹೊರತು ಬೇರೆ ಯಾರನ್ನೂ ಅವಳು ಮದುವೆಯಾಗಲಾರಳೆಂಬ ನಂಬಿಕೆ ನನಗಿತ್ತು.

'ಅವಳೇನಾದರೂ ನಿಮಗೆ ಅಂಥ ಭರವಸೆ ಕೊಟ್ಟಿದ್ದಳೆ ?'

'ನಮ್ಮ ನಡುವೆ ಮದುವೆಯ ಮಾತೇ ಎಂದಿಗೂ ಬರಲಿಲ್ಲ. ಆದರೂ ಅವಳು ನನ್ನ ವಿಷಯದಲ್ಲಿ ನಡೆದುಕೊಳ್ಳುತ್ತಿದ್ದ ರೀತಿ, ಆಡುತ್ತಿದ್ದ ಮಾತುಗಳ

ಭಾವ, ನೋಡುತ್ತಿದ್ದ ಕಣ್ಣುಗಳ ನೋಟ ಆ ನಂಬಿಕೆಯನ್ನು ನನ್ನಲ್ಲಿ ಹುಟ್ಟಿಸಿದ್ದುವು.'

'ನೀವು ನನಗಿಂತ ವಯಸ್ಸಿನಲ್ಲಿ ಚಿಕ್ಕವರು; ನಾನೊಂದು ಬುದ್ಧಿಯ ಮಾತನ್ನು ಹೇಳಿದರೆ ನೀವು ಕೋಪಿಸುವುದಿಲ್ಲ ತಾನೆ?'

'ಇದೇನು ಗೌರಮ್ಮನವರೆ, ಹೀಗೆ ಹೇಳುತ್ತೀರಿ? ನೀವೂ ನನ್ನ ತಾಯಿಯ ಹಾಗೆ; ಏನು ಬೇಕಾದರೂ ಹೇಳಿ.'

'ವಸಂತಳ ಕಷ್ಟಕ್ಕೆ ನೀವು ಹೊಣೆ.'

'ನಾನೆ! ಹೇಗೆ?'

'ಹೌದು, ನೀವೇ ಅದಕ್ಕೆ ಕಾರಣರು. ನಿಮ್ಮ ವರ್ತನೆಯಿಂದ ಅವಳ ಜೀವನವೂ ಹಾಳಾಯಿತು, ನಿಮ್ಮ ಆಸೆಯೂ ಮಣ್ಣುಗೂಡಿತು. ನಿಮಗೊದಗಿದ್ದ ಸದವಕಾಶವನ್ನು ನೀವು ಸಾರ್ಥಕಪಡಿಸಿಕೊಳ್ಳಲಿಲ್ಲ; ವಸಂತಳ ಮನಸ್ಸನ್ನರಿತು, ಅದನ್ನು ಒಲಿಸಿ, ಆಕರ್ಷಿಸಿ, ನಿಮ್ಮ ಹಿಡಿತದಲ್ಲಿ ನಿಲ್ಲಿಸಿಕೊಳ್ಳಲಿಲ್ಲ. ಅವಳ ನಗುವನ್ನು ಕಂಡು ಹಿಗ್ಗುತ್ತಿದ್ದಿರಿ, ಅವಳ ರೂಪವನ್ನು ಕಂಡು ಬೆರಗಾಗುತ್ತಿದ್ದಿರಿ, ಅವಳ ಮಾತನ್ನು ನಡೆಸುವುದು ನಿಮ್ಮ ಜೀವನದ ಧ್ಯೇಯವೆಂದು ತಿಳಿಯುತ್ತಿದ್ದಿರಿ; ಅಲ್ಲವೆ?'

'ನಾನು ಅವಳನ್ನು ಮನಸಾರ ಪ್ರೀತಿಸುತ್ತಿದ್ದೆ, ಅಮ್ಮ.'

'ಮನಸಿನಲ್ಲಿ ಪ್ರೀತಿಯನ್ನು ತುಂಬಿಕೊಂಡು ಅದನ್ನು ಉಪಯೋಗಿಸುವ, ವ್ಯಕ್ತಪಡಿಸುವ, ಪ್ರದರ್ಶಿಸುವ ಮಾರ್ಗ ತೋರದೆ ಅವಳ ಆರಾಧನೆಯಲ್ಲಿ ತೊಡಗಿದ್ದಿರಿ ಎನ್ನಿ. ಭಕ್ತಿಗೆ ವಶವಾಗುವ ದೇವಿಯಲ್ಲ ವಸಂತಾ. ಒಪ್ಪಿಗೆ, ಮೆಚ್ಚಿಗೆ, ಪ್ರಶಂಸೆ, ಕೈಂಕರ್ಯ, ಆರಾಧನೆಗಳು ಅವಳ ಮನಸಿನ ಹೊರ ಬಾಗಿಲನ್ನು ಸಹ ಮುಟ್ಟಲಾರವು. ಅವಳು ಗಂಡಸಿನಲ್ಲಿ ಮೆಚ್ಚುವುದು ಗಂಡುತನವನ್ನು, ನಡೆನುಡಿಗಳಲ್ಲಿ ಆಚಾರ ವಿಚಾರಗಳಲ್ಲಿ ಅವನು ವ್ಯಕ್ತಪಡಿಸುವ ಪೌರುಷವನ್ನು. ಸತ್ವರಹಿತವಾದ ಗಂಡಸಿನ ಜೀವನ ಸ್ತ್ರೀಯ ಬಾಳ್ವೆಗಿಂತ ಕಡೆಯೆನ್ನುವವಳು ಅವಳು. ಅವಳ ಮನಸ್ಸನ್ನು ನೀವರಿಯಲಾರದೆ ಹೋದಿರಿ.'

'ಅವಳು ನನ್ನನ್ನೇ ಪ್ರೀತಿಸುತ್ತಿದ್ದಳೆಂಬ ನಂಬಿಕೆ ನನಗಿದೆ ಗೌರಮ್ಮ. ಒಂದು ದಿನ ನಾನು ಬರದಿದ್ದರೆ ತಾನೇ ಹುಡುಕಿಕೊಂಡು ನಮ್ಮ ಮನೆಗೆ ಬರುತ್ತಿದ್ದಳು. ಪೇಟೆಗೆ ಹೋಗಲಿ, ಸಿನೀಮಾಕ್ಕೆ ಹೋಗಲಿ, ಕಾಫಿಬಾರಿಗೆ ಹೋಗಲಿ, ಎಲ್ಲಿ ಹೋದರೂ ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ. ಒಂದು ದಿನ ನನ್ನ ತಲೆಯನ್ನು ಸರಿಯಾಗಿ ಬಾಚಿಕೊಂಡಿರಲಿಲ್ಲ; ಅಂದು ತಾನೇ ಬಾಚಿ ಅದನ್ನು ಸರಿಪಡಿಸಿದಳು. ನನ್ನ ಉಡುಪು ಸರಿಯಿಲ್ಲದಿದ್ದರೆ ಅವಳಿಗೆ ಸಹಿಸುತ್ತಿರಲಿಲ್ಲ. ಇವೆಲ್ಲಾ ಅವಳ ಪ್ರೀತಿಯ ಗುರುತುಗಳಲ್ಲವೆ ಅಮ್ಮ?'

'ಪ್ರೀತಿಯ ಗುರುತು ನಿಜ. ವಸಂತಳಿಗೆ ಜೊತೆಯಾಗಿ ನೀವಿರುವುದಕ್ಕೆ ಬದಲಾಗಿ ಒಬ್ಬ ಕಾಲೇಜು ಗೆಳೆತಿಯಿದ್ದಿದ್ದರೂ ಅವಳು ಹೀಗೆಯೇ ವರ್ತಿಸುತ್ತಿದ್ದಳು. ಅದು ಗೆಳೆಯ ಗೆಳತಿಯರಲ್ಲಿ ಸಾಮಾನ್ಯವಾಗಿ ಇರಬಹುದಾದ, ಇಡಬಹುದಾದ ಪ್ರೀತಿ. ಗಂಡು ಹೆಣ್ಣುಗಳ ಪ್ರೇಮಕ್ಕೂ ಅದಕ್ಕೂ ಬಹಳ ವ್ಯತ್ಯಾಸವಿದೆ. ಹೆಣ್ಣು ತಾನು ಪ್ರೇಮಿಸುವ ಗಂಡಿನಲ್ಲಿ ಕಾಣಬಯಸುವುದು ತನ್ನಲ್ಲಿಲ್ಲದ, ತನಗೆ ದೊರೆಯಲಾರದ ಗುಣ ವಿಶೇಷವನ್ನು. ವಿದ್ಯೆಯಲ್ಲಿ ವಸಂತಳು ನಿಮಗಿಂತ ಕಡಮೆಯೆ? ಐಶ್ವರ್ಯದಲ್ಲಿ ಕಡಮೆಯೆ? ನೀವು ಅವಳಂತೆ ಅಲಂಕರಿಸಿಕೊಳ್ಳಬಲ್ಲಿರಾ? ಅವಳಷ್ಟು ಮಧುರವಾಗಿ ಮಾತಾಡಬಲ್ಲಿರಾ? ಇವುಗಳಿಂದ ಅವಳ ಮನಸ್ಸನ್ನು ಒಲಿಸಿಕೊಳ್ಳಲು ಸಾಧ್ಯವೆ ಸ್ವಾಮಿ?'

'ಅದು ಹೇಗೆ ಸಾಧ್ಯವೋ ನನಗೆ ತಿಳಿಯಲಿಲ್ಲ ಅಮ್ಮ. ಅವಳನ್ನು ಅರ್ಥಮಾಡಿಕೊಳ್ಳುವುದೇ ಒಂದು ಸಮಸ್ಯೆ.'

'ಜೇನು ಹುಳುಗಳ ರಾಣಿ ತನ್ನ ಗಂಡನನ್ನು ಹೇಗೆ ಆರಿಸುತ್ತಾಳೆ ಕೇಳಿದೀರಾ?'

'ಇಲ್ಲ, ಹೇಳಿ.'

'ಒಂದು ಗೂಡಿಗೆಲ್ಲಾ ಒಂದೇ ಹೆಣ್ಣಿರುತ್ತದೆ. ಅದೇ ಆ ಗೂಡಿನ ಸಾಮ್ರಾಜ್ಯದ ರಾಣಿ. ಸೃಷ್ಟಿಕರ್ತನು ಹಲವು ಅದ್ಭುತವಾದ ಶಕ್ತಿಗಳನ್ನು ಅವಳಿಗೆ ಕೊಟ್ಟಿದಾನೆ. ಅಂಥವಳು ತನ್ನ ಪತಿಯನ್ನಾರಿಸುವಾಗ ಒಂದು ಪರೀಕ್ಷೆ ನಡೆಸುತ್ತಾಳೆ. ತನ್ನೊಡನೆ ಹಾರಿ ವೇಗದಲ್ಲಿ ಯಾವಗಂಡು ತನ್ನನ್ನು ಹಿಂದಕ್ಕೆ ಹಾಕಲು ಸಮರ್ಥನೋ ಅಂಥವನನ್ನು ಮಾತ್ರ ಅವಳು ಆರಿಸಿ

ಕೊಳ್ಳುತ್ತಾಳೆ. ತನ್ನ ಗಂಡನಾಗುವನು ತನಗಿಂತ ಒಂದು ಕೈ ಮೇಲಾಗಿರ ಬೇಕೆಂದು ಅವಳ ಬಯಕೆ. ವಸಂತಳೂ ಅಂತಹ ಒಬ್ಬ ರಾಣಿ. ಸೋಲಿನಲ್ಲಿ ತನ್ನ ಆನಂದವನ್ನು ಹುಡುಕುವ ಚೇತನ ಅವಳದು. ಜೀವನದ ಸಾಮಾನ್ಯ ಆಗು ಹೋಗುಗಳು, ಆಸೆ ಪ್ರತ್ಯಾಸೆಗಳು, ಸುಖ ದುಃಖಗಳು ಅವಳ ಮೇಲೆ ಯಾವ ಪರಿಣಾಮವನ್ನೂ ಮಾಡಲಾರವು.'

'ಮುಂದೇನು ಮಾಡಲಿ ಅಮ್ಮ?'

'ಏನು ಹೇಳುವುದಕ್ಕೂ ನನಗೆ ತೋರದು ಸ್ವಾಮಿ. ವಸಂತಾದೇವಿಯು ನಿನ್ನೆಯೇ ಬರಬೇಕಾಗಿತ್ತು; ಬರದೆ ನಿಂತಿರುವುದು ನೋಡಿದರೆ ಅಲ್ಲಿ ಏನು ನಡೆದಿದೆಯೋ ಎಂದು ಸಂದೇಹವಾಗಿದೆ.'

'ನಾವು ಹೋಗಿ ನೋಡಬಹುದಲ್ಲವೆ?'

'ಅದು ಸರಿಯಲ್ಲ. ತನ್ನ ಜೀವವನ್ನು, ಶೀಲವನ್ನು ಕಾಪಾಡಿ ಕೊಳ್ಳುವ ಶಕ್ತಿ ವಸಂತಾದೇವಿಗಿದೆ. ಇತರರು ಅವಳ ರಕ್ಷಣೆಗೆಂದು ಹೋಗುವು ದನ್ನು ಅವಳು ಸಹಿಸುವುದಿಲ್ಲ'

'ರಾಕ್ಷಸರ ನಡುವೆ ಸೀತೆಯನ್ನು ಬಿಟ್ಟದ್ದ ಹಾಗೆ ಆ ಕೂಲಿಗಾರರ ಮಧ್ಯೆ ಅವಳನ್ನು ಬಿಟ್ಟು ಸುಮ್ಮನಿರುವುದು ಹೇಗಮ್ಮ?'

'ವಸಂತಾದೇವಿಯು ರಾಕ್ಷಸರ ನಡುವೆ ಇಲ್ಲವಲ್ಲ! ತನ್ನ ಗಂಡನ ಮನೆಯಲ್ಲಿ ತಾನೆ ಇದ್ದಾಳೆ?'

'ಒಳ್ಳೆಯ ಗಂಡ! ಇದೇನು ಆಟವೋ, ವಿನೋದವೋ, ದಿಟವೋ ಯಾವುದೂ ತಿಳಿಯದು.'

'ನಿಮಗೆ ಮಾತ್ರವೇ ಅಲ್ಲ; ನನಗೂ ಇದರ ಕೊನೆಯೇನೆಂದು ತಿಳಿಯದು. ಬಹುಶಃ ವಸಂತಾದೇವಿಗೂ ತಿಳಿದಿದೆಯೋ ಇಲ್ಲವೋ ಹೇಳಲಾರೆ.'

ಇವರಿಷ್ಟು ಮಾತನಾಡುತ್ತಿರಬೇಕಾದರೆ ಟಪಾಲು ಜವಾನನು ಬಂದು ಗೌರಮ್ಮನಿಗೆ ಒಂದು ಕಾಗದವನ್ನು ಕೊಟ್ಟ. ಸ್ವಾಮಿಯು ಕುತೂಹಲದಿಂದ ಅದರ ಕಡೆ ನೋಡುತ್ತಿದ್ದ. ಗೌರಮ್ಮನು ಅದನ್ನು ಒಡೆದು ಓದಿಕೊಂಡು ಸಂತೋಷವನ್ನು ಸೂಚಿಸಿದಳು. ಅದುವರೆಗೂ ಮುಳ್ಳು ಮೊನೆಯಮೇಲೆ ಕುಳಿತಹಾಗಿದ್ದ ಸ್ವಾಮಿಯು

'ವಸಂತಾದೇವಿಯ ಕಾಗದ ತಾನೆ?'

'ಹೌದು. ಅವಳು ಸುರಕ್ಷಿತವಾಗಿದಾಳೆ. ಇನ್ನೂ ಒಂದು ತಿಂಗಳು ಗಂಡನ ಮನೆಯಲ್ಲಿರುವುದಾಗಿ ಬರೆದಿದಾಳೆ.'

'ಒಂದು ತಿಂಗಳೆ ?'

'ಹೌದು, ಒಂದು ತಿಂಗಳು.'

'ಹಾಗಾದರೆ ನಾನು ಅಲ್ಲಿಗೆ ಹೋಗಿ ಬರುತ್ತೇನೆ.'

'ಬೇಡಿ, ಸ್ವಾಮಿ. ಯಾರೂ ಅಲ್ಲಿಗೆ ಬರಕೂಡದೆಂದು ಬರೆದಿದಾಳೆ. ನಾನು ಸಹ ಹೋಗುವಂತಿಲ್ಲ.'

'ಅದೇಕೆ ?'

'ಅದು ಅವಳ ಅಪೇಕ್ಷೆ. ಅದನ್ನು ನಡೆಸುವುದು ನಮ್ಮ ಕೆಲಸ.' ಸ್ವಾಮಿಯು ನಿರುಪಾಯನಾಗಿ ಅಲ್ಲಿಂದ ಹೊರಟ.

ಅಂದು ಸಂಜೆಯ ಪತ್ರಿಕೆಗಳಲ್ಲಿ ವಸಂತಾದೇವಿಯು ಕೂಲಿಗಾರರ ಕೇರಿಯಲ್ಲಿ ತನ್ನ ಗಂಡನ ಮನೆಯಲ್ಲಿ ವಾಸಿಸುತ್ತಿರುವ ಸುದ್ದಿ ಪ್ರಕಟವಾಗಿತ್ತು.

— ೨೩ —

ರಾತ್ರಿ ಎರಡು ಮೂರು ವೇಳೆ ವಸಂತಾದೇವಿಗೆ ಎಚ್ಚರವಾಯಿತು ; ಕೇರಿಯಲ್ಲಿ ಯಾರ ಮನೆಗಳಲ್ಲಿಯೋ ಇದ್ದ ಕೋಳಿಗಳು ಒಂದೇ ಸಮನೆ ಹತ್ತಾರುಸಲ ಕೂಗಿ ಸ್ವಲ್ಪಹೊತ್ತು ಸುಮ್ಮನಿದ್ದು ಮತ್ತೆ ಕೂಗುತ್ತಿದ್ದುವು. ಕೋಳಿಗಳು ಕೂಗುವುದು ಬೆಳಗಾಗುವುದನ್ನು ಸೂಚಿಸುವುದಕ್ಕೆ ಎಂದು ವಸಂತಳು ಪುಸ್ತಕಗಳಲ್ಲಿ ಓದಿದ್ದಳು ; ಯಾವುದೋ ಚಲನಚಿತ್ರದಲ್ಲಿ ಅವರ ಕೂಗನ್ನು ಕೇಳಿದ್ದಳು. ಆದರೆ ಈ ಪ್ರಾಣಿಗಳು ಇಲ್ಲಿ ರಾತ್ರಿಯೆಲ್ಲಾ ಕಿರಿಚಿ ಕೊಳ್ಳುತ್ತಿರುವಂತೆ ಅವಳಿಗೆ ತೋರಿತು. ಮನುಷ್ಯನು ಅವುಗಳ ಸಂತಾನ ವನ್ನು ಅತಿಯಾಗಿ ಬೆಳೆಯಗೊಡದೆ ಅದು ಮೊಟ್ಟೆಯಾಗಿರುವಾಗ, ಮರಿ ಯಾಗಿರುವಾಗ, ಮೊಟ್ಟೆಗಳನ್ನಿಟ್ಟು ಮರಿಮಾಡಬಲ್ಲಷ್ಟು ವಯಸ್ಸಿನಲ್ಲಿರುವಾಗ ವಿವಿಧ ರೀತಿಯಲ್ಲಿ ತನ್ನ ಹೊಟ್ಟೆಗೆ ಸೇರಿಸಿ ಆ ಪ್ರಾಣಿಗಳ ಸಂಖ್ಯೆಯನ್ನು ಅದಷ್ಟು ಕಡಮೆ ಮಾಡಿಯೇ ಉಳಿದ ಹಲಕೆಲವು ಹೀಗೆ ನಿದ್ರೆ ಕೆಡಿಸುತ್ತಿವೆ ; ಇನ್ನು ಬ್ರಹ್ಮನು ಸೃಷ್ಟಿಸಿದ ಕೋಳಿಗಳ ಸಂಖ್ಯೆ ಒಂದೂ ಮುಕ್ಕಾಗದೆ ಉಳಿದಿದ್ದರೆ ಮನುಷ್ಯನ ನಿದ್ರೆಯ ಗತಿಯೇನು !

ಕೋಳಿಗಳ ಕೂಗಿನ ಜೊತೆಗೆ ಬೀದಿಯಲ್ಲಿ ಗಾಡಿಗಳ ಓಡಾಟ, ಜನರ ಓಡಾಟ ಇವೂ ಕೇಳಿಸತೊಡಗಿದುವು. ಬೆಳಗಾಯಿತೇನೋ ಎಂದು ವಸಂತ ತಲೆಯೆತ್ತಿ ಚಿಕ್ಕದಾಗಿದ್ದ ಕಿಟಕಿಯಕಡೆ ನೋಡಿದಳು. ಹೊರಗಡೆ ಇನ್ನೂ ಕತ್ತಲಾಗಿತ್ತು. ಇಲ್ಲಿರುವ ಕೋಳಿಗಳೇ ಅಲ್ಲದೆ ಜನರೂ ರಾತ್ರಿವೇಳೆ ನಿದ್ರೆ ಮಾಡುವಂತಿಲ್ಲ ಎಂದುಕೊಂಡು ಪುನಃ ದಿಂಬಿನಮೇಲೆ ತಲೆಯಿಟ್ಟಳು.

ಆ ವೇಳೆಗೆ ನಟೇಶನು ಮಲಗಿದ್ದ ಕೋಣೆಯ ಬಾಗಿಲು ತೆರೆದ ಸದ್ದಾಯಿತು. ವಸಂತಳು ಕುತೂಹಲದಿಂದ ಅತ್ತಕಡೆಯೇ ನೋಡುತ್ತಿದ್ದಳು. ಗಂಡಸಿನ ಮನಸ್ಸನ್ನು ನಂಬುವಂತಿಲ್ಲ; ರಾತ್ರಿ ನಡೆಸಿಕೊಟ್ಟ ಮಾತನ್ನು ಬದಲಾಯಿಸಿದರೆ! ನಟೇಶನು ಸದ್ದಾಗದಂತೆ ಹೆಜ್ಜೆಯಿಡುತ್ತ ಲಾಂದ್ರದಬಳಿಗೆ ಬಂದು ಸಣ್ಣಗೆ ಮಿನುಗುತ್ತಿದ್ದ ಆದರ ದೀಪವನ್ನು ಸ್ವಲ್ಪ—ಸ್ವಲ್ಪವೇ ಸ್ವಲ್ಪ ದೊಡ್ಡದುಮಾಡಿ ಒಮ್ಮೆ ಹೆಂಡತಿಯಕಡೆ ನೋಡಿದ. ಅವಳು ಹಾಯಾಗಿ ನಿದ್ರಿಸುತ್ತಿರುವಂತೆ ಕಂಡಿತು. ಅಲ್ಲಿಂದ ಆ ದೀಪವನ್ನು ತೆಗೆದುಕೊಂಡು ಬಚ್ಚಲ ಮನೆಯಬಳಿಗೆ ಹೋದ. ಅಲ್ಲಿ ನೀರು ಬೀಳುವ ಸದ್ದಿನಿಂದ ನಟೇಶನು ಮುಖ ತೊಳೆಯುತ್ತಿರಬೇಕೆಂದು ವಸಂತಳು ತಿಳಿದಳು.

ಮುಖ ತೊಳೆದಾದಮೇಲೆ ನಟೇಶನು ಹಿಂತಿರುಗಿ ಬಂದು ಒಲೆಹೊತ್ತಿಸಿ ಕಾಫಿ ಮಾಡಿದ. ಅವನು ಒಲೆ ಹೊತ್ತಿಸುವಾಗ, ಕಾಫಿ ಶೋಧಿಸುವಾಗ, ಬೆರಸುವಾಗ ತಾನೇ ಎದ್ದು ಅವನ ಕೈಯಿಂದ ಆ ಕೆಲಸವನ್ನು ತಾನು ತೆಗೆದು ಕೊಳ್ಳಬೇಕೆಂದು ಈ ಹೆಣ್ಣಿನ ಮನಸ್ಸು ಹೇಳುತ್ತಿತ್ತು. ಆದರೆ ತಾನು ಹಾಗೆ ಮಾಡುವುದು ಅವನೊಡನೆ ಹೆಚ್ಚು ಮಾತಿಗೆ ಹೆಚ್ಚು ಸಲಿಗೆಗೆ ದಾರಿಹಾಕಿ ಕೊಡುತ್ತದೆ; ಅದು ಬೇಡ ಎಂದು ಯೋಚಿಸಿ ಅವಳು ಸುಮ್ಮನಾದಳು. ಆದರೆ ಅವನೇ ಕಾಫಿ ಮಾಡುತ್ತಿರುವನೇಕೆ? ತನ್ನನ್ನು ಏಳಿಸದೆ, ಎಚ್ಚರಗೊಳಿಸ ಬಹುದಾದ ಒಂದು ಸದ್ದನ್ನೂ ಮಾಡದೆ ನಿದ್ದೆಗೆಟ್ಟು ಇಷ್ಟು ಹೊತ್ತಿಗೇ ಕಾಫಿ ಮಾಡುತ್ತಿರುವುದು ತನಗಾಗಿಯೆ ಅಥವಾ ಅವನ ನಿತ್ಯ ವಿಧಿಯು ಇದೇನೆ ಎಂಬ ಪ್ರಶ್ನೆ ಅವಳ ತಲೆಯಲ್ಲಿ ಹೊಕ್ಕಿತು.

ಕಾಫಿಯ ಕಷಾಯ ಇಳಿಯುತ್ತಿರುವಾಗ ನಟೇಶನು ಇಂದಿರೆಯು ಮಲಗಿದ್ದೆಡೆಗೆ ಬಂದು ಅವಳನ್ನು ಅಲುಗಾಡಿಸಿ ಮೆಲ್ಲನೆ ಕಿವಿಯಬಳಿ 'ಇಂದಿರಾ, ಇಂದಿರಾ' ಎಂದು ಕೂಗಿದ. ಇಂದಿರೆಯು ಎದ್ದು ಕುಳಿತು

'ಏನಣ್ಣ, ಇಷ್ಟು ಹೊತ್ತಿಗೇ........' ಎಂದು ಸನನ್ನೋ ಗಟ್ಟಿಯಾಗಿ ಹೇಳ ಹೊರಟಳು. ನಟೇಶನು ತುಟಿಯಮೇಲೆ ಬೆರಳಿರಿಸಿಕೊಂಡು ಸದ್ದು ಮಾಡ ಬೇಡವೆಂದು ಸೂಚಿಸಿ ಮಲಗಿದ್ದ ವಸಂತಳಕಡೆ ಕೈ ತೋರಿಸಿದ. ಇಂದಿರೆಯು ಅದನ್ನರಿತು ತಾನು ಮಾಡಿದ ತಪ್ಪನ್ನು ತಿದ್ದಿಕೊಳ್ಳುವವಳಂತೆ, ಬಹು ಜಾಗರೂ ಕತೆಯಿಂದ ಸದ್ದನ್ನು ಅಣಗಿಸಿಕೊಳ್ಳುವವಳಂತೆ, ಎದ್ದು ದಾಟು ಹೆಜ್ಜೆಗಳ ನ್ನಿಡುತ್ತ ಕಾಫಿಯ ಒಲೆಯವರೆಗೆ ಹೋಗಿ ಪಿಸುಮಾತಿನಂತೆ ತೋರುವ ತುಂಬಿದುಸಿರಿನಲ್ಲಿ ಕೇಳಿದಳು.

'ಏನಣ್ಣ. ಇಷ್ಟು ಹೊತ್ತಿಗೇ ಎದ್ದುಬಿಟ್ಟಿದೀಯೆ ?'

'ನಾನು ಎದ್ದಿರೋದು ಇರಲಿ ; ನೀನು ಬೇಗ ಒಳಗೆ ಹೋಗಿ ಮುಖ ತೊಳಕೊಂಡು ಬಾ.'

'ಅದೇನಣ್ಣ ಇವತ್ತು ಇಷ್ಟು ಅವಸರ ?'

'ಹೋಗೇ ಸುಮ್ಮನೆ, ಹುಡುಗರು ಹೇಳಿದಮಾತು ಕೇಳಬೇಕು.' ಇಂದಿರೆಯು ಸ್ನಾನದ ಮನೆಗೆ ಹೋಗಿ ಎರಡು ನಿಮಿಷದಲ್ಲಿ ಬಂದಳು.

ನಟೇಶ 'ನಾನು ಸ್ನಾನಮಾಡಿ ಬರುತ್ತೇನೆ. ಸ್ವಲ್ಪ ಒಲೆಕಡೆ ನೋಡಿಕೊ' ಎಂದು ಹೇಳಿ ಬಚ್ಚಲು ಮನೆಯೊಳಕ್ಕೆ ಹೋದ. ಅವನು ಬಾಗಿಲು ಮುಚ್ಚುವುದನ್ನು ಕಾದಿದ್ದ ಇಂದಿರೆಯು ಎರಡೇ ಹೆಜ್ಜೆಗೆ ವಸಂತಳ ಹತ್ತಿರಕ್ಕೆ ಬಂದು ಸಡಗರದಿಂದ ಅವಳನ್ನು ಹೊರಳಿಸುತ್ತ 'ಅತ್ತಿಗೆ, ಅತ್ತಿಗೆ' ಎಂದು ಅದೇ ಪಿಸುಧ್ವನಿಯಲ್ಲಿ ಕೂಗಿದಳು. ಅತ್ತಿಗೆ ಎಚ್ಚರವಾದಂತೆ ನಟಿಸಿ

'ಆಗಲೇ ಬೆಳಗಾಯಿತೆ ಇಂದಿರಾ' ಎಂದಳು.

'ಬೆಳಗಾಯಿತು ! ಅಲ್ಲಿ ನೋಡು, ಆಗಲೇ ಕಾಫಿ ತಯಾರಾಗಿಬಿಟ್ಟಿದೆ.'

'ಓ ! ಎಷ್ಟುಬೇಗ ಮಾಡಿಬಿಟ್ಟಿದೀಯೆ ! ನೀನು ಏಳುತ್ತಲೇ ನನ್ನನ್ನೂ ಏಳಿಸಬಾರದಾಗಿತ್ತೇನೆ ?'

'ಎದ್ದವರು ಯಾರು, ಕಾಫಿ ಮಾಡಿದವರು ಯಾರು ? ಇವತ್ತು ನಿಮ್ಮ ಯಜಮಾನರೇ ಮಾಡಿದಾರೆ.'

'ಇವತ್ತು ಎಂದರೆ—ದಿನಾಗಲೂ ?'

'ದಿನಾಗಲೂ ನಾನು ಮಾಡುತಿದ್ದೆ. ಇವತ್ತು ರಾಣೀಸಾಹೇಬರು ಬಂದಿದಾರೆ ಅಂತ ಅಣ್ಣನೇ ಮಾಡಿದಾನೆ. ಪಾಪ, ರಾತ್ರಿಯೆಲ್ಲಾ ಅಣ್ಣನಿಗೆ ನಿದ್ದೆಯೇ ಬರಲಿಲ್ಲ ಅಂತ ಕಾಣುತ್ತೆ.'

ತುಂಟತನದ ನಗುವೊಂದು ಇಂದಿರೆಯ ತುಟಿಯಮೇಲೆ ಸುಳಿಯುತ್ತಿತ್ತು. ವಸಂತಳ ಮುಖ ಅವಳಿಗೆ ತಿಳಿಯದಂತೆಯೇ ಕೊಂಚ ಕೆಂಪಾಯಿತು 'ಹೋಗೇ, ಹುಚ್ಚು ಹುಡುಗಿ' ಎನ್ನುತ್ತ ಮೃದುವಾಗಿ ಅವಳ ಕೆನ್ನೆಗೆ ಒಂದು ಹುಸಿ ಏಟನ್ನು ಕೊಟ್ಟಳು. ತನಗಾಗಿಯೇ ನಟೇಶನು ಕಾಫಿ ಮಾಡಿದನೆಂಬ ಅವ್ಯಕ್ತ ಆನಂದವು ಆ ಏಟಿಗೆ ಪ್ರೇರಕವಾಗಿತ್ತು.

ಅದುವರಿಗೆ ನಟೇಶನು ಬಚ್ಚಲು ಮನೆಯ ಬಾಗಿಲು ತೆಗೆದ ಸದ್ದಾಯಿತು. ಇಂದಿರೆ ಏನೂ ತಿಳಿಯದವಳಂತೆ ಒಲೆಯಮುಂದಕ್ಕೆ ಸರಿಹು

'ರಾತ್ರಿ ನಿದ್ದೆ ಬಂತೆ ಅತ್ತಿಗೆ ?' ಎಂದಳು.

ನಾದಿನಿಯ ಕೋರಿಕೆಯಂತೆ ವಸಂತಳು ಎದ್ದು ಮುಖ ತೊಳೆಯಲು ಬಚ್ಚಲು ಮನೆಗೆ ಹೋದಳು. ಇಂದು ಅವಳಿಗೆ ಹೊಸ ರೀತಿಯ ಅನುಭವ. ಮಲಗಿದ್ದ ಕಡೆಗೆ ಬಿಸಿನೀರನ್ನು ತಂದು ಸೋಪು ಟವಲುಗಳನ್ನು ಸಿದ್ಧವಾಗಿರಿಸಿಕೊಂಡು ಸಮಯವನ್ನು ಕಾಯುತಿರುವ ಸೇವಕರಿಲ್ಲ; ಸವಿಯಾಗಿ ಮಾತಾಡಿ ಕೈ ಹಿಡಿದು ಏಳಿಸಿ ಮುಖ ತೊಳೆಸಿ ಒರೆಸಿ ಕೆನ್ನೆಗೆ ಮುದ್ದಿಡುವ ಗೌರಮ್ಮನಿಲ್ಲ; ನೀರು—ಅದೂ ತಣ್ಣೀರು—ಇರುವೆಡೆಗೆ ತಾನೇ ಹೋಗಿ ಮುಖ ತೊಳೆದುಕೊಳ್ಳಬೇಕು. ಆ ತಣ್ಣೀರು ಮುಖಕ್ಕೆ ಬಿದ್ದಕೂಡಲೇ ಮೈಯೆಲ್ಲ ಜಿಲ್ಲೆಂದಿತು. ಒಮ್ಮೆ, ಎರಡುಸಲ, ಮೂರನೆಯ ಸಲ ಮುಖಕ್ಕೆ ನೀರು ಬಿದ್ದಾಗ ಏನೋ ಒಂದು ತೆರದ ಸಂತೋಷವಾಯಿತು; ಮತ್ತೆ ಮತ್ತೆ ನೀರನ್ನು ಮುಖದಮೇಲೆ ಕಣ್ಣಮೇಲೆ ಹಾಕಿಕೊಂಡಳು. ಹುಟ್ಟಿದಂದಿನಿಂದ ತಾನು ಅನುಭವಿಸದೆ ಇದ್ದ ಸ್ವಾತಂತ್ರ್ಯವನ್ನು ಸುಖವನ್ನು ಇಂದು ಕಾಣುತ್ತಿರುವಂತೆ, ತನ್ನ ಶ್ರೀಮಂತಿಕೆಯ ಜೀವನಕ್ಕಿಂತ ಇದು ಹಿತಕರವಾಗಿರುವಂತೆ ಅವಳಿಗೆ ತೋರಿತು.

ವಸಂತಳು ಬಚ್ಚಲು ಮನೆಯಿಂದ ಹಿಂತಿರುಗುವಾಗ ಅಣ್ಣ ತಂಗಿಯರಿಗೆ ಮೆಲ್ಲಗೆ—ಆದರೆ ವಸಂತಳಿಗೆ ಕೇಳಿಸಬಹುದಾದ ದನಿಯಲ್ಲಿ—ಮಾತು ನಡೆಯುತ್ತಿತ್ತು, ಕಾಫಿ ಮಾಡಿದ ವಿಚಾರವಾಗಿ.

'ಅಲ್ಲವೆ, ತುಂಟಿ. ಕಾಫಿ ನಾನು ಮಾಡಿದೆ ಅಂತ ಅವಳಿಗೆ ಯಾಕೆ ಹೇಳಿದೆ?'

'ಹೇಳಿದರೆ ತಪ್ಪೇನು?'

'ಹಾಗೆಲ್ಲಾ ಹೇಳಬಾರದು; ಸದರವಾಗಿಬಿಡುತ್ತೆ.'

'ಇದ್ಯಾಕಣ್ಣ, ಇಷ್ಟು ಹೆದರಿಕೊಳ್ಳುತಿ ಅತ್ತಿಗೆಗೆ?'

'ನಾನು ಹೆದರಿಕೊಳ್ಳುತ್ತೇನೆಯೆ! ಉ್ಹ!'

ವಸಂತಳು ಬರುವ ಸುಳಿವು ತಿಳಿದು ಮಾತು ಬದಲಾಯಿಸಿತು.

ಕಾಫಿ ಕುಡಿಯುತ್ತ ವಸಂತಳು ನಾದಿನಿಯಕಡೆ ನೋಡಿ ಒಂದು ತುಂಟತನದ ನಗುವನ್ನು ಬೀರಿ

'ಕಾಫಿ ಬಹಳ ಚೆನ್ನಾಗಿ ಮಾಡಿದೀಯೆ ಇಂದಿರಾ' ಎಂದಳು.

ನಟೇಶನಿಗೆ ಆ ಮಾತಿನ ಹಿಂದಿನ ಅಣಕವು ಅರ್ಥವಾಯಿತು. ಅದಕ್ಕೆ ಪ್ರತೀಕಾರವೆಂಬಂತೆ

'ಈಗ ಒಳ್ಳೇ ಕಾಫಿ ಕುಡಿದಹಾಗಲ್ಲ; ಮಧ್ಯಾಹ್ನ ಊಟಕ್ಕೆ ಈರುಳ್ಳಿ ಆಲೂಗಡ್ಡೆ ಬದನೆಕಾಯಿ ಹಾಕಿ ಹುಳಿ ಮಾಡಬೇಕೂ ಅಂತ ಹೇಳು ನಿನ್ನ ಅತ್ತಿಗೆಗೆ' ಎಂದ.

'ಅದಕ್ಕೆ ನಾನೇನೂ ಹೆದರುವುದಿಲ್ಲ ಅಂತ ಹೇಳು ನಿಮ್ಮ ಅಣ್ಣನಿಗೆ' ಎಂದು ವಸಂತಳಿಂದ ಉತ್ತರ ಬಂತು.

'ಇದೀಗ ಸರಿ! ನಿಮ್ಮಿಬ್ಬರ ಮಧ್ಯೆ ನಾನೊಂದು ಪೋಸ್ಟ್ ಆಫೀಸು' ಎಂದು ಗೊಣಗಿದಳು ಇಂದಿರೆ.

— ೨೪ —

ನಟೇಶನು ಕೆಲಸಕ್ಕೆ ಹೋದಮೇಲೆ ಇಂದಿರೆಯು ಸ್ಕೂಲಿಗೆ ಹೋಗುವುದಕ್ಕೆ ಸಿದ್ಧಳಾದಳು. ಮಾತಿನ ಜೋರಿನಲ್ಲೇನೋ ವಸಂತಳು ನಟೇಶನ ಸವಾಲನ್ನು ಎದುರಿಸಿದ್ದಳು; ಆದರೆ ಅದನ್ನು ಗೆಲ್ಲುವುದು ಹೇಗೆಂದು ಹೆದರಿಕೆ ಹುಟ್ಟಿತು. ತನಗಿಂತ ಎಷ್ಟೋ ಚಿಕ್ಕವಳಾದ ಇಂದಿರೆಯ ಆಶ್ರಯವಿಲ್ಲದೆ ಬೇರೆ ದಾರಿಯೇ ಇಲ್ಲ. ಆದರಿಂದ

'ಬೇಗ ಬಂದುಬಿಡುತೀಯಾನೆ ಇಂದಿರಾ?' ಎಂದಳು. ಇಂದಿರೆಯು ಬೇಕೆಂದು ಕೀಟಲೆ ಮಾಡುತ್ತ

'ಇವತ್ತು ಸ್ಕೂಲು ಮುಗಿಯಬೇಕಾದರೆ ಹನ್ನೆರಡು ಗಂಟೆ ಆಗುತ್ತೆ ಅತ್ತಿಗೆ' ಎಂದು ಉತ್ತರ ಕೊಟ್ಟಳು.

'ಹಾಗಾದರೆ ನನ್ನ ಗತಿ ?'

'ನಿನಗೇನು ಕಷ್ಟ!'

'ನಿಮ್ಮ ಅಣ್ಣ ಹನ್ನೆರಡು ಗಂಟೆಗೆ ಬರುತಾರೇನೋ ?'

'ಹೌದು. ಅಷ್ಟು ಹೊತ್ತಿಗೆ ನಾನೂ ಬಂದುಬಿಡುತ್ತೇನೆ.'

'ಸರಿ, ಈ ದಿನ ಈರುಳ್ಳಿ ಹುಳಿ ಆದಹಾಗೇ ಆಯ್ತು. ನಿನ್ನ ದಮ್ಮಯ್ಯಾನಮ್ಮ; ಅಷ್ಟು ಹೊತ್ತು ಮಾಡಬೇಡ. ಹತ್ತು ಗಂಟೆಗೆಲ್ಲಾ ಕೇಳಿಕೊಂಡು ಬಂದುಬಿಡಪ್ಪ.'

'ಊಹೂ ನಾನು ಬರೋಲ್ಲ.'

'ನೋಡಿದೋ, ನೋಡಿದೋ, ನನ್ನ ಮೇಲೆ ನಿನಗೆ ಪ್ರೀತಿ ಇಲ್ಲ ವೇನಮ್ಮ ?'

'ಇದೆ, ಬೇಕಾದಷ್ಟಿದೆ.'

'ಹಾಗಿದ್ದರೆ ಹತ್ತು ಗಂಟೆಗೆ ಬಂದುಬಿಡಮ್ಮ'

'ಊ.... ಬರಿಯ ಬಾಯಿಮಾತಿನ ಪ್ರೀತಿ ನನಗೇನೂ ಬೇಡ.'

'ಇನ್ನೇನು ಬೇಕು ? '

'ಎಲ್ಲಿ ನನ್ನ ಕೆನ್ನೆಗೆ ಒಂದು ಮುತ್ತುಕೊಡು ನೋಡೋಣ

'ಇಷ್ಟೇನೆ! ಒಂದಲ್ಲ ನಾಲ್ಕು ತೊಗೋ.'

'............ಈಗ ಬರುತೇನೆ, ಹತ್ತುಗಂಟೆ ಠಾ ಎನ್ನುವಾಗ್ಗೆ ಬಂದು ಬಿಡುತ್ತೇನೆ. ಅದರೊಳಗಾಗಿ ಎರಡು ಸೇರು ಈರುಳ್ಳಿ, ಒಂದು ಸೇರು ಆಲೂ ಗಡ್ಡೆ, ಅರ್ಧಸೇರು ಬದನೆಕಾಯಿ, ಒಂದು ತೆಂಗಿನಕಾಯಿ, ಮರಾಟಿ ಮೊಗ್ಗು ದಾಲ್ಚಿನ್ನಿ ಇಷ್ಟೂ ತಂದಿಟ್ಟಿರು. ಆಗಬಹುದೊ ?'

'ಆಗಬಹುದು.'

ಇಂದಿರೆ ಸಂತೋಷದಿಂದ ಅತ್ತಿಗೆಯ ಕೆನ್ನೆಗೆ ಒಂದು ಪ್ರತಿಮುತ್ತು ಕೊಟ್ಟು ಸ್ಕೂಲಿಗೆ ಓಡಿದಳು.

ವಸಂತಳು ಆ ಹುಡುಗಿಯು ಮುತ್ತಿಟ್ಟ ಕೆನ್ನೆಯನ್ನು ಒರಸಿಕೊಳ್ಳುತ್ತ ಬಡವರ ಮನೆಯಲ್ಲಿ ಎಂಥ ರತ್ನ ಹುಟ್ಟಿದೆ ಎಂದು ಅವಳನ್ನು ಮೆಚ್ಚುತ್ತ ಸಾಮಾನುಗಳನ್ನು ತರಲು ಪೇಟೆಯಕಡೆ ನಡೆದಳು.

ಮನೆ ಬಿಟ್ಟು ಎರಡು ಹೆಜ್ಜೆ ಹೋಗುವಷ್ಟರಲ್ಲಿ ಮೀನಾಕ್ಷಿ ಸಿಕ್ಕಿದಳು. ಮಗುವನ್ನೆತ್ತಿಕೊಂಡು ಎಲ್ಲಿಗೋ ಹೋಗುತ್ತಿದ್ದ ಅವಳು ವಸಂತಳನ್ನು ಕಂಡು ಹಾಗೇ ನಿಂತುಕೊಂಡಳು. ವಸಂತಳಿಗೂ ಅವಳನ್ನು, ಅವಳಂತೆ ಆ ಕೇರಿಯ ಇತರ ಹೆಂಗಸರನ್ನು ಮಾತನಾಡಿಸಬೇಕು, ಆ ಕೇರಿಯಲ್ಲಿರುವಷ್ಟು ದಿನವೂ ಒಳ್ಳೆಯವಳೆಂದು ಹೆಸರು ಪಡೆಯಬೇಕು ಎಂದಾಸೆ; ಆದರಿಂದ ಮೀನಾಕ್ಷಿಯ ಮುಖವನ್ನು ನೋಡಿ ಸಂತೋಷವನ್ನು ಸೂಚಿಸಿ ನಕ್ಕಳು. ಮೀನಾಕ್ಷಿಯದು ಸ್ವಲ್ಪ ಸಿಡುಕು ಸ್ವಭಾವ; ಜೊತೆಗೆ ಪಟ್ಟಣದಿಂದ ಬಂದ ಈ ಹಣದ ಡಬ್ಬಿಯಿಂದ ತನಗೆ ಆಗಬೇಕಾದುದೇನೆಂಬ ತಿರಸ್ಕಾರ; ಆದರಿಂದ ವಸಂತಳ ನಗುವಿಗೆ ಪ್ರತಿಯಾಗಿ ನಗದೆ ಸಾಂಪ್ರದಾಯಿಕವಾಗಿ

'ಪೇಟೆಗೆ ಹೊರಟರೇನೋ' ಎಂದಳು.

'ಹೌದು, ಸ್ವಲ್ಪ ತರಕಾರಿ ತರಬೇಕು.'

ವಸಂತಳಿಗೆ ಮಗುವನ್ನು ಮಾತಾಡಿಸಬೇಕು, ಮುದ್ದಿಸಬೇಕು ಎಂದಾಸೆ. 'ಬಾ ಪುಟ್ಟ ನನ್ನ ಹತ್ತಿರಕ್ಕೆ' ಎಂದು ಕರೆದಳು. ಅದು ಮೀನಾಕ್ಷಿಯ ಮಗು ತಾನೆ! ಮುಖವನ್ನು ಅತ್ತ ತಿರುಗಿಸಿಕೊಂಡು ತಾಯಿಯನ್ನು ಬಿಗಿಯಾಗಿ ತಬ್ಬಿಕೊಂಡಿತು.

'ಅದು ಹಾಗೆಲ್ಲಾ ಬರುವ ಮಗುವಲ್ಲ; ಹೊಸ ಮುಖ. ಹೋಗುತೀ ನಮ್ಮ, ನನ್ನ ಹೊತ್ತುಕೊಂಡು ಹೋಗುವಷ್ಟು ಕೆಲಸ ಇದೆ.'

ಮೀನಾಕ್ಷಿ ಹೊರಟುಹೋದಳು. ಅವಳು ತನ್ನನ್ನು ಅಲಕ್ಷ್ಯವಾಗಿ ಕಾಣುತ್ತಿದಾಳೆಂದು ವಸಂತಳಿಗೆ ತೋರಿತು. ಚಿಂತೆಯಿಲ್ಲ, ಆದರಿಂದ ತನಗೇನೆಂದು ಸಮಾಧಾನ ಮಾಡಿಕೊಂಡು ಮಾರ್ಕೆಟ್ಟಿಗೆ ಹೋದಳು.

ಬೀದಿಯಲ್ಲಿ ಹೋಗುತ್ತಿದ್ದ ಅವಳನ್ನು ಜನ—ಗಂಡಸರು ಹೆಂಗಸರು—ಎವೆಯಿಕ್ಕದೆ ನೋಡುತ್ತಿದ್ದರು. ಹಿರಿಯರಿಗೆ ಅವಳ ಗಾಂಭೀರ್ಯವನ್ನು ಆಕರ್ಷಕವಾದ ನಿಲುವನ್ನು ಕಂಡು ಮೆಚ್ಚಿಕೆ, ಸರಿ ಓರಗೆಯ ತರುಣಿಯರಿಗೆ ಅವಳ ರೂಪ ರಾಶಿಯನ್ನು ಕಂಡು ಈರ್ಷೆ, ಕೆಟ್ಟೆದೆಯ ಯುವಕರಿಗೆ ತಮ್ಮ ಕಣ್ಣುಗಳಿಗಿಂದು ಸವಿಯೂಟ ದೊರೆಯಿತೆಂಬ ಸಂತಸ. ಒಬ್ಬಿಬ್ಬರು ಪುಂಡರು ತುಂಟರು ಕೆಣಕಿ ನೋಡುವ ದನಿಯಿಂದ ಕೆಮ್ಮಿದರು; ಅದು ಕೇಳಿಸದವಳಂತೆ ಮುಂದೆ ನಡೆದು ವಸಂತಾದೇವಿ ಮಾರ್ಕೆಟ್ಟಿಗೆ ಬಂದಳು.

ಮಾರ್ಕೆಟ್ಟಿನಲ್ಲಿ ತರಕಾರಿ ಮಾರುವ ಕೊಳ್ಳುವ ಹೆಂಗಸರು, ಕೂಲಿಯವರು ಎಲ್ಲರೂ ಬೆಕ್ಕಸ ಬೆರಗಾಗಿ ಇವಳಕಡೆ ನೋಡುತ್ತಿದ್ದರು. ಅಂಗಡಿಯವಳು ಸಾಮಾನು ಏನು ಬೇಕೆಂದು ಕೇಳುವುದನ್ನು ಮರೆತು ದಿಟ್ಟಿಸುತ್ತಿರುವುದನ್ನು ಕಂಡು ವಸಂತಳೇ ಮಾತಾಡಿಸಿ ತನಗೆ ಬೇಕಾದ ಪದಾರ್ಥಗಳನ್ನು ತೆಗೆದುಕೊಂಡಳು. ಮಾರಿದ ಹೆಣ್ಣಿನ ನಡತೆಯಲ್ಲಿ ಏನೋ ಒಂದು ವಿಧವಾದ ಕೊಂಕುತನವಿರುವಂತೆ ತೋರಿತು ; ಬೇರೆ ಹೆಂಗಸರೂ ನಗುತ್ತಿದ್ದರು. ಇವಳಿಗೆ ಕೇಳಿಸುವಂತೆ ಕೆಲವರು ಕೇಳಿಸದಂತೆ ಕೆಲವರು ಮಾತಾಡಿಕೊಳ್ಳುತ್ತಿದ್ದರು.

'ಬೊಂಬೆಯ ಹಾಗಿದ್ದಾಳೆ, ಅವನನ್ನು ಹೇಗೆ ಮೆಚ್ಚಿ ಬಂದಳೋ ಕಾಣೆ.'

'ಶ್ರೀಮಂತಳಂತೆ.'

'ಬಿ. ಎ. ಓದಿದಾಳಂತೆ !'

'ಅವನಿಗೆ ಓದುವುದಕ್ಕೂ ಬರುವಂತೆ ಕಾಣೆ.'

'ಮಾಡುವುದು ಗಣಿಯಲ್ಲಿ ಕೂಲಿ ಕೆಲಸ.'

'ಆದರೇನು, ಆಳು ಜಟ್ಟಿಯ ಹಾಗಿದ್ದಾನೆ.'

'ಅದಕ್ಕೇ ಮೋಹಗೊಂಡಿರಬೇಕು.'

ಇಲ್ಲಿ ಸ್ವಲ್ಪನಗು.

'ಮೊದಲು ಸಂಬಂಧವಿತ್ತೇನೋ !'

'ಇಲ್ಲದಿದ್ದರೆ ಇದು ಸಾಧ್ಯವೆ ?'

'ದೊಡ್ಡವರ ಬಾಳೆಲ್ಲಾ ಹೀಗೇ ಎಂದು ಕಾಣುತ್ತದೆ.'

ವಸಂತಳಿಗೆ ಆ ಮಾತುಗಳು ಕರ್ಕಶವಾಗಿದ್ದುವು. ಅವರ ಮುಖದ ಮೇಲೆ ನೀರೆಳಿಸಬೇಕೆನ್ನುವಷ್ಟು ರೋಷ ಬಂತು ; ಆದರೆ ವಿವೇಕ ಅವಳನ್ನು ಹಿಂದಕ್ಕೆಳೆಯಿತು. ತಾನೀಗ ಅವರಿಗೆ ಪ್ರತಿಯಾಗಿ ಏನು ಹೇಳಿದರೂ ಅದು ಜಗಳಕ್ಕೆ ಪೀಠಿಕೆಯಾಗುತ್ತದೆ; ಅದರ ಪರಿಣಾಮ ಬಹುಶಃ ಸರಿಯಾಗಲಾರದು. ಹೀಗೆಂದುಕೊಂಡು ತನ್ನ ಕೋಪವನ್ನಡಗಿಸಿಕೊಳ್ಳುತ್ತ ಅಲ್ಲಿ ನಿಲ್ಲದೆ ಸರಸರನೆ ಮನೆಗೆ ಬಂದಳು.

ಬಂದ ಕೋಪವನ್ನಡಗಿಸಿಕೊಳ್ಳುವುದೆಂಬ ಮಾತು ವಸಂತಾದೇವಿಗೆ ಹೊಸದು. ತನ್ನ ಮನೆಯಲ್ಲಿದ್ದಾಗ ಅದು ಅಡಗುತ್ತಿದ್ದುದು ಹತ್ತಾರು

ಪಾತ್ರೆಗಳು ಒಡೆದಾಗ, ಇಲ್ಲವೆ ಕುರ್ಚಿ ಮೇಜುಗಳ ಕೈಕಾಲುಗಳು ಮುರಿದಾಗ, ಇಲ್ಲವೆ ಆಳುಗಳಲ್ಲಿ ಯಾವನಾದರೊಬ್ಬನ ಮೈಮೇಲೆ ಬಾಸುಂಡೆಗಳೆದ್ದಾಗ; ಇಲ್ಲಿ ಯಾವ ಆಹುತಿಯೂ ಇಲ್ಲದೆ ಅದು ತಾನೇ ಶಾಂತವಾಗಬೇಕಾಗಿತ್ತು. ತನಗೆ ಕೋಪ ಬಂದಿದೆ ಅದನ್ನು ಅಡಗಿಸಿಕೊಳ್ಳುತ್ತಿದೇನೆ ಎಂಬ ಅರಿವು ಅವಳಿಗುಂಟಾದುದೂ ಇದೇ ಮೊದಲು. ತನ್ನಲ್ಲಿ ಆಗಿರುವ ಈ ಬದಲಾವಣೆಯನ್ನು ಕಂಡು ತನಗೇ ಅಚ್ಚರಿ.

ಮನೆಗೆ ಬಂದವಳು ತರಕಾರಿಯಿದ್ದ ಚೀಲವನ್ನು ಹಾಗೇ ನೆಲದಮೇಲೆ ಕೈಬಿಟ್ಟು ಅದುವರೆಗೆ ನಡೆದುದನ್ನು ಪುನಃ ಮನಸಿನಲ್ಲಿ ಚಿತ್ರಿಸಿಕೊಳ್ಳತೊಡಗಿದಳು. ಎಂದಿಗೂ ಮನುಷ್ಯರ ಮುಖವನ್ನು ಕಾಣದ ಕಮಂಗಿಗಳಂತೆ ಇಲ್ಲಿನ ಜನರು ತನ್ನನ್ನೇ ನೋಡುತ್ತಾರೇಕೆ?

ಹಿಂದೆಯೇ ಅವಳ ಮನಸ್ಸು ಇನ್ನೊಂದು ಪ್ರಶ್ನೆ ಹಾಕಿತು; ನಟೇಶನು ತನ್ನ ಬಂಗಲೆಗೆ ಬಂದಾಗ ತನ್ನ ಮಿತ್ರರೆಲ್ಲರೂ ಅವನನ್ನು ಹೇಗೆ ನೋಡಿದರು ಜ್ಞಾಪಕವಿದೆಯೆ? ಹುಚ್ಚನೆಂದರು, ಕಿವಿಯೊಡೆದು ಹೋಗುವಷ್ಟು ಗಟ್ಟಿಯಾಗಿ ನಕ್ಕರು, ಹೊಡೆದು ಆಚೆಗೆ ನೂಕಿದರು. ತನ್ನವರಿಗೆ ಅವನೊಬ್ಬ ವಿಚಿತ್ರ ವ್ಯಕ್ತಿಯಾಗಿ ಕಂಡಿದ್ದ. ಇಲ್ಲಿನ ಜನರು ತನ್ನನ್ನು ಹಾಗೇ ಒಂದು ವಿಚಿತ್ರ ಸ್ತ್ರೀಯೆಂದು ಕಂಡರೆ ಅದರಲ್ಲಿ ತಪ್ಪೇನು? ಸದ್ಯಃ ತನ್ನವರಿಗಿಂತಲೂ ಇವರೇ ಮೇಲು, ತನ್ನನ್ನು ಅಗೌರವ ಪಡಿಸಿಲ್ಲ; ಮೀನಾಕ್ಷಿಯ ಮಗು ತನ್ನ ಹತ್ತಿರಕ್ಕೆ ಬರಲಿಲ್ಲ, ಅದಕ್ಕೆ ತಾನಿನ್ನೂ ಅಪರಿಚಿತಳು, ನಾಲ್ಕು ದಿನ ಗುರುತಾದರೆ ಬಂದೀತು; ಬೀದಿಯ ಹೆಂಗಸರಾದರೂ ಅಷ್ಟೇ, ಹೊಸದರಲ್ಲಿ ನಾಚಿಕೆಯಿಂದಲೋ ಬಿಂಕದಿಂದಲೋ ಭಯದಿಂದಲೋ ಗೌರವದ ಅತಿರೇಕದಿಂದಲೋ ದೂರ ಇದಾರೆ, ಗಟ್ಟಿಯಾಗಿ ಮಾತಾಡಲಾರದೆ ಪಿಸು ಪಿಸು ಮಾತಾಡಿಕೊಳ್ಳುತ್ತಿದ್ದಾರೆ; ಮಾತಿಗೆ ಪೌಷ್ಟಿಕವಾಗಿ ಕೈ ಬೆರಳು ತೋರಿಸುತ್ತಿದ್ದಾರೆ; ದಿನ ಕಳೆದು ಮನಸ್ಸುಗಳು ಪಳಗಿದ ಹಾಗೆ ಅವರಾದರೂ ಸರಿಹೋಗಬಹುದು. ಅವರನ್ನು ತಾನು ಒಲಿಸಿಕೊಳ್ಳಬೇಕು. ಪಟ್ಟಣದವರು ಕೆಟ್ಟವರೆಂಬ ಮಾತನ್ನು ಅವರಾಡಿಕೊಳ್ಳದಂತೆ ತಾನು ನಡೆದುಕೊಳ್ಳಬೇಕು. ಪಟ್ಟಣಿಗರ, ಶ್ರೀಮಂತರ, ನಾಗರಿಕರ ಪ್ರತಿನಿಧಿ ತಾನು; ಅವರ ಗೌರವವನ್ನು ಕೆಳಗಿಳಿಸದಂತೆ ನೋಡಿಕೊಳ್ಳಬೇಕು.

ಬೆಂಗಳೂರಿನಲ್ಲಿ ಇಂಥ ಮಾತುಗಳನ್ನು ಕೇಳಿದ್ದರೆ ಆಡಿದವರ ಗ್ರಹಚಾರ ಬಿಡಿಸಿಬಿಡುತ್ತಿದ್ದ ವಸಂತಾದೇವಿ ಇಲ್ಲಿ ಅದನ್ನು ಮರೆಯಲು ಪ್ರಯತ್ನಿಸುತ್ತಿದ್ದಳು. ತನ್ನ ತಾಳ್ಮೆ, ಸಹನೆ, ವಿವೇಚನೆಗಳನ್ನು ಕಂಡು ತನಗೇ ಆಶ್ಚರ್ಯವಾಗುತ್ತಿತ್ತು. ತಾತನು ಬರೆದ ಉಯಿಲು ಆರೀತಿ ಇದೆಯೆಂದು ತಿಳಿದ ದಿನ ಇಷ್ಟು ತಾಳ್ಮೆ ವಿವೇಚನೆಗಳಿದ್ದರೆ ತಾನು ನಟೇಶನನ್ನು ಮದುವೆಯಾಗುವ ದುರಾಲೋಚನೆ ಮಾಡುತ್ತಿರಲಿಲ್ಲ. 'ಕೆಟ್ಟಮೇಲೆ ಬುದ್ಧಿಬಂತು' ಎಂಬ ಗಾದೆಯನ್ನು ಯಾವ ಮಹಾನುಭಾವನು ಎಷ್ಟು ಅನುಭವದಿಂದ ಸಾರಿದನೋ, ಅದು ಅಕ್ಷರಶಃ ನಿಜ.

ಮತ್ತೆ ಮದುವೆಯ ನೆನಪಾಯಿತು. ಮಾರ್ಕೆಟ್ಟಿನಲ್ಲಿ ಹೆಂಗಸರು ನಿಜವನ್ನೇ ಹೇಳಿದಾರೆ. ನಟೇಶ ಸರಿಯಾದ ಗಂಡನಲ್ಲ; ಯಾವ ಒಂದು ವಿಷಯದಲ್ಲೂ ಅವನು ತನಗೆ ತಕ್ಕವನಲ್ಲ; ಆದರೆ ಈಗ ಮಾಡುವುದೇನು? ಒಂದು ತಿಂಗಳ ಕಾಲವಂತೂ ತಾನು ಇಲ್ಲಿ ಇರಲೇಬೇಕು. ಆಮೇಲೆ?........ ಆಮೇಲೆ?

ಅದು ಬಗೆ ಹರಿಯದ ಪ್ರಶ್ನೆ. ಆ ಪ್ರಶ್ನೆಯು ಅವಳ ತಲೆಯನ್ನು ಕೆಡಿಸುವ ಪ್ರಯತ್ನದಲ್ಲಿತ್ತು. ಆ ವೇಳೆಗೆ ಇಂದಿರೆಯು ಸ್ಕೂಲಿಂದ ಬಂದಳು. ಬರುತ್ತ ಎರಡು ಕತೆ ಪುಸ್ತಕಗಳನ್ನು ತಂದಿದ್ದಳು. ಅದನ್ನು ತನ್ನ ಚೀಲದಲ್ಲಿ ಮುಚ್ಚಿಟ್ಟುಕೊಂಡು

'ಅತ್ತಿಗೆ, ಅತ್ತಿಗೆ, ಇವತ್ತು ನಾನೇನೋ ಒಂದು ತಂದಿದೀನಿ. ಅದೇನು ಹೇಳುತೀರಾ?'

'ಹೇಳುತೇನೆ, ಹೇಳಲಿ?'

'ಹೇಳಿ ನೋಡೋಣ.'

'ಹೇಳಿದರೆ ಏನು ಕೊಡುತಿ.'

'ನಾನೇನು ಕೊಡಲಿ! ಬೇಕಾದರೆ ಅಣ್ಣನಿಗೆ ಹೇಳಿ ಬಹುಮಾನ ಕೊಡಿಸುತೇನೆ.'

'ಏನು ಬಹುಮಾನ ಕೊಡಿಸುತೀ!'

'ಬಹುಮಾನವೇ? ಬ....ಹು....ಮಾ....ನ....ದ ...ಹೇಳ್ಳೋ?'

'ಹೇಳು ನೋಡೋಣ.'

'ಮು........ತ್ತು.'

'ಛೆ! ನನಗೇನೂ ಅದು ಬೇಡ.'

'ಬೇಡವೋ? ನನ್ನ ಹತ್ತಿರ ಏನಿದೆ ಅಂತ ಅಮ್ಮಣ್ಣೀಗೆ ಗೊತ್ತಾಗಲಿಲ್ಲ; ಅದಕ್ಕೇ ಬಹುಮಾನ ಬೇಡ ಅಂದುಬಿಟ್ಟರಿ.'

'ಅಂಥದೇನು ತಂದಿದೀ ಇಂದಿರಾ.'

'ತೋರಿಸಿದರೆ ನನಗೇನು ಕೊಡುತೀರಿ?'

'ಅದೇ....ನೀನು ಕೇಳಿದ ಬಹುಮಾನ.'

'ಎಲ್ಲಿ ಮೊದಲುಕೊಡಿ ಮತ್ತೆ.'

'ಬಹುಮಾನ ಅಂದಮೇಲೆ ಅಡ್ವಾನ್ಸಾಗಿ ಕೊಡೋದಕ್ಕಾಗುತ್ತೆಯೆ. ಮುಂದಾಗಿ ತೋರಿಸು ಮತ್ತೆ.'

'ಹಾಗೇ ಆಗಲಿ.'

ಇಂದಿರೆ ತಮ್ಮ ಸ್ಕೂಲು ಲೈಬ್ರರಿಯಿಂದ ತಂದಿದ್ದ ಎರಡು ಕಾದಂಬರಿಗಳನ್ನು ಅವಳ ಕೈಲಿಡುತ್ತಾ

'ನಾನು ಇಲ್ಲದೆ ಇದ್ದಾಗ ನಿಮಗೆ ಬೇಜಾರಾಗಲ್ಲವೆ ಅತ್ತಿಗೆ? ಅದಕ್ಕಾಗಿ ಈ ಪುಸ್ತಕಗಳು ತಂದೆ. ಎಲ್ಲಿ ನನ್ನ ಬಹುಮಾನ?'

'ನಾನು ಪುಸ್ತಕಗಳು ಓದುತಿದ್ದರೆ ನಿಮ್ಮಣ್ಣ ಗದರಿಕೊಳ್ಳುತಾರೋ ಏನೋ!'

'ಏಕೆ?'

'ಅವರಿಗೆ....ಓದು....'

'ಗೊತ್ತಾಯಿತು. ಅಣ್ಣ ಅಷ್ಟು ಓದದೇಇದ್ದರೂ ನಾವು ಓದಿದರೆ ತುಂಬಾ ಸಂತೋಷಪಡುತಾನೆ. ನಾನು ಯಾವ ಪುಸ್ತಕ ಕೇಳಲಿ ತಂದು ಕೊಡುತಾನೆ.'

'ನೀನಾದರೆ ತಂಗಿ.'

'ನೀವೊಂದುಸಲ ಕೇಳಿನೋಡಿ, ಅವನ ಗುಣ ಗೊತ್ತಾಗುತ್ತೆ.'

'ಮಾತಿನಲ್ಲೇ ಕೂತುಬಿಟ್ಟೆವು, ಅಡಿಗೆಗೆ ಹೊತ್ತಾಯಿತು ಇಂದಿರಾ.'

'ಇಂಥ ಬುದ್ಧಿ ಯಾವಾಗ ಕಲಿತಿರಿ ಅತ್ತಿಗೆ; ಮೆಲ್ಲಗೆ ಮಾತಿನಲ್ಲಿ ಮರೆಸೋಣ ಅಂತ ನೋಡುತ್ತೀರೊ? ಎಲ್ಲಿ ನನ್ನ ಬಹುಮಾನ?'

'ಬಹುಮಾನವಾಗಿ ಒಂದು........ಮರೆಸುವುದಕ್ಕೆ ಪ್ರಯತ್ನಿಸಿದ ತಪ್ಪಿಗಾಗಿ ಒಂದು... ....ಸಾಕೆ?'

'ನಿಮ್ಮನ್ನು ಮದುವೆಯಾದ ನಮ್ಮ ಅಣ್ಣ ಬಹು ಭಾಗ್ಯಶಾಲಿ ಅತ್ತಿಗೆ.'

ಅದು ಕೇಳಿ ವಸಂತಳ ಹೃದಯದಿಂದ ಪುಟ್ಟದಾದ ಒಂದು ನಿಟ್ಟುಸಿರು ಹೊರಬಿತ್ತು. ಅರಿಯದ ಬಾಲೆ ಇಂದಿರೆಗೆ ಅದರ ಅರಿವಾಗಲಿಲ್ಲ.

— ೨೫ —

'ಮುಠ್ಠಾಳ, ಅವಿವೇಕಿ.'

'ನಾನೇನು ಮಾಡಿದೇಪ್ಪಾ, ಒಂದೇ ಸಮನೆ ಹಾಗೆ ಬಯ್ಯುತಿದೀರಿ.'

'ಇನ್ನೇನು ಮಾಡಬೇಕು; ಹದಿನೈದು ವರ್ಷ ಮಾಡಿದ ಕೆಲಸವನ್ನ ಹಾಳುಮಾಡಿಬಿಟ್ಟೆ.'

'ನಾನೆ ಹಾಳು ಮಾಡಿದ್ದು?'

'ಇಲ್ಲ ನಾನು. ಕೈಗೆ ಬರುತ್ತಿದ್ದ ಮೂವತ್ತೆರಡುಲಕ್ಷ ರೂಪಾಯಿಗಳ ಆಸ್ತಿ ನಾನೇ ಕಳಕೊಂಡದ್ದು. ನಿನಗೋಸ್ಕರ ಎಷ್ಟು ಉಪಾಯ ಮಾಡಿದರೇನು, ಎಷ್ಟು ಬುದ್ಧಿವಂತಿಕೆ ಉಪಯೋಗಿಸಿದರೇನು! ಎಂದಿದ್ದರೂ ಆ ಆಸ್ತಿ ನಮ್ಮ ಮನೆಗೇ ಸೇರಬೇಕು ಅಂತ ವೆಂಕಪ್ಪಯ್ಯನ ಸ್ನೇಹ ಮಾಡಿಕೊಂಡು, ಎಂಥ ವ್ಯತ್ಯಾಸಗಳು ಬಂದರೂ ಅದನ್ನು ಉಳಿಸಿಕೊಂಡು ಬೆಳೆಸಿಕೊಂಡು ಅವನ ಆಸ್ತಿಗೆ ಟ್ರಸ್ಟಿಯಾಗಿ ನಿಂತುಕೊಂಡೆ. ನಮ್ಮ ಕೆಲಸಕ್ಕೆ ಅನುಕೂಲವಾಗಿರೋಹಾಗೆ ಅವನು ಉಯಿಲು ಬರೆಯುವಂತೆ ಪ್ರೇರೇಪಿಸಿದೆ. ಆ ಹುಡುಗಿಯ ಜೊತೆಯಲ್ಲೇ ನೀನೂ ಬೆಳೆದರೆ ಪರಸ್ಪರ ಪ್ರೇಮ ಬೆಳೆದು ಅವಳು ನಿನ್ನನ್ನೇ ಮದುವೆಯಾಗುತ್ತಾಳೆ ಅಂತ ಇಬ್ಬರನ್ನೂ ಜೊತೆಯಲ್ಲೇ ಓದಿಸಿದೆ–ಬೆಳೆಸಿದೆ. ಅವಳ ಮನಸ್ಸನ್ನು ಒಲಿಸಿಕೊಳ್ಳುವುದಕ್ಕೆ ನಿನಗೆ ಇಷ್ಟು ಅವಕಾಶ ಕೊಟ್ಟಿದ್ದರೂ ಕೂಡ ನೀನು ಕಿಂಚಿತ್ತಾದರೂ ಅವಳ ಮನಸ್ಸಿನ ಮೇಲೆ ಪರಿಣಾಮವುಂಟುಮಾಡಲಾರದೆಹೋದೆ. ನಿನ್ನಂಥ ಅಯೋಗ್ಯನಿಗೇಕೋ ಅಷ್ಟು ಐಶ್ವರ್ಯ, ಅಂಥ ಹೆಣ್ಣು?'

'ಈ ಮದುವೆ ಕಳ್ಳತನದಲ್ಲಿ ನಡೆದಿದೆ, ಏನೋ ಜುಲುಂನಿಂದ ನಡೆದಿದೆ, ನಾವು ಅದನ್ನು ಒಪ್ಪುವುದಿಲ್ಲ ಅಂತ ನೀನು ಹೇಳುವುದಕ್ಕೆ ಆಗೋದಿಲ್ಲೇನಪ್ಪಾ?'

'ಆಗೋದಿಲ್ಲ. ಅದೆಲ್ಲಾ ವಿಚಾರಮಾಡಿ ನೋಡಿದೆ. ಅವಳೀಗ ಮೆಜಾರಟಿಗೆ ಬಂದುಬಿಟ್ಟಿದಾಳೆ; ಟ್ರಸ್ಟಿಗಳಿಗೂ ಅವಳ ಮದುವೆಗೂ ಸಂಬಂಧವಿಲ್ಲ.'

'ಹಾಗಾದರೆ ? ವಸಂತನ್ನ ಮದುವೆಮಾಡಿಕೊಳ್ಳೋದಕ್ಕೆ ಯಾವುದೂ ಉಪಾಯ ಇಲ್ಲವೇಪ್ಪಾ ?'

'ಇನ್ನೆಲ್ಲಿಯ ಮದುವೇನೋ? ಅವಳ ಮದುವೆಯ ಕಥೆ ಮುಗಿದ್ಹೋಯ್ತು. ಆದರೆ ಅವಳ ಆಸ್ತಿ ಮಾತ್ರ ಅವಳ ಕೈಗೆ ಸೇರದಹಾಗೆ ಮಾಡುವುದಕ್ಕೆ ಇನ್ನೂ ಅವಕಾಶ ಇದೆ.'

ಮಗನಿಗೆ ಈ ಮಾತು ಹಿಡಿಸಿದ ಹಾಗೆ ಕಾಣಲಿಲ್ಲ; ಅದರಿಂದ ಏನೂ ಮಾತಾಡದೆ ಸುಮ್ಮನಿದ್ದ. ವಸಂತ ತನ್ನನ್ನು ಮದುವೆಯಾಗಲು ಸಾಧ್ಯವಿಲ್ಲದಮೇಲೆ ಅವಳ ಆಸ್ತಿಯನ್ನು ಕಟ್ಟಿಕೊಂಡು ತಮಗೇನೆಂಬ ಉದಾಸೀನತೆ ಅವನಲ್ಲಿತ್ತು. ಮಗನಿಂದ ಯಾವೊಂದು ಮಾತೂ ಹೊರಡುದುದನ್ನು ಕಂಡ ರಾವ್‌ಬಹದ್ದೂರರಿಗೆ ತಾವಾಡಿದ ಮಾತು ಅನುಚಿತವೆಂದು ತೋರಿತು. ತಕ್ಷಣ ಆ ಮಾತನ್ನು ತಿರುಗಿಸಿಕೊಂಡು ಹೇಳಿದರು.

'ಅಷ್ಟು ಆಸ್ತಿ ಕೈಗೆ ಸಿಕ್ಕುತ್ತದೆಂಬ ಆಸೆಯಿಂದ ಅವನು ಏನೋ ಮಂತ್ರ ತಂತ್ರಗಳಿಂದ ಅವಳನ್ನು ಒಲಿಸಿಕೊಂಡುಬಿಟ್ಟಿದಾನೆ. ಅದು ತನಗೆ ದಕ್ಕುವುದಿಲ್ಲವೆಂದು ತಿಳಿದರೆ ಅಥವಾ ಇವಳಿಗೆ ಅವನ ಮೇಲೆ ಜುಗುಪ್ಸೆಯೋ ಕೋಪವೋ ಉಂಟಾಗಿ ಪರಸ್ಪರ ವೈಮನಸ್ಯವುಂಟಾದರೆ ಅವರವರು ಬೇರೆಯಾಗುತ್ತಾರೆ. ಆಗ ನಿನಗೆ ಅವಳೂ ದೊರೆಯುತ್ತಾಳೆ ಆಸ್ತಿಯೂ ಬರುತ್ತೆ.'

'ಅದು ಒಳ್ಳೆಯ ಯೋಚನೆ ಅಪ್ಪಾ.'

'ಹೇಗಾದರೂ ಮಾಡಿ ಆ ನಟೇಶನ ಮನೆಯಿಂದ ಅವಳನ್ನು ಕದಲಿಸಬೇಕು ನೋಡು.'

'ನಾನು ಅಲ್ಲಿಗೆ ಹೋಗಿಬರಲೆ ?'

'ಹೋಗು. ವಸಂತಳಲ್ಲಿ ಅಸಾಧಾರಣ ಪ್ರೇಮವಿರುವಂತೆ ಈಗಲಾದರೂ ನಟಿಸು; ನಿಮ್ಮ ನಿಮ್ಮ ವರ್ತನೆಯಿಂದ ನಟೇಶನಿಗೆ ಸಂದೇಹ ಬರುವಂತೆ ಮಾಡು. ಎಂದಿಗೂ ಅವನಿರುವಾಗ ಆ ಮನೆಗೆ ಹೋಗಬೇಡ. ಅಥವಾ ಅವನಿಗೆ ಎದುರಾಗಬೇಡ. ನಿನ್ನ ಸಹಾಯಕ್ಕೆ ಬೇಕಾದರೆ ನಾನು ಅಲ್ಲಿನ

ಪ್ರೋಲೀಸ್ ಅಧಿಕಾರಿಗಳೊಡನೆ ಮಾತಾಡಿರುತ್ತೇನೆ. ಯಾವ ಉಪಾಯ ದಿಂದಾದರೂ ವಸಂತಳು ಅಲ್ಲಿಂದ ವಾಪಸು ಬರುವಂತೆ ಮಾಡು. ಜಾಗ್ರತೆ ಮಾಡಬೇಕು. ಒಂದು ತಿಂಗಳಕಾಲ ಅವಳು ಅಲ್ಲಿದ್ದಾಳೆಂದರೆ ಕೆಲಸ ಕೆಟ್ಟಿತು; ಅದರೊಳಗಾಗಿ ಅವಳು ಆ ಸ್ಥಳ ಬಿಟ್ಟಿರಬೇಕು. ಇಷ್ಟು ಕೆಲಸ ನಿನ್ನಿಂದ ಸಾಧ್ಯವೆ?'

'ಆಗಲಿ ಅಪ್ಪಾ; ಇದೇನು ದೊಡ್ಡ ಕೆಲಸ. ಇನ್ನೆಂಟು ದಿನಗಳೊಳಗಾಗಿ ಅವಳನ್ನು ಇಲ್ಲಿಗೆ ಕರೆದು ತರುತ್ತೇನೆ ನೋಡು.'

'ಅಲ್ಲಿ ನಿನ್ನ ಖರ್ಚಿಗೆ ಎಷ್ಟು ಹಣ ಬೇಕಾದರೂ ತೆಗೆದುಕೊಂಡು ಹೋಗು. ಕೈ ಬಿಗಿ ಹಿಡಿಯಬೇಡ; ಧಾರಾಳವಾಗಿ ಖರ್ಚುಮಾಡು, ಕೆಲಸ ವನ್ನು ಮಾತ್ರ ಸಾಧಿಸಬೇಕು.'

ಇಷ್ಟು ಕೆಲಸ ಮಾಡದಮೇಲೆ ನಿಮ್ಮ ಮಗನಾಗಿ ಹುಟ್ಟಿ ಏನು ಸಾರ್ಥಕವೆಂದು ಮಗನು ಮನಸ್ಸಿನಲ್ಲೇ ಎಂದುಕೊಂಡ.

ಅಂದೇ ಸ್ವಾಮಿಯ ಸವಾರಿ ಬಂಗಾರದ ಗಣಿಯತ್ತ ಸಾಗಿತು.

— ೨೬ —

ವೆಂಕಟಾಚಲಯ್ಯನ ಕೆಲಸ ಬಹಳ ಚುರುಕಿಂದ ನಡೆದಿತ್ತು. ಆಗರ್ಭ ಶ್ರೀಮಂತಳೂ ವಿಶ್ವವಿದ್ಯಾನಿಲಯದ ಪದವೀಧರಳೂ ನಾಗರಿಕ ಸಮಾಜದಲ್ಲಿ ಗಣ್ಯವಾದ ಸ್ಥಾನ ಪಡೆದವಳೂ ಆದ ವಸಂತಾದೇವಿಯು ಗಣಿಯ ಕೂಲಿಗಾರ ನಾದ ಒಬ್ಬ ನಿರಕ್ಷರಕುಕ್ಷಿ ಅನಾಮಧೇಯ ನಟೇಶನನ್ನು ಮದುವೆಯಾದ ಸ್ವಾರಸ್ಯ ಪ್ರಸಂಗವನ್ನು ಪ್ರಪ್ರಥಮವಾಗಿ ಜನತೆಗೆ ತಿಳಿಯಪಡಿಸಿದ ಹೆಮ್ಮೆ 'ವಿಶ್ವಪ್ರೇಮಿ' ಪತ್ರಿಕೆಯದಾಗಿತ್ತು. ಇತರ ಯಾವ ಪತ್ರಿಕೆಯವರಿಗೂ ಲಭ್ಯ ವಾಗದಿದ್ದ ಅವರ ಮದುವೆಯ ಸರ್ಟಿಫಿಕೇಟನ್ನೂ ವಸಂತಾದೇವಿಯ ಮನೆ ಯಲ್ಲಿ ನಡೆದ ಘಟನೆಯ ವೃತ್ತಗಳನ್ನೂ ಆ ಪತ್ರಿಕೆಯು ಪ್ರಕಟಿಸಿ ಓದುಗರ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಂಡಿತ್ತು. ಪೇಟೆಯಲ್ಲಿ ಯಾರೊಬ್ಬರ ಬಾಯಲ್ಲೂ 'ವಿಶ್ವಪ್ರೇಮಿ' ಪತ್ರಿಕೆಯ ಮಾತೇ ಆಗಿ ಪತ್ರಿಕೆಯ ಓದುಗರ ಸಂಖ್ಯೆಯು ಒಮ್ಮಿಂದೊಮ್ಮೆಯೇ ಒಂದಕ್ಕೆ ಮೂರರಷ್ಟಾಗಿತ್ತು. ನಿತ್ಯ ಜೀವನ ದಲ್ಲಿ ನಡೆಯುವ ಸಾಮಾನ್ಯ ವಿಷಯಗಳಲ್ಲಿ ನಿರಾಸಕ್ತರಾದ ಜನತೆ ಇಂಥ

ಯಾವುದಾದರೂ ಪ್ರಚಲಿತ ವಾರ್ತೆಯನ್ನು ಕೇಳಿದಾಗ ಅಸಾಧಾರಣವಾದ ಉತ್ಸಾಹವನ್ನು ತೋರಿಸುತ್ತದೆ. ಈ ಸ್ವಭಾವವನ್ನರಿತ ಸಂಪಾದಕರು ಆ ಉತ್ಸಾಹವನ್ನು ತಮ್ಮ ಲಾಭವಾಗಿ ಪರಿವರ್ತನಗೊಳಿಸಲು ನಿರ್ಧರಿಸಿ ಆ ವಾರ್ತೆಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದರು. ಅಂಥ ವಾರ್ತೆಗಳನ್ನು ಸಂಗ್ರಹಿಸುವುದರಲ್ಲಿ ನಿಪುಣನಾದ ವೆಂಕಟಾಚಲಯ್ಯನನ್ನು ಅದಕ್ಕಾಗಿ ಮೀಸಲಾಗಿ ಇರಿಸಿದ್ದರು.

ವೆಂಕಟಾಚಲಯ್ಯನಾದರೂ ತನ್ನ ನೇಮಕದ ಸಾರ್ಥಕ್ಯ ಮಾಡಿಕೊಂಡಿದ್ದ. ವಸಂತಾದೇವಿಯು ನಟೇಶನ ಮನೆಗೆ ಬಂದ ಸುದ್ದಿ, ಆಕೆಯು ಇಲ್ಲಿ ಸಂಸಾರ ಮಾಡುತ್ತಿರುವ ರೀತಿ, ಆಕೆಗೆ ಗಣಿಯ ಕೂಲಿಗಾರ ಜನರು ಇತ್ತ ಸ್ವಾಗತ ಇತ್ಯಾದಿ ವಿಷಯಗಳು ಆಕರ್ಷಕವಾಗಿ ಪತ್ರಿಕೆಯಲ್ಲಿ ಬಂದುವು. ಆ ಲೇಖನಗಳಿಗೆ ಪೋಷಕವಾಗಿ ನಟೇಶನ ಮನೆಯಲ್ಲಿ, ಮನೆಯ ಹೊರಗೆ, ಮಾರ್ಕೆಟ್ ಪ್ರದೇಶದಲ್ಲಿ, ರಸ್ತೆಯಲ್ಲಿ, ಅಂಗಳದಲ್ಲಿ, ಎಲ್ಲೆಲ್ಲಿ ಕ್ಯಾಮೆರಾ ಕಣ್ಣಿಗೆ ಚಂದವೆಂದು ಕಾಣುತ್ತಿತ್ತೋ ಅಲ್ಲೆಲ್ಲಾ ವಸಂತಾದೇವಿಯು ಇದ್ದ ಫೋಟೋಗಳು ಪ್ರಕಟವಾದುವು. ವಾಸ್ತವವಾಗಿ ನಡೆದ ವಿಷಯದೊಡನೆ ಇಲ್ಲಿ ನಡೆದಿರಬಹುದಾದ ಸರಸಮಯವಾದ ಹಲವು ಕಲ್ಪನಾ ಪ್ರಸಂಗಗಳೂ ಬೆರೆತು ಆ ಲೇಖನಗಳು ಹೆಚ್ಚು ಜನಪ್ರಿಯವಾಗಿದ್ದುವು.

ತನ್ನ ಈ ಲೇಖನಗಳ ಪ್ರಾಮುಖ್ಯತೆ ಬಹುಶಃ ನಟೇಶನಿಗೆ ತಿಳಿಯಲಾರದು; ಆದರೆ ವಸಂತಾದೇವಿಯು ಇವನ್ನು ನೋಡಿ ಏನೆನ್ನುವಳೋ ಎಂಬ ಸಂಶಯ ಮೊದಮೊದಲು ವೆಂಕಟಾಚಲಯ್ಯನಿಗಿತ್ತು. ಅದರಿಂದ, ಪತ್ರಿಕೆಗಳನ್ನು ಅವರ ಮನೆಗೆ ಅಲ್ಲಿಯ ಸ್ಥಳೀಯ ಏಜೆಂಟರ ಮೂಲಕ ಕಳಿಸುತ್ತಿದ್ದರೂ ಸಹ ಎರಡು ಮೂರುದಿನ ವಸಂತಾದೇವಿಯನ್ನು ನೋಡಿ ಮಾತನಾಡಿಸುವ ಧೈರ್ಯ ಮಾಡಿರಲಿಲ್ಲ.

ತನ್ನ ಸ್ವಂತ ವಿಷಯವು ಪತ್ರಿಕೆಯಲ್ಲಿ ಪ್ರಕಟವಾದ ಮೊದಲದಿನ ವಸಂತಾದೇವಿಗೆ ಕೆಂಡದಷ್ಟು ಕೋಪವುಂಟಾಯಿತು. ಆದರೆ ಅಂದು ನಡೆದ ಘಟನೆಗಳ ದೆಸೆಯಿಂದ ಪ್ರಜ್ವಲಿಸುತ್ತಿದ್ದ ಹೃದಯದಲ್ಲಿದ್ದ ಈ ಕಿಡಿಯು ಹೆಚ್ಚು ಪ್ರಭಾವ ಬೀರಿರಲಿಲ್ಲ, ಇವಳು ಗಣಿ ಪ್ರದೇಶಕ್ಕೆ ಬಂದಮೇಲೂ ಆ ಪತ್ರಿಕಾಭೂತ ಇವಳ ಬೆನ್ನು ಹತ್ತಿದುದನ್ನು ಕಂಡಾಗ ಆ ಕೋಪ ಮರು

ಕಳಿಸಿತು. ಆ ಸಮಯದಲ್ಲಿ ದೈವವಶಾತ್ ವೆಂಕಟಾಚಲಯ್ಯನು ಕಣ್ಣಿಗೆ ಬೀಳದೆ ನಿಂತ. ಒಂದೆರಡು ದಿನಗಳು ಒಳಗೇ ಚಿಟಚಿಟನೆ ಕಿಡಿಕಾರಿ ಮತ್ತೇನನ್ನೂ ಮಾಡಲಾರದೆ ಆ ಕೋಪ ಅವಳಲ್ಲೇ ಉಮ್ಮಳಿಸುತ್ತಿತ್ತು.

ಕೋಪದ ಕಾವು ಆರುತ್ತ ಬಂದಂತೆ ಆ ಪ್ರಚಾರದ ಮತ್ತೊಂದು ಮುಖವು ಅವಳಿಗೆ ಕಾಣತೊಡಗಿತು. ತಾತನು ಉಯಿಲಿನಲ್ಲಿ ವಿಧಾಯಕ ಮಾಡಿರುವಂತೆ ತಾನು ಗಂಡನೊಡನೆ ಸಂಸಾರ ಮಾಡುತ್ತಿರುವುದಕ್ಕೆ ಸಾಕ್ಷಿಯನ್ನು ವಿಶ್ವಪ್ರೇಮಿ ಪತ್ರಿಕೆಯು ಒದಗಿಸುತ್ತಿರುವುದರ ಅರಿವು ಅವಳಿಗೆ ಉಂಟಾಯಿತು. ಅದು ಈಗ ಪ್ರಪಂಚಕ್ಕೇ ತಿಳಿದ ವಾರ್ತೆಯಾಯಿತು; ಟ್ರಸ್ಟಿಗಳಾಗಲಿ ಯಾರೇ ಆಗಲಿ ಅದನ್ನು ಕುರಿತು ಸಂದೇಹ ಪಡುವಂತಿಲ್ಲ. ಅದರೊಂದಿಗೆ ಆ ಪತ್ರಿಕೆಯು ತನಗೆ ದೊರಕಿಸಿದ್ದ ಪ್ರಕಟಣೆಯೆಷ್ಟು! ಇದುವರೆಗೆ ನಾಡಿನ ಸಹಸ್ರಾರು ಕುಟುಂಬಗಳಲ್ಲಿ ವಸಂತಾದೇವಿಯೆಂಬ ಹೆಸರು ಮನೆಮಾತಾಗಿರಬೇಕು; ತನ್ನ ಗುಣ ಶೀಲ ರೂಪಗಳನ್ನು ಕುರಿತು ಜನವು ನಾನಾ ವಿಧವಾಗಿ ವಿಮರ್ಶೆ ಟೀಕೆ ಭರ್ತ್ಸನೆ ಪ್ರಶಂಸೆಗಳಲ್ಲಿ ತೊಡಗಿರಬೇಕು; ಹಲವಾರು ಯುವಕ ಯುವತಿಯರ ಜೀವಗಳು, ಧೀರೆಯಾದ ಈ ಆದರ್ಶ ರಮಣಿಯನ್ನು ಮಾರ್ಗದರ್ಶಿನಿಯನ್ನು ಪ್ರಗತಿಗಾಮಿನಿಯನ್ನು ಕಾಣಲು ಹಾತೊರೆಯುತ್ತಿರಬೇಕು; ತನ್ನ ಕಥೆಯನ್ನು ಓದಿ ಕೇಳಿ ರೋಮಾಂಚಗೊಂಡಿರಬೇಕು.

ಇಷ್ಟೆಲ್ಲ ವಿಚಾರಕ್ಕೆ ತಾನು ವಸ್ತುವಾದೆನೆಂಬ ಅಭಿಮಾನ ವಸಂತಳಿಗೆ ಹುಟ್ಟಲಾರಂಭಿಸಿತು; ತನ್ನ ಖ್ಯಾತಿಗೆ ಸಾಧಕನಾದ ವೆಂಕಟಾಚಲಯ್ಯನ ಮೇಲೆ ವಿಶ್ವಾಸ ತಾನಾಗಿ ಮೂಡಿತು.

ಭಾನುವಾರ ಬರುವುದನ್ನು ಕಾದಿದ್ದ ವೆಂಕಟಾಚಲಯ್ಯ ಬೆಳಗ್ಗೆ ಮುಂಚಿತವಾಗಿಯೇ ನಟೇಶನ ಮನೆಗೆ ಬಂದ; ವಸಂತಾದೇವಿಗೆ ತನ್ನ ಮೇಲೆ ಬಂದಿರಬಹುದಾದ ಆಗ್ರಹಕ್ಕೆ ನಟೇಶನಿಂದ ರಕ್ಷಣೆ ಬೇಕಾಗಿತ್ತು. ಅಂದು ಗಣಿಯ ಕೆಲಸಕ್ಕೆ ರಜ; ನಟೇಶನು ಫಲಾಹಾರ ಮಾಡಿ ಕುಳಿತಿದ್ದ. ಅತ್ತಿಗೆ ನಾದಿನಿಯರು ಕಲೆತು ಮಾಡಿದ್ದ ಈರುಳ್ಳಿಯ ಉಪ್ಪಿಟ್ಟು ಬಹು ರುಚಿಯಾಗಿತ್ತು. ಇಂಥ ಸುಖ ತನಗೆ ಇದುವರೆಗೆ ದೊರೆತಿರಲಿಲ್ಲವೆಂದು ಮನಸಿನಲ್ಲೇ ಹಿಗ್ಗುತ್ತ ಫಲಾಹಾರ ಮಾಡಿದ್ದ. ಆ ಸುಖದ ತುಣುಕೆಂಬಂತೆ ಈರುಳ್ಳಿಯ

ಚೂರೊಂದು ಹಲ್ಲಿನ ಸಂದಿಯಲ್ಲಿ ಸೇರಿಕೊಂಡು ತಾನಿಲ್ಲಿದೇನೆಂದು ಪದೇಪದೇ ನಾಲಗೆಗೆ ನೆನಪುಮಾಡಿಕೊಡುತ್ತಿತ್ತು; ಅದನ್ನು ಈಚೆಗೆ ಎಳೆದು ಹಾಕಲು ನಾಲಗೆಯು ಪ್ರಯತ್ನ ಪಡುತ್ತಿತ್ತು. ಈ ಹೋರಾಟ ನಡೆಯುತ್ತಿರುವಾಗ ವೆಂಕಟಾಚಲಯ್ಯನ ಸವಾರಿ ಬಂತು.

ಬಂದವನನ್ನು ಆದರದಿಂದ ಸ್ವಾಗತಿಸಿ ನಟೇಶನು ತನ್ನ ಕೋಣೆ ಯೊಳಕ್ಕೆ ಕರೆದುಕೊಂಡು ಹೋದ. ಮನೆಯೊಳಕ್ಕೆ ಬರುತ್ತಲೇ ಒಮ್ಮೆ, ಮತ್ತೆ ಕೋಣೆಯೊಳಕ್ಕೆ ಹೋಗುವಾಗ ಇನ್ನೊಮ್ಮೆ ವೆಂಕಟಾಚಲಯ್ಯನು ವಸಂತಾದೇವಿಯ ಕಡೆ ಕಣ್ಣು ಹೊರಳಿಸಿ ಅವಳ ಮನಸಿನಲ್ಲಿ ನಡೆಯುತ್ತಿರ ಬಹುದಾದ ಪ್ರತಿಕ್ರಿಯೆಯನ್ನರಿತುಕೊಳ್ಳಲು ಪ್ರಯತ್ನಿಸಿದ. ಆದರೆ ಯಾವುದೂ ಸ್ಪಷ್ಟವಾಗಿ ತಿಳಿಯಲಿಲ್ಲ. ತನ್ನನ್ನು ನೋಡಿ ಆಕೆ ಹುಬ್ಬುಗಂಟಿಕ್ಕಿರಲಿಲ್ಲ ವಾದುದರಿಂದ ವಾತಾವರಣವು ಕಹಿಯಾಗಿಲ್ಲವೆಂದಷ್ಟುಮಟ್ಟಿಗೆ ಧೈರ್ಯ ಬಂದಿತು.

ಕೋಣೆಯಲ್ಲಿ ಒಂದು ಹಳೆಯ ಈಚಲು ಚಾಪೆಯಮೇಲೆ ಕುಳಿತು ಅವರು ಮಾತಾಡತೊಡಗಿದರು.

'ಈ ಮೂರು ದಿನದಿಂದ ನಿಮ್ಮನ್ನು ಕಾಣಲೇ ಇಲ್ಲ. ಬಹುಶಃ ಬೆಂಗಳೂರಿಗೆ ಹೋಗಿಬಿಟ್ಟಿರೋ ಎಂತ ಇದ್ದೆ.'

'ಏನೋ ಕೆಲಸವಿತ್ತು ನಟೇಶ್; ಅಲ್ಲದೆ ನಿಮಗೂ ಕೂಡ ವಿರಾಮವೆಲ್ಲಿ ಬಂತು.'

'ನಮ್ಮೂರಲ್ಲಿ ಅಷ್ಟೊಂದು ಕೆಲಸ ಇದೆಯೆ ಸ್ವಾಮಿ? ಬೆಂಗಳೂರು ನಗರ ದಿಂದ ಬಂದವರಿಗೆ ಈ ಊರಿನಲ್ಲಿ ಹೊತ್ತೇ ಹೋಗಲಾರದು ಎಂದುಕೊಂಡಿದ್ದೆ.'

'ನಮ್ಮ ಕೆಲಸದಲ್ಲಿ ನಾವು ಯಾವ ಊರಿಗೆ ಹೋದರೂ ಹೊತ್ತೇ ಸಾಲುವುದಿಲ್ಲ. ನಮ್ಮ ಕೆಲಸ ವಿಚಿತ್ರವಾದುದು ನಟೇಶ್; ಅದು ದ್ರೌಪದಿಯ ಅಕ್ಷಯ ಪಾತ್ರೆಯ ಹಾಗೆ; ಮಾಡಿದಷ್ಟೂ ಇರುತ್ತೆ, ಆದರೆ ಎಷ್ಟಕ್ಕೆ ಬಿಟ್ಟರೆ ಅಷ್ಟಕ್ಕೇ ಸಾಕಾಗುತ್ತೆ.'

'ಬಹಳ ಸ್ವಾರಸ್ಯವಾದ ಕೆಲಸ ಸ್ವಾಮಿ ಹಾಗಾದರೆ.'

'ಹೌದಪ್ಪಾ ಹೌದು. ಅದನ್ನು ನಾವು ಎಷ್ಟು ಬೆಳೆಸಿದರೆ ಅಷ್ಟು ಬೆಳೆಯುತ್ತೆ. ಬೇರೆ ಕೆಲಸಗಳಾದರೆ ಇಷ್ಟೇ ಎಂದು ಒಂದು ನಿಯಮವಿದ್ದೆ,

ಮಿತಿ ಇದೆ. ಇದಕ್ಕೆ ಮಿತಿಯೇ ಇಲ್ಲ. ಇತರ ಕೆಲಸಗಳು ಮಾಡುವವನಿಗಾಗಿ ಕಾದಿರುತ್ತವೆ, ಅಷ್ಟನ್ನು ಮಾಡಿಬಿಟ್ಟರೆ ಮುಗಿಯುತ್ತವೆ. ನಮ್ಮ ಕೆಲಸ ಹಾಗಲ್ಲ. ಒಂದು ರೀತಿಯಲ್ಲಿ ನಮ್ಮ ಕೆಲಸವನ್ನು ಹುಟ್ಟಿಹಾಕುವರೂ ನಾವೇ, ಅದನ್ನು ಪೋಷಿಸಿ ಬೆಳೆಸುವವರೂ ನಾವೇ, ಅದನ್ನು ಮುಗಿಸುವವರೂ ನಾವೇ.'

'ತಾವು ಹೇಳುವುದು ನನಗೆ ಅರ್ಥವಾಗಲಿಲ್ಲ.'

'ಒಂದು ಉದಾಹರಣೆಯನ್ನು ಕೊಡುತ್ತೇನೆ. ತೋಪಿನಲ್ಲಿ ಅನೇಕ ವಿಧವಾದ ಹೂಗಳು ಬಿಡುತ್ತವೆ, ಬಿರಿಯುತ್ತವೆ, ಒಣಗಿ ಉದುರುತ್ತವೆ. ಅವು ಗಳನ್ನು ನಾವು ಕಾಣಬಹುದು, ಕಿತ್ತು ಮಾಲೆಯಾಗಿ ಕಟ್ಟಿ ಅವುಗಳ ಸುಗಂಧ ವನ್ನನುಭವಿಸಬಹುದು; ಅಥವಾ ನಮ್ಮ ಕಣ್ಣಿಗೆ ಬೀಳದೆಯೇ ಎಷ್ಟೋ ಹೂಗಳು ಉದುರಿಹೋಗಬಹುದು.'

'ಹೌದು.'

'ನಮ್ಮ ಜೀವನದಲ್ಲಿಯೂ ಹಾಗೆಯೇ. ಮಾನವನ ಮನವನ್ನು ಅರಳಿಸುವ, ಅವನ ವಿಚಾರ ತರಂಗವನ್ನು ಹೊಡೆದೆಬ್ಬಿಸುವ, ಅವನ ಭವಿತವ್ಯ ವನ್ನು ರೂಪುಗೊಳಿಸುವ ಅನೇಕ ವಿಚಾರಗಳು ಘಟನೆಗಳು ಜನಜೀವನದಲ್ಲಿ ಪರಂಪರೆಯಾಗಿ ನಡೆಯುತ್ತಲೇ ಇರುತ್ತವೆ. ಅಂಥವು ನಡೆದಾಗ ನಡೆದಲ್ಲಿ ಅವುಗಳ ಪ್ರಾಮುಖ್ಯತೆಯನ್ನು ಸತ್ವವನ್ನು ಗುರುತಿಸಿ ವಸಮುದಂತೆ ಅದು ಉದುರಿಹೋಗಲು ಬಿಡದೆ ಜನತೆಯ ಕಣ್ಣಮುಂದೆ ಹಿಡಿಯುವುದು, ಉಚಿತ ವಾದ ಸಂದರ್ಭಗಳಲ್ಲಿ ಅವನ್ನು ಪೋಷಿಸಿ ಅವುಗಳ ಪ್ರಭಾವವನ್ನು ಸ್ಥಿರ ಗೊಳಿಸಲು ಸಹಾಯ ಮಾಡುವುದು, ನಮ್ಮ ಕೆಲಸ.'

ಸಂಭಾಷಣೆ ನೀರಸವಾಗಿರುವಂತೆ ನಟೇಶನಿಗೆ ತೋರಿತೆಂದು ಕಾಣು ತ್ತದೆ. ಅವನು ವಿಷಯವನ್ನು ಬದಲಾಯಿಸಿ

'ಈ ಊರಿನಲ್ಲಿ ಬೆಂಗಳೂರಿಗಿಂತ ಬಿಸಿಲು ಜಾಸ್ತಿ ಅಲ್ಲವೆ' ಎಂದ.

'ಹೌದು, ಬೆಂಗಳೂರಲ್ಲಿದ್ದವರಿಗೆ ಬೇರೆ ಎಲ್ಲಿಗೆ ಹೋದರೂ ಬಿಸಿಲು ಜಾಸ್ತಿಯಾಗೇ ಕಾಣುತ್ತದೆ—ಈ ಕಾಲದಲ್ಲಿ.'

'ಇನ್ನೂ ಕೆಲವು ದಿನ ಇಲ್ಲೇ ಇರುತ್ತೀರಾ ಸ್ವಾಮಿ ?'

'ಇರುತ್ತೇನೆ ಅಂತ ಕಾಣುತ್ತೆ, ನಮ್ಮ ಯಜಮಾನರು ಎಷ್ಟುದಿನ ಇರು ಅಂತ ಹೇಳುವರೆ ಅಷ್ಟುದಿನ ಇರಬೇಕು.'

'ನೀವಿರೋ ಅಷ್ಟು ದಿನವೂ ನಮ್ಮ ಮನೆಗೆ ಬರುತಾ ಇರಿ ಸ್ವಾಮಿ; ಬಡವರು ಅಂತ ತಾತ್ಸಾರ ಮಾಡಬೇಡಿ.'

'ಏರದೇ ಏನು ನಟೇಶ್. ತಾತ್ಸಾರ ಮಾಡೋ ಮನುಷ್ಯನಾಗಿದ್ದರೆ ಇವತ್ತು ಬರುತ್ತಿದ್ದೆನೆ?'

ಅಷ್ಟು ಹೊತ್ತಿಗೆ ಇಂದಿರೆ ಎರಡು ಲೋಟಗಳಲ್ಲಿ ಕಾಫಿ ತಂದಿಟ್ಟು ಹೋದಳು. ಆ ಹುಡುಗಿ ಹೋಗುವುದನ್ನೇ ವೆಂಕಟಾಚಲಯ್ಯ ನೋಡುತ್ತಿದ್ದ.

'ನಮ್ಮ ಇಂದಿರಾನೂ ಈಚೆಗೆ ಫ್ಯಾಷನ್ ಕಲೀತಿದಾಳೆ ಸ್ವಾಮಿ. ಅವಳು ತುರುಬು ಕಟ್ಟಿರೋ ರೀತಿ ನೋಡುತ್ತಿದ್ದಿರೇನೋ?'

'ಆ ತರಹೆಯ ತುರುಬಿನಲ್ಲಿ ಹುಡುಗಿ ಬಹಳ ಮುದ್ದಾಗಿ ಕಾಣು ತಿದಾಳೆ ಅಂತ ನೋಡುತ್ತಿದ್ದೆ.'

'ಅದೆಲ್ಲಾ ಅವಳ ಅತ್ತಿಗೆ ತಯಾರಿ.'

'ಇಬ್ಬರೂ ಬಹಳ ಹೊಂದಿಕೊಂಡಿರುವಹಾಗೆ ಕಾಣುತ್ತೆ.'

'ಹೌದು; ಬಹಳ ಹೊಂದಿಕೊಂಡಿದಾರೆ.'

'ಅಡಿಗೆ ಕೆಲಸ ಎಲ್ಲಾ ಯಾರು........?'

'ಅವಳೇ ಮಾಡುತ್ತಾಳೆ.'

'ವಸಂತಾದೇವಿಯೇ? ನಿಜವಾಗಿ!'

'ಏಕೆ, ಹಾಗೆ ಕೇಳುತ್ತೀರಿ?'

'ವಿದ್ಯಾವಂತಳು, ಆಗರ್ಭ ಶ್ರೀಮಂತಳು. ಆಕೆ ಅಡಿಗೆ ಕೆಲಸ ಕಲಿತಿ ದಾಳೆಂದರೆ ಆಶ್ಚರ್ಯವೇ.'

'ಮಾಡುವುದರಲ್ಲೂ ಎಷ್ಟು ರುಚಿಯಾಗಿ ಮಾಡುತಾಳೆ ಎಂತಿದೀರಿ. ಇವತ್ತು ಹೇಗೂ ಭಾನುವಾರವಲ್ಲ, ನಮ್ಮಲ್ಲೇ ಇದ್ದುಬಿಡಿ. ಅಂದಹಾಗೇ ನಮ್ಮಗಳ ಮನೆಯಲ್ಲಿ........'

'ಅದೇನೂ ಇಲ್ಲ ನಟೇಶ್. ಆ ಛಾನಸವೆಲ್ಲಾ ಹಿಂದಿನ ಕಾಲಕ್ಕೇ ಹೋಯ್ತು. ಶುಚಿಯಾಗಿರುವ ಯಾವ ಕಡೆಯಲ್ಲಿ ಬೇಕಾದರೂ ಊಟ ಮಾಡಬಹುದು.'

'ಹಾಗಾದರೆ ಈದಿನ ಇಲ್ಲೇ ಇದ್ದುಬಿಡಿ. ಇಂದಿರಾ.'

'ನನಗಾಗಿ ಏನೂ ಹೆಚ್ಚಿಗೆ ಶ್ರಮ........'

'ಏನೂ ಇಲ್ಲ, ನೀವು ಸುಮ್ಮನಿರಿ.'

ವೆಂಕಟಾಚಲಯ್ಯನೂ ಊಟಕ್ಕೆ ನಿಲ್ಲುತ್ತಾರೆಂದು ಅಡಿಗೆಯ ಇಲಾಖೆಯ ಮುಖ್ಯಾಧಿಕಾರಿಗಳಿಗೆ ಸುದ್ದಿ ಕಳಿಸಿದ್ದಾಯಿತು. ಹೆಚ್ಚು ಕಾಲಾವ ಕಾಶ ತಾನಾಗಿ ದೊರಕಿತೆಂಬ ಸಂತೋಷದಿಂದ ವೆಂಕಟಾಚಲಯ್ಯ ಮಾತನ್ನು ಮುಂದುವರಿಸಿದ.

'ವಸಂತಾದೇವಿ ಇಷ್ಟು ಅನ್ಯೋನ್ಯವಾಗಿ ಸಂಸಾರ ಮಾಡುತ್ತಿರುವುದು ಕಂಡು ನನಗೆ ಬಹಳ ಸಂತೋಷವಾಗಿದೆ. ಎಷ್ಟಾದರೂ ದೊಡ್ಡ ಮನೆತನದ ಹೆಣ್ಣು.'

'ಈ ದೊಡ್ಡವರು ಎನಿಸಿಕೊಳ್ಳುವವರ ರೀತಿ ನನಗೆ ಒಂದೊಂದುಸಲ ಅರ್ಥವೇ ಆಗುತ್ತಿಲ್ಲ ಸ್ವಾಮಿ.'

'ಅದೇನಾಯಿತಪ್ಪ ಅಂಥ ಅರ್ಥವಾಗದ ವಿಷಯ.'

'ಹೌದು. ಅವರ ಮನಸ್ಸನ್ನು ತಿಳಿದುಕೊಳ್ಳುವುದೇ ಕಷ್ಟ.'

'ಎಂದರೆ?'

'ಬಹಳ ಒಳ್ಳೆಯವರಂತೆ ಇರುತಾರೆ, ಏನಾದರೂ ಒಳ್ಳೆಯದನ್ನು ಮಾಡಬೇಕಾದಾಗ ಹಿಂದೆಗೆದು ಕೆಟ್ಟುದಾಗುವಂತೆ ಮಾಡುತ್ತಾರೆ; ಕೆಲಸಕ್ಕೆ ಬರದ ಆಡಂಬರಗಳಿಗೆ ಲೆಕ್ಕವಿಲ್ಲದಷ್ಟು ಹಣ ಸುರಿದು ದಾನಶೂರ ಕರ್ಣರೆನಿಸಿ ಕೊಂಡಿರುತ್ತಾರೆ, ಆದರೆ ಕುಂಟರೋ ಕುರುಡರೋ ಭಿಕ್ಷಕ್ಕೆ ಹೋದರೆ ಬೈದು ಆಚೆಗೆ ನೂಕಿಸುತ್ತಾರೆ; ಕೆಲವರು ಕ್ರೂರಿಗಳಾಗಿ ದುಷ್ಟರಾಗಿ ತೋರ್ಪಡಿಸಿ ಕೊಳ್ಳುತ್ತಾರೆ, ಒಂದೊಂದುವೇಳೆ ಹೆಣ್ಣಿಗಿಂತ ಹೆಚ್ಚು ಕನಿಕರವನ್ನು ತೋರಿಸು ತ್ತಾರೆ. ಇವೆಲ್ಲ ನೋಡಿದರೆ ನನಗೆ ಒಂದೇ ಉತ್ತರ ಕಾಣುತ್ತದೆ. ನಾವು ನಿರೀಕ್ಷಿಸುವ ಸ್ವಭಾವಕ್ಕಿಂತ ವಿರುದ್ಧವಾಗಿ ನಡೆಯುವುದೇ ಶ್ರೀಮಂತಿಕೆಯ ವೈಶಿಷ್ಟ್ಯವಿರಬೇಕು.'

'ಅದು ಶ್ರೀಮಂತಳಾದ ಹೆಂಡತಿಯ ವೈಶಿಷ್ಟ್ಯವಲ್ಲತಾನೆ?'

ಗುಟ್ಟನ್ನು ಈಚೆಗೆಳೆಯುವ ಉದ್ದೇಶದಿಂದ ವೆಂಕಟಾಚಲಯ್ಯ ಪ್ರಶ್ನೆ ಮಾಡಿದ, ಕಪಟವನ್ನರಿಯದ ನಟೇಶನಿಂದ ಸರಳವಾದ ಉತ್ತರವೇ ಬಂತು.

'ವೈಶಿಷ್ಟ್ಯವೆಂಬುದಕ್ಕೆ ವಿನಾಯಿತಿಯೇ ಇಲ್ಲ. ನನ್ನ ಹೆಂಡತಿಗೂ ಅದು ಬಿಟ್ಟಿಲ್ಲ. ವಾಸ್ತವವಾಗಿ ನಾನು ಅವಳನ್ನು ಅರ್ಥಮಾಡಿಕೊಳ್ಳಲಾರದೆ ಇದೇನೆ.'

'ಕಾರಣ ?'

'ಅವಳು ನನ್ನನ್ನೇಕೆ ಮದುವೆಯಾದಳೆಂಬುದು ಮೊದಲನೆಯ ಸಮಸ್ಯೆ. ಮದುವೆಯಾದವಳು ನನ್ನನ್ನು ಗುರುತಿಸಲು ಗಂಡನೆಂದು ಒಪ್ಪಿಕೊಳ್ಳಲು ನಿರಾಕರಿಸಿದುದೇಕೆ, ಆಮೇಲೆ ಇಲ್ಲಿಗೆ ಬಂದು ನನ್ನ ಮನೆಯಲ್ಲಿ ನಿಂತು ಇಲ್ಲಿನ ಕಷ್ಟವನ್ನೆಲ್ಲ ಅನುಭವಿಸುತ್ತಿರುವುದೇಕೆ ?'

ವೆಂಕಟಾಚಲಯ್ಯನು ಭೇದಿಸಬೇಕಾಗಿದ್ದ ಸಮಸ್ಯೆಯೇ ನಟೇಶನು ಹೇಳುತ್ತಿರುವುದೂ ಆಗಿತ್ತು. ಸಂಭಾಷಣೆಯನ್ನು ತನ್ನ ಗುರಿಯತ್ತ ಸೆಳೆಯುವುದರಲ್ಲಿ ಜಾಣನಾದ ವೆಂಕಟಾಚಲಯ್ಯ ಮಾತನ್ನು ಮುಂದುವರಿಸಿದ.

'ಅದಕ್ಕೆ ಬಹುಶಃ ಒಂದು ಉತ್ತರವಿದೆ ನಟೇಶ್. ಹೆಂಗಸು ಗಂಡಸಿನಲ್ಲಿ ಅಪೇಕ್ಷಿಸುವ ಒಂದು ಆಕರ್ಷಣೆಯು, ಸತ್ವವು, ಸುಖವು........'

'ಆ ಸುಖವನ್ನು ಅವಳು ನಿರಾಕರಿಸಿದ್ದಾಳೆ' ಎಂದು ತಟ್ಟನೆ ನಟೇಶನು ಹೇಳಿದ. 'ತಾನು ಸಮ್ಮತಿಸುವವರೆಗೂ ತನ್ನನ್ನು ಮುಟ್ಟಕೂಡದೆಂದು ನನ್ನಿಂದ ಮಾತು ತೆಗೆದುಕೊಂಡಿದ್ದಾಳೆ. ಇನ್ನು ಸುಖವೆಂಬುದೇನುಬಂತು?'

ಇದು ಅತಿ ಮುಖ್ಯವಾದ ಹೊಸ ಸುದ್ದಿಯಾಯಿತು. ಅದನ್ನು ಮತ್ತಷ್ಟು ಸ್ಥಿರಪಡಿಸಬೇಕು.

'ಈ ವಿಷಯದಲ್ಲಿ ಮಾತು, ಪ್ರತಿಜ್ಞೆ ಇವೆಲ್ಲ ಎಂಥದು ನಟೇಶ್ ಗಂಡಹೆಂಡಿರ ನಡುವೆ ಇಂಥ ಕರಾರು ಸಾಧ್ಯವೆ ? ಎಷ್ಟುದಿನ ಸಾಧ್ಯ ?'

'ಅದೇ ವಸಂತಾದೇವಿಯಲ್ಲಿರುವ ವೈಶಿಷ್ಟ್ಯ. ಹೆಣ್ಣಾದವಳು ತಾನ ಒಂದು ನಿಯಮಕ್ಕೆ ಬದ್ಧಳಾಗಿ ನಿಲ್ಲಬಲ್ಲೆನೆಂಬ ಸ್ಥೈರ್ಯ ತೋರಿದ ಗಂಡಾದ ನಾನು ಎಂದಿಗೂ ಆ ನಿಯಮವನ್ನು ಮುರಿಯಲು ಬಯಸುವುದಿಲ್ಲ ಅದನ್ನು ಅಕ್ಷರಶಃ ಪಾಲಿಸುತ್ತೇನೆ; ಎಷ್ಟುಕಾಲ ಬೇಕಾದರೂ ಪಾಲಿಸುತ್ತೇನೆ ಆದರೆ ಅಂಥ ನಿಯಮವನ್ನು ಅವಳು ಹಾಕಿದಳೇಕೆ ಅಥವಾ ಹಾಗೆ ಸ್ವತಂತ್ರಳಾಗಿರಬೇಕೆನ್ನುವವಳು ಇಲ್ಲಿ ಬಂದು ದುಡಿಯುತ್ತಿರಬೇಕೇಕೆ ಎಂಬುದೇ ನನ ಸಮಸ್ಯೆ.'

ತನಗಿದ್ದ ಸಮಸ್ಯೆಯ ಪರಿಹಾರವನ್ನರಿಯ ಹೊರಟ ವೆಂಕಟಾಚಲಯ್ಯನಿಗೆ ಅದು ಇನ್ನೂ ಹೆಚ್ಚು ತೊಡಕು ಬಿದ್ದಿತು.

'ಇದರ ಅರ್ಥವೇನು ಸ್ವಾಮಿ, ನೀವು ನನಗಿಂತ ಹೆಚ್ಚು ತಿಳಿದವರು.

'ಎಷ್ಟು ತಿಳಿದವರಾದರೂ ಹೆಣ್ಣಿನ ಮನಸ್ಸನ್ನು ತಿಳಿಯಬಲ್ಲ ಗಂಡು ಇನ್ನೂ ಹುಟ್ಟಿಲ್ಲ ನಟೇಶ್. ಅಷ್ಟು ವಿಚಿತ್ರವಾದ ಶಕ್ತಿಯನ್ನು ಹೆಣ್ಣಿಗೆ ಕೊಟ್ಟ ವಿಧಾತನು ಅದನ್ನು ಅರಿಯಬಲ್ಲ ಶಕ್ತಿಯನ್ನು ಗಂಡಿಗೆ ಕೊಡಲು ಮರೆತುಬಿಟ್ಟಿದಾನೆ.'

ಹೊರಗೆ ಕೈಬಳೆಗಳ ಸದ್ದಾಯಿತು. ಕೋಣೆಯ ಬಾಗಿಲನ್ನು ತಳ್ಳಿಕೊಂಡು ಇಂದಿರೆಯು ಒಳಕ್ಕೆಬಂದು ಇಬ್ಬರನ್ನೂ ಊಟಕ್ಕೆ ಕರೆದಳು.

— ೨೭ —

ಸ್ವಾಮಿಯು ಬಂಗಾರಪೇಟೆಯಲ್ಲಿ ಬಂದು ನಿಂತು ಮೂರು ದಿನಗಳಾಗಿದ್ದುವು. ಬಂದ ಮೊದಲನೆಯದಿನ ಅವನಕಡೆ ಯಾರೂ ಗಮನ ಕೊಟ್ಟಿರಲಿಲ್ಲ. ಶಿಸ್ತಾಗಿ ಬಟ್ಟೆ ಹಾಕಿಕೊಂಡು ಸಿಗರೇಟ್ ಸೇದುತ್ತ ಲಂಡನ್ ಪಟ್ಟಣದಲ್ಲಿ ಓಡಾಡುವಂತೆ ಭಾವಿಸಿಕೊಂಡು ಠೀವಿಯಿಂದ ಬೆಳಗ್ಗೆ ಸಂಜೆ ಸುತ್ತಾಡಿಕೊಂಡು ಬರುತ್ತಿದ್ದ ಈ ಅಲಂಕಾರಪ್ರಿಯನಕಡೆ ಎಲ್ಲರ ಗಮನವೂ ಎರಡನೆಯ ದಿನದ ಹೊತ್ತಿಗೆ ಬಿದ್ದಿತು. ಇಂಥ ಪ್ರವಾಸಿಕರನ್ನು ಕಂಡು ಗುರುತಿಸಿ ಆದರಿಸುವ ಅಭ್ಯಾಸವಿರುವ ಕೆಲವು ಲೋಕೋಪಕಾರಿಗಳಂತೂ ತಮಗೆ ಹೊಸದೊಂದು ಗಿರಾಕಿಯು ಸಿಕ್ಕಿತೆಂದು ಹಿಗ್ಗಿದರು. ಸಂಜೆ ಅವನು ಸಂಚಾರಕ್ಕಾಗಿ ಹೊರಡುವ ಸಮಯಕಾದು ಅವರಲ್ಲಿ ಒಬ್ಬನು ಇವನನ್ನು ಹಿಂಬಾಲಿಸಿದ.

ಸ್ವಲ್ಪದೂರ ಹೋಗುವುದರೊಳಗೆ ಅವನು ತನ್ನನ್ನೇ ಅನುಸರಿಸುತ್ತಿರುವನೆಂಬ ಅರಿವು ಸ್ವಾಮಿಗುಂಟಾಯಿತು. ಊರನ್ನು ಬಿಟ್ಟು ಗಣಿಗಳ ಕಡೆಗೆ ಹೋಗುವ ರಸ್ತೆಯಲ್ಲಿ ಅವರು ನಡೆಯುತ್ತಿದ್ದರು. ಅಪರಿಚಯಸ್ಥನಾದ ಮನುಷ್ಯ ತನ್ನನ್ನೇಕೆ ಹಿಂಬಾಲಿಸುತ್ತಿರಬಹುದೆಂಬ ಕುತೂಹಲ. ಅವನು ಪೋಲೀಸು ಗುಪ್ತಚಾರನೆ, ಕಳ್ಳರ ಗುಂಪಿಗೆ ಸೇರಿದವನೆ, ದಳ್ಳಾಳಿಯೆ, ಯಾರಿರಬಹುದೆಂಬ ಚಪಲ ಇವು ಸ್ವಾಮಿಯ ನಡಿಗೆಯನ್ನು ಜಗ್ಗಿಸಿದ್ದವು. ಸಮಯಕಾದು ಅವನು ಹತ್ತಿರಬಂದು

'ದಯವಿಟ್ಟು ಒಂದು ಮಾಚೀಸ್ ಇದೆಯೆ ಸಾರ್' ಎಂದು ಕೇಳಿದ.

ಸ್ವಾಮಿಯು ಅವನು ಕೇಳಿದುದೇನೆಂದು ಗ್ರಹಿಸದೆ 'ಏನು ?' ಎಂದ.

'ಒಂದು ಮಾಚೀಸ್ ಕೇಳಿದೆ ಸಾರ್.'

ಅವನ ಅಭಿನಯದಿಂದ ಅವನಿಗೆ ಬೇಕಾಗಿದ್ದುದು ಬೆಂಕಿಯ ಕಡ್ಡಿ ಯೆಂದರಿತು ಸ್ವಾಮಿಯು ಬೆಂಕಿಯ ಪೊಟ್ಟಣವನ್ನು ಅವನ ಕೈಗೆಕೊಟ್ಟ. ಅವನು ಒಂದು ಕತ್ತರಿ ಮಾರ್ಕಿನ ಸಿಗರೇಟನ್ನು ಹತ್ತಿಸಿಕೊಂಡು ಪೊಟ್ಟಣವನ್ನು ಹಿಂದಕ್ಕೆ ಕೊಡುತ್ತ

'ತಾವು ಇಲ್ಲಿಗೆ ಹೊಸಬರಹಾಗೆ ಕಾಣುತ್ತಿ' ಎಂದು ಪೀಠಿಕೆ ಹಾಕಿದ.

'ಹೌದು.'

'ಯಾವ ಊರು ಸಾರ್ ತಮ್ಮದು ?'

'ಬೆಂಗಳೂರು.'

'ಓ.........ಬೆಂಗಳೂರಲ್ಲಿ ನಮ್ಮ ಜನ ಬಹಳ ಮಂದಿ ಇದಾರೆ.'

'ಇರಬಹುದು.'

'ಇಲ್ಲಿ ಯಾರ ಮನೆಗೆ ಬಂದಿದ್ದಿರಿ ಸಾರ್ ?'

ಸ್ವಾಮಿಯು ತನ್ನ ನಡಿಗೆಯನ್ನು ನಿಲ್ಲಿಸಿ ಒಮ್ಮೆ ಅವನ ಮುಖವನ್ನು ನೋಡಿದ. ಇದರ ಕಾರಣವನ್ನರಿತ ಅವನು

'ಸುಮ್ಮನೆ ಕೇಳಿದೆ ಸಾರ್, ಏನೂ ತಿಳಕೋಬಾರದು. ನನಗೆ ಈ ಊರಲ್ಲಿ ಎಲ್ಲಾರೂ ಗೊತ್ತಿದಾರೆ, ಅದರಿಂದ ಕೇಳಿದೆ.'

ಎಲ್ಲರೂ ಗೊತ್ತಿದಾರೆ! ಗಣಿ ಪ್ರದೇಶದವರೂ ಗೊತ್ತಿರಬಹುದು. ಆದರೆ ಇವನು ಯಾರೆಂದು ತಿಳಿಯದೆ ತಾನು ಯಾವುದನ್ನೂ ಕೇಳಬಾರದು.

'ಸರಿಯಪ್ಪಾ, ನೀನು ಯಾರು ಗೊತ್ತಾಗಲಿಲ್ಲವಲ್ಲ!'

'ನನ್ನ ಹೆಸರು ಮುತ್ತುಕಣ್ಣ ಅಂತ. ಜನಗಳು ಸಾಮಾನ್ಯವಾಗಿ ಮುತ್ತೂ ಮುತ್ತೂ ಅಂತ ಕರೀತಾರೆ.'

'ಒಳ್ಳೆಯದು ಮಿಸ್ಟರ್ ಮುತ್ತುಕಣ್ಣನ್.'

'ತಾವು ದೊಡ್ಡವರು, ನನ್ನನ್ನು ಮಿಸ್ಟರ್ ಗಿಸ್ಟರ್ ಅಂತ ಕರೀಬಾರದು ಸಾರ್. ಮುತ್ತು, ಖಾಲಿ ಮುತ್ತು ಅಂತ ಕೂಗಿ.'

'ಆಗಬಹುದು, ನಿನಗೆ ಆನಂದ ಭವನ ಹೋಟೆಲ್ ಗೊತ್ತಿದೆ ಯಲ್ಲ.'

'ಅದು ಗೊತ್ತಿಲ್ಲದೆ ಉಂಟೆ ಸ್ವಾಮಿ ! '

'ಅಲ್ಲಿ ಬಂದು ಮೂರನೆಯ ನಂಬರು ರೂಮಿನಲ್ಲಿ ನನ್ನನ್ನು ಕಾಣು.'

ಹೇಗಾದರೂ ಅವನನ್ನು ತೊಲಗಿಸಬೇಕೆಂಬ ಮನಸ್ಸು ಸ್ವಾಮಿಗೆ. ಷಿಕಾರಿ ತನ್ನ ಬಲೆಗೆ ಬೀಳುತ್ತಿದೆಯೆಂಬ ಭರವಸೆ ಮುತ್ತುವಿಗೆ.

'ಆಗಲಿ ಸ್ವಾಮಿ. ತಮ್ಮ ಪಾದಸೇವೆಗೆ ನಾನು ಸಿದ್ಧವಾಗಿದೀನಿ. ರಾತ್ರೀಗೆ ಏನಾದರೂ ನೋಡುತೀರಾ ಬುದ್ಧಿ.'

ಏನಾದರೂ ನೋಡುತೀರಾ ? ಸ್ವಾಮಿಗೆ ಇದೇನೋ ಹೊಸ ಮಾತಾ ಗಿತ್ತು. ರಾತ್ರಿ ಏನನ್ನು ನೋಡುವುದು ; ಅದೂ ಇಂಥ ಕುಗ್ರಾಮದಲ್ಲಿ!

ಸ್ವಾಮಿಯಿಂದ ತಕ್ಷಣ ಉತ್ತರ ಬಾರದುದನ್ನು ಕಂಡು ಮುತ್ತುವು ತನ್ನ ಪ್ರಶ್ನೆಯನ್ನು ಮತ್ತಷ್ಟು ಬಿಡಿಸಿ ಹೇಳಿದ.

'ಬಹಳ ಒಳ್ಳೆಯ ಮಾಲುಗಳು ಇವೆ ಸ್ವಾಮಿ ನನ್ನ ಹತ್ತಿರ. ಇನ್ನೂ ಹೊಸಾ ಹೊಸ ಮಾಲುಗಳು.'

ಅವನು ಯಾರೆಂಬ ಸೂಚನೆ ಸ್ವಾಮಿಗೆ ಸ್ವಲ್ಪ ಮಟ್ಟಿಗೆ ಆಯಿತು. ಅಂಥ ವ್ಯಕ್ತಿಯ ಮುಂದೆ ತಾನು ನಿಂತಿರುವಷ್ಟಕ್ಕೇ ಎದೆಯು ದಡದಡ ಹೊಡೆದುಕೊಳ್ಳಲಾರಂಭಿಸಿತು, ಮೈ ಬೆವರತೊಡಗಿತು, ನಾಲಗೆ ತೊದಲು ತ್ತಿತ್ತು. ಇದ್ದುದರಲ್ಲಿ ಧೈರ್ಯ ತಂದುಕೊಂಡು

'ರೂಮಿನ ಹತ್ತಿರಕ್ಕೆ ಬಾ' ಎಂದ.

'ಎಂಟು ಗಂಟೆಗೆ ಬರಲಾ ಬುದ್ಧಿ?'

'ಹೂಂ.'

ಮುತ್ತುವು ಹೋಗಬಹುದೆಂದು ಸ್ವಾಮಿಯು ನಿರೀಕ್ಷಿಸಿ ಎರಡುಹೆಜ್ಜೆ ಮುಂದೆ ನಡೆದ ; ಮುತ್ತುವೂ ಹಿಂದೆ ಬಂದ. ಇವನು ಮತ್ತೇಕೆ ಹಿಂದೆ ಬಿದ್ದ ನೆಂದು ತಿರುಗಿ ಅವನ ಮುಖ ನೋಡಿದ. ಸ್ವಾಮಿಯು ತನ್ನ ಕಡೆ ನೋಡಿದು ದನ್ನು ಕಂಡು ಅವನು ಹಲ್ಲು ಕಿರಿಯುತ್ತಾ ತಲೆಯನ್ನು ಒಂದು ಪಕ್ಕೆಗೆ ಮಾಡಿಕೊಂಡು ತಲೆಯ ಹಿಂಭಾಗವನ್ನು ಎಡಗೈಯಿಂದ ಕೆರೆದುಕೊಳ್ಳ ತೊಡಗಿದ.

'ಮತ್ತೇನು ಮುತ್ತೂ?'

'ಕಾಫೀಗೆ ಏನಾದರೂ ಅಪ್ಪಣೆಯಾಗಬೇಕು.

ಅವನು ತೊಲಗಿದರೆ ಸಾಕೆಂಬ ಇಚ್ಛೆಯಿಂದ ಸ್ವಾಮಿಯು ಜೇಬಿಗೆ ಕೈ ಹಾಕಿ ಒಂದು ರೂಪಾಯನ್ನು ಅವನ ಕೈಯಲ್ಲಿ ಹಾಕಿದ. ಮುತ್ತುವು ಕೃತಜ್ಞತೆಯನ್ನು ಮುಖದಲ್ಲೆ ಸೂಚಿಸಿ

'ಗಾಡೀ ಚಾರ್ಜು ಕೊಟ್ಟಿದ್ದರೆ ಕರಕೊಂಡೇ ಬಂದುಬಿಡುತಿದ್ದೆ' ಎಂದ.

'ಏನೂ ಬೇಡ.'

'ಇರಲಿ ಬುದ್ಧಿ ಪರವಾಇಲ್ಲ, ಆಮೇಲೇ ಕೊಡೋರಂತೆ, ನಾನೇನೂ ಅಂತ ಇಂತ ಮಾಲಿಟ್ಟಿಲ್ಲ; ತಾಜಾಮಾಲಾದರೆ ಒಪ್ಪಿಕೊಳ್ಳಿ; ನೀವು ನೋಡಿ'

ಎನ್ನುತ್ತ ಮುತ್ತು ಹೊರಟುಹೋದ.

ಅಲ್ಲಿಂದ ಮುಂದಕ್ಕೆ ಹೋಗಲು ಸ್ವಾಮಿಗೆ ಕಾಲು ಬರಲಿಲ್ಲ. ಅನಿರೀಕ್ಷಿತವಾದ ಯಾವುದೋ ಒಂದು ಮಹತ್ತಾದ ವಿಷಯವು ಅವನ ಮನಸ್ಸನ್ನು ಆಕರ್ಷಿಸಿತ್ತು. ದಾರಿಯ ಪಕ್ಕದಲ್ಲಿದ್ದ ಒಂದು ಸೇತುವೆಯ ಮೇಲೆ ಕುಳಿತುಕೊಂಡು ಯೋಚಿಸತೊಡಗಿದ. ಮುತ್ತುಕಣ್ಣನು ಬಂದಿದ್ದ ಕೆಲಸ ತನ್ನನ್ನು ಪಾಪ ಕೂಪಕ್ಕೆ ಎಳೆಯುವುದಕ್ಕೆ. ಅವನು ಪುನಃ ರಾತ್ರಿ ಎಂಟುಗಂಟೆಗೆ ಬರಬಹುದು; ಆಗ ಅವನನ್ನು ಪೋಲೀಸರ ವಶಕ್ಕೆ ಒಪ್ಪಿಸಲೆ, ಅಥವಾ ಹೋಟಲಿನವರಿಗೆ ಹೇಳಿ ಅವನು ತನ್ನ ಹತ್ತಿರಕ್ಕೆ ಬರದಂತೆ ತಕ್ಕ ಬಂದೋಬಸ್ತು ಮಾಡಿಸಲೆ? ಇಂಥ ಕೆಟ್ಟಜನರನ್ನು ಸುಮ್ಮನೆ ಬಿಡಬಾರದು.

ಆದರೆ ಅವನು ಮಾಡಿರುವ ತಪ್ಪಾದರೂ ಏನು? ನನ್ನಂತಹ ಎಷ್ಟೋಮಂದಿ ಪ್ರವಾಸಿಗರು ಅವನಿಂದ ಪ್ರಯೋಜನ ಹೊಂದಿರಬಹುದು; ಅವರಂತೆಯೇ ನಾನೂ ಎಂದು ತಿಳಿದು ನನ್ನನ್ನು ಮಾತಾಡಿಸಿದ. ಅವನ ಸಹಾಯ ಬೇಕಿದ್ದರೆ ಸರಿ, ಇಲ್ಲವಾದರೆ ಬೇಡವೆನ್ನುವುದು ತಾನೆ? ಅವನೇನಾದರೂ ಒತ್ತಾಯ ಪಡಿಸಿದನೆ, ಮೋಸ ಮಾಡಿದನೆ, ನನ್ನ ಹಣವನ್ನೇನಾದರೂ ಅಪಹರಿಸಿದನೆ, ಏನು ತಪ್ಪು ಮಾಡಿದಾನೆಂದು ತಾನು ಅವನಮೇಲೆ ಕೋಪ ಮಾಡಬೇಕು?

ಇವಲ್ಲದೆ ಈಗ ತನಗೆ ಹೊಸದೊಂದು ಅವಕಾಶ ಸಿಕ್ಕಿದೆ. ಬೆಂಗಳೂರಿನಲ್ಲಿ ತಾನು ಕಾಣಲಾಗದ ಜೀವನದ ಒಂದು ಹೊಸದೃಶ್ಯ ಈಗ ತನ್ನೆದುರಿಗೆ ನಿಲ್ಲುವು

ದಾಗಿದೆ. ಇಂಥ ವ್ಯಕ್ತಿಗಳ, ಇಂಥ ವ್ಯಾಪಾರಗಳ ವಿಷಯವನ್ನು ಅವರಿವರಿಂದ ಕೇಳಿದ್ದುದುಂಟು; ಕೆಲವು ಆಧುನಿಕ ಸಾಹಿತಿಗಳ ಕಾದಂಬರಿಗಳಲ್ಲಿ, ಮನೆಯಲ್ಲಿನ ಹಿರಿಯರ ಕಣ್ಣಿಗೆ ಬೀಳದಹಾಗೆ, ಕದ್ದು ಕಾಣದಂತೆ ಓದಿದ್ದುದುಂಟು. ಅಲ್ಲಿ ವರ್ಣಿತವಾದ ಜೀವನದ ಅನುಭವವೊಂದನ್ನು ತನಗೆ ದೊರಕಿಸಿಕೊಡಲು ಮುತ್ತುಕಣ್ಣನು ಬಂದಿದ್ದಾನೆ. ಇವನ ಸಹಾಯವನ್ನೇಕೆ ಪಡೆಯಬಾರದು ?

ಮುಂಬರುವ ಪ್ರಚಲಿತ ಸುಖಾನುಭವದ ಕನಸು ಸ್ವಾಮಿಯಲ್ಲಿ ರೋಮಾಂಚವನ್ನುಂಟುಮಾಡಿತು; ಹೃದಯವು ಬೇಗಬೇಗ ಹೊಡೆದುಕೊಳ್ಳ ತೊಡಗಿತು; ಮನಸು ಯಾವುದೋ ಒಂದು ತೆರದ ಅವ್ಯಕ್ತವಾದ ಆನಂದದಲ್ಲಿ ತೂಗಾಡುತಿರುವಂತೆ ತೋರಿತು. ಆದುದಾಗಲಿ ಈ ಅವಕಾಶವನ್ನು ಬಿಡಬಾರದೆಂಬ ಧೈರ್ಯ ಬರಲೋ ಬೇಡವೋ ಎಂದು ಇಣಿಕಿಹಾಕುತ್ತಿತ್ತು; ಅದರ ಜೊತೆಯಲ್ಲೇ ಮನಸ್ಸು ನೆಲೆಯನ್ನರಿಯದೆ ಮುಂದಾಗುವುದನ್ನು ತಿಳಿಯಲಾರದೆ ನೈಜವಾಗಿ ಅಳುಕುತ್ತಿತ್ತು.

ಹೊಟೇಲಿಗೆ ಹಿಂತಿರುಗಿ ಬಟ್ಟೆ ಬದಲಾಯಿಸಿ ಸ್ವಾಮಿಯು ಹಾಸಿಗೆಯ ಮೇಲೆ ಉರುಳಿಕೊಂಡು ಆಗತಾನೇ ಬಂದಿದ್ದ ಪತ್ರಿಕೆಯನ್ನು ನೋಡಲು ಯತ್ನಿಸಿದ. ಒಂದು ಪಂಕ್ತಿಯಲ್ಲಿ ಅರ್ಧಭಾಗ ಓದುವಷ್ಟರಲ್ಲಿ ಮುತ್ತು ಕಣ್ಣನು ತನ್ನ ಮುಂದೆ ಇಡಲಿರುವ ಜೀವನದ ಕಡೆ ಮನಸ್ಸು ಹರಿಯಿತು.

ಅದು ಸರಿಯೆ ತಪ್ಪೆ ಎಂಬ ವಿಮರ್ಶೆಯನ್ನು ಮಾಡಲು ಮತ್ತೆ ಆರಂಭವಾಯಿತು. ಮನಸ್ಸಿನ ಸ್ವಭಾವ ಬಹು ವಿಚಿತ್ರವಾದುದು. ನಮ್ಮ ನಡೆನುಡಿ ಆಚಾರ ವಿಚಾರಗಳಲ್ಲಿ ನಾವು ತಪ್ಪಿ ನಡೆಯುವಾಗ ಇದು ತಪ್ಪೆಂಬ ಭಾವ ಮನಸಿಗೆ ಹೊಳೆಯುತ್ತದೆ; ಆದರೆ ಅದಕ್ಕೆ ವಿರುದ್ಧವಾದ ಬೇರೊಂದು ಶಕ್ತಿಯು ನಮ್ಮ ತಲೆಯಲ್ಲಿ ಹೊಕ್ಕಿದ್ದು ಆ ಕಡೆಗೆ ಹೆಚ್ಚು ನಮ್ಮ ವಿಶ್ವಾಸವಿರುವ ಸಂದರ್ಭದಲ್ಲಿ ಮನಸಿನಲ್ಲಿ ನಡೆಯುವ ಈ ಘರ್ಷಣೆಯು ಅತ್ತಕಡೆಗೇ ನಮ್ಮನ್ನು ಎಳೆದೊಯ್ಯುತ್ತದೆ. ತಪ್ಪೆಂದು ಎಚ್ಚರಿಕೆ ಕೊಡುವ ಮನಸ್ಸು ಅದನ್ನು ಪ್ರತಿರೋಧಿಸಲು ಸಹಾಯ ಮಾಡುವುದಿಲ್ಲ; ಎಂದಮೇಲೆ, ಆ ತಪ್ಪು ದಾರಿಯನ್ನು ನಾವು ತುಳಿಯುವಂತೆ—ಮನಸ್ಸು ಆ ಮಾರ್ಗದಲ್ಲೇ ಹರಿಯುವಂತೆ—ಸಾಧಿಸುವ ಆ ದುಷ್ಟ ಶಕ್ತಿಯಾವುದು? ಅದೂ ಮನಸಿನ ಒಂದ ಭಾಗವೆ?

ಸ್ವಾಮಿಯ ಮನಸ್ಸು ಮುತ್ತುಕಣ್ಣನ ವಿಷಯದಲ್ಲಿ ಎಚ್ಚರಿಕೆ ಕೊಟ್ಟಿತು; ಸ್ವಲ್ಪ ಹೊತ್ತು ಒಳಗೇ ಘರ್ಷಣೆಯಾಗಿ ಅವನು ಬೀಸಿದ್ದ ಬಲೆಯೊಳಕ್ಕೆ ಸ್ವಾಮಿಯನ್ನು ಎಳೆದೊಯ್ಯಿತು. ದೀಪವನ್ನಾರಿಸುವೆನೆಂದು ಹೊರಟು ಪತಂಗ ಅದಕ್ಕೆ ತನ್ನ ರೆಕ್ಕೆಗಳನ್ನು ಬಡಿಯ ತೊಡಗಿತು. ಬೇಗ ಊಟದ ಶಾಸ್ತ್ರ ಮುಗಿಸಿ ಸ್ವಾಮಿಯು ಎಂಟುಗಂಟೆಯಾಗುವುದನ್ನು ನಿರೀಕ್ಷಿಸುತ್ತ ತನ್ನ ಕೋಣೆಯಲ್ಲಿ ಕುಳಿತ.

ಎಂಟು ಗಂಟೆ ಯಾಗುವುದಕ್ಕೆ ಮುಂಚೆಯೇ ಮುತ್ತುಕಣ್ಣನು ಬಂದ. ಕಸುಬಿನಲ್ಲಿ ಪಳಗಿದ ಕೈ ; ತನ್ನ ಹೊಸ ಷಿಕಾರಿಗೆ ಈ ಪ್ರಪಂಚವೂ ಹೊಸದು ಎಂಬ ಅರ್ಥ ಎರಡು ಮಾತಿನಲ್ಲೇ ಆಗಿತ್ತು. ಹೊಸ ಪ್ರಪಂಚಕ್ಕೆ—ತತ್ರಾಪಿ ಜೀವಿತದ ಸುಖದ ಸಾರವೆಂದು ಕಲ್ಪನಾಲೋಕದಲ್ಲಿ ಕಾಣುತ್ತಿರುವ ಸುಖ ಪ್ರಪಂಚಕ್ಕೆ—ಕಾಲಿಡಲೆ ಬೇಡವೆ ಎಂದು ಹಿಂದು ಮುಂದು ತುಳಿಯುತ್ತಿರುವ ಜೀವ ಹೇಗೆ ತಲ್ಲಣಿಸುತ್ತಿರುವುದೆಂಬ ಅನುಭವವನ್ನು ಬಲ್ಲ ಮುತ್ತುವು ತಾನು ತೋರಲಿರುವ ನೂತನ ಪ್ರಪಂಚದ ಸುತ್ತ ಗಭೀರವಾದ ರಹಸ್ಯಮಯವಾದ ಒಂದು ಆವರಣವನ್ನು ಕಲ್ಪಿಸಲು ತಕ್ಕ ಯೋಜನೆಯನ್ನು ಸಿದ್ಧಪಡಿಸಿ ಕೊಂಡಿದ್ದ. ಅಂತೆಯೇ ಅವನು ಯಾರ ಕಣ್ಣಿಗೂ ಬೀಳದೆ ಬಂದವನಂತೆ ಅತ್ತಿತ್ತ ನೋಡುತ್ತ ಮುಖದಲ್ಲಿ ಭಯವನ್ನು ತೋರುತ್ತ ಕೋಣೆಯೊಳಕ್ಕೆ ಬಂದು ಸರ್‍ರನೆ ಬಾಗಿಲನ್ನು ಮುಚ್ಚಿ ಅಗಳಿ ಹಾಕಿದ. ಇಂಥ ರಹಸ್ಯ ವ್ಯವಹಾರದ ಅನುಭವವಿಲ್ಲದ ಸ್ವಾಮಿಗೆ ಕೊಂಚ ಸಂದೇಹವಾಗಿ

'ಬಾಗಿಲೇಕೆ ಹಾಕಿದೆ' ಎಂದ.

'ಯಾರಾದರೂ ನೋಡಿಯಾರು' ಎಂದು ಉಸಿರಿಂದ ಉತ್ತರ ಬಂತು.

ಮುತ್ತುವು ಪಿಸುಮಾತು ಕೇಳುವಷ್ಟು ದೂರದಲ್ಲಿ ನಿಂತು ನಮ್ರತೆ ಯನ್ನಭಿನಯಿಸುತ್ತ ತನಗೆ ದೇವರು ಕರುಣಿಸಿದ್ದ ಎಲ್ಲ ಹಲ್ಲುಗಳನ್ನೂ ಪ್ರದರ್ಶಿಸುತ್ತ

'ನೀವು ಬಹಳ ಅದೃಷ್ಟವಂತರು ಸಾರ್' ಎಂದ.

'ಏಕೆ ?'

'ಸಾಯಂಕಾಲ ತಮ್ಮ ಹತ್ತಿರ ಮಾತಾಡಿಕೊಂಡು ಹೋದವನು ಎಲ್ಲೆಲ್ಲೋ ಸುತ್ತಿದೆ. ಒಂದೊಂದು ಕಡೆಯೂ ಒಂದೊಂದು ತೊಂದರೆ ಇತ್ತು.

ನಾನು ಅಂಥ ಇಂಥ ಸ್ಥಳಗಳಿಗೆ ಹೋಗುವುದಿಲ್ಲ ನೋಡಿ; ಏನಿದ್ದರೂ ಫಸ್ಟ್ ಕ್ಲಾಸ್ ಮಾಲು—ಅದರಲ್ಲೂ ಸಂಸಾರಿಯಾಗಿ ಹೊಸದಾಗಿ ಇರಬೇಕು. ಆದರೆ ಇವತ್ತು ಯಾವುದೂ ಅನುಕೂಲವಾಗಲಿಲ್ಲ.'

'ಹಾಗಾದರೆ!'

'ಸಿಕ್ಕಲಿಲ್ಲ ಅಂತ ಸುಮ್ಮನೆ ಬಿಡುತೇನೆಯೆ? ಕಡೆಗೆ ಒಂದು ಕಡೆ ಧೈರ್ಯಮಾಡಿ ಪ್ರಯತ್ನಮಾಡಿದೆ. ದೊಡ್ಡ ಆಫೀಸರ ಮನೆ ಅದು; ಮದ್ರಾಸಿಗೆ ಕೊಟ್ಟಿದಾರೆ. ನೋಡೋದಕ್ಕೆ ಎರಡು ಕಣ್ಣು ಸಾಲದು ಎನ್ನಿ; ಯಾವ ಸಿನೀಮಾ ಸ್ಟಾರೂ ಇಲ್ಲ ಅದರ ಮುಂದೆ. ನಿಮ್ಮ ಭಾನುಮತಿ, ರಾಜಕುಮಾರಿ ಅವರನ್ನೆಲ್ಲ ಅದರ ಮುಂದೆ ನಿವಾಳಿಸಿ ಹಾಕಬೇಕು. ಅಂಥ ಪದಾರ್ಥ ನಮ್ಮ ಪಟ್ಟಿಯಲ್ಲಿ ಸೇರಿರಲಿ ಅಂತ ಅದಕ್ಕೆ ಮದುವೆ ಆಗೋದಕ್ಕೆ ಮೊದಲಿಂದ ಎಷ್ಟೋ ಪ್ರಯತ್ನ ಮಾಡಿದ್ದೆ. ಯಾರು ಉಣ್ಣೋ ಊಟ ಯಾರಿಗೆ ಸಿಕ್ಕೀತು ಸ್ವಾಮಿ? ನಿಮಗೋಸ್ಕರವೇ ಅದು ಮೀಸಲಾಗಿತ್ತು ಅಂತ ಕಾಣುತ್ತೆ. ಇವತ್ತು ಬೇರೊಬ್ಬರನ್ನು ಮಧ್ಯಸ್ಥಿಕೆಗೆ ಬಿಟ್ಟು ಅದನ್ನ ಕುದುರಿಸಿ ಬಿಟ್ಟೆ.

'ಹಾ, ನಿಜವಾಗಿ?'

'ನಿಜವೇನು ಬಂತು ಸ್ವಾಮಿಯವರೆ; ಅಲ್ಲಿ ಸ್ವಲ್ಪ ಹೊರಗಡೆ ಹಾಗೇ ಕಿಟಕಿಯಿಂದ ನೋಡಿ.'

ಸ್ವಾಮಿಯು ಕಿಟಕಿಯಿಂದ ಹೊರಗೆ ನೋಡಿದ.

'ಅಲ್ಲಿ ಕಂಬದ ಹತ್ತಿರ ಸ್ವಲ್ಪ ಕತ್ತಲೇಲಿ ಗಾಡಿ ಕಾಣುತ್ತೋ?'

'ಹೌದು, ಅಲ್ಲೊಂದು ಗಾಡಿ ಇದೆ.'

'ಅದರ ಹತ್ತಿರ ಒಬ್ಬ ಗಂಡಸು ನಿಂತಿದಾನೊ?'

'ಹೌದು, ನಿಂತಿದಾನೆ.'

'ನಿಮ್ಮ ಪದಾರ್ಥ ಆ ಗಾಡೀಲಿದೆ. ಅಲ್ಲಿ ನಿಂತಿರುವ ಮನುಷ್ಯನೇ ಇಷ್ಟೆಲ್ಲ ಏರ್ಪಾಡು ಮಾಡಿಕೊಟ್ಟವನು. ಅವನನ್ನ ಮೊದಲು ಕಳಿಸಿ ಬಿಡಬೇಕು.'

'ಆದರೆ ಒಂದು ಮಾತು..............

'ಆ ಮಾತೆಲ್ಲಾ ಆಮೇಲೆ ಆಡೋಣ. ಎಲ್ಲಿ ಒಂದು ಇಪ್ಪತ್ತು ರೂಪಾಯಿ ಕೊಡಿ. ಮೊದಲು ಅವನನ್ನ ಕಳಿಸಿಬಿಡುತೀನಿ. ಅವನು ಅಲ್ಲಿ ನಿಂತಿದ್ದರೆ ಸುಮ್ಮನೆ ಪುಕಾರಿಗೆ ಅವಕಾಶ.'

ರೂಪಾಯಿಗಳನ್ನು ಕೊಡದೆ ಬೇರೆ ದಾರಿ ಇಲ್ಲವೆಂಬಂತೆ ಸ್ವಾಮಿಗೆ ತೋರಿತು. ಇಪ್ಪತ್ತು ರೂಪಾಯಿಗಳನ್ನು ಮುತ್ತುವಿನ ಕೈಯಲ್ಲಿಟ್ಟ. ಮುತ್ತುವು ಗಾಡಿಯ ಬಳಿಗೆ ಹೋಗಿ ಅಲ್ಲಿ ನಿಂತಿದ್ದವನೊಡನೆ ಏನೋ ಮಾತಾಡುತ್ತಿರುವಂತೆ ಅವನನ್ನು ಅಲ್ಲಿಂದ ಕಳಿಸಿಬಿಟ್ಟಂತೆ ಕಂಡಿತು. ಮತ್ತೆ ಮುತ್ತುವು ಮಹಡಿಯ ಮೇಲಕ್ಕೆ ಸ್ವಾಮಿಯ ಬಳಿಗೆ ಬಂದು

'ಸದ್ಯ, ಒಂದು ಶನಿ ತೊಲಗಿತು. ಇನ್ನು ಮುಂದಿನ ಏರ್ಪಾಡು ಹೇಗೆ ಸ್ವಾಮಿಯವರೆ ?' ಎಂದ.

'ಹೇಗೆ ಎಂದರೆ ?'

'ನೀವೇ ಕೆಳಗಿಳಿದುಬಂದು ಅವರನ್ನು ನೋಡುತ್ತೀರಾ, ಅಥವಾ ಅವರನ್ನೇ ಇಲ್ಲಿಗೆ ಕರೆದುಕೊಂಡು ಬರಲೆ, ಹೇಗೆ ?'

'ಯಾವುದು ಉತ್ತಮ ನೀನೇ ಹೇಳು.'

'ನಿಮ್ಮಿಷ್ಟ, ನಿಮ್ಮ ಧೈರ್ಯ. ಅವರು ದೊಡ್ಡ ಆಫೀಸರ ಮನೆಯವರು ; ಆದರಿಂದ ಯಾರಿಗೂ ಕಾಣದ ಹಾಗೆ ಇಲ್ಲಿಗೆ ಬರಬೇಕು. ಗಾಡಿಯಲ್ಲಿ ಎರಡು ಕಡೆಯೂ ಬುರುಕಿ ಹಾಕಿ ಗೋಷಾ ಎಂಬಂತೆ ಕುಳಿತಿದಾರೆ. ನೀವು ಅಲ್ಲೇ ಬಂದು ನೋಡಿದರೂ ಆಗಬಹುದು. ಒಂದು ಮಾತು ಮಾತ್ರ ಈಗಲೇ ಹೇಳಿರುತ್ತೇನೆ. ಅವರ ಹತ್ತಿರ ಚೌಕಾಸಿ ಮಾತ್ರ ಮಾಡಕೂಡದು. ಸಾವಿರ ರೂಪಾಯಿ ಕೊಟ್ಟರೂ ಮನೆಬಿಟ್ಟು ಹೊರಕ್ಕೆ ಬರುವವರಲ್ಲ; ಅಂಥವರನ್ನು ನಿಮಗಾಗಿ ಪುಸಲಾಯಿಸಿ ತಂದಿದೇನೆ. ಒಂದು ನೂರು ರೂಪಾಯಿಗಳಿಗೆ ಒಂದು ಕಾಸು ಕಡಮೆ ಕೊಟ್ಟರೂ ಅವರು ಮುಟ್ಟುವುದಿಲ್ಲ.'

'ಅಷ್ಟೇತಾನೆ ?'

'ಅದರ ಮೇಲೆ ಸಂತೋಷದಿಂದ ನಮ್ಮ ಭಕ್ಷೀಸ್........'

'ಅದು ಇದ್ದೇ ಇದೆಯಲ್ಲ.'

'ಈಗ ಅವರನ್ನು ಇಲ್ಲಿಗೆ ಕರೆತರಲೆ ?'

'ಅದೇ ಉತ್ತಮವೆಂದು ಕಾಣುತ್ತೆ.'

ತಾನೇ ಕೆಳಗಿಳಿದು ಹೋಗಲು ಸ್ವಾಮಿಯ ಕಾಲುಗಳು ನಡುಗುತ್ತಿದ್ದವು.

'ಮತ್ತೆ, ಅವರಿಗೆ ಕೊಡಬೇಕಾದ ಹಣ ಕೊಟ್ಟರೆ, ಕರೆತಂದು ಬಿಡುತೀನಿ.'

'ಈಗಲೇ ಕೊಡಬೇಕೆ ? ಇಲ್ಲಿಗೆ ಬರಲಿ.'

'ಹೆಂಗಸರ ವಿಷಯ, ಅನುಮಾನ ಪಡುತಾರೆ. ಅಲ್ಲದೆ ಇದೇ ಹೊಸದು ನೋಡಿ ; ಅದರಿಂದ ಬಂದಮೇಲೆ ಹೇಗೋ ಏನೋ ಅಂತ ಸಂದೇಹ.'

'ಒಂದುವೇಳೆ........'

ಎಂದು ಸ್ವಾಮಿ ಸ್ವಲ್ಪ ಎಳೆದು ಮಾತನಾಡಿದ.

'ತಾವೇನೂ ಯೋಚನೆ ಮಾಡಬೇಡಿ. ತಮಗೆ ಒಪ್ಪಿಗೆ ಆಗಲಿಲ್ಲ ಅಂದರೆ ಅದನ್ನು ನಾನು ವಾಪಸು ಕೊಡಿಸಿಬಿಡುತೀನಿ.'

ಸ್ವಾಮಿಯು ಪಾಕೆಟ್ಟಿನೊಳಗಿಂದ ಒಂದುನೂರು ರೂಪಾಯಿಗಳ ಒಂದು ನೋಟನ್ನು ತೆಗೆದುಕೊಟ್ಟ.

'ಬೀಡೀಗೆ ಏನಾದರೂ ಚಿಲ್ಲರೆ ಕಾಸಿದ್ದರೆ ಅಪ್ಪಣೆ ಆಗಬೇಕು.'

ಚಿಲ್ಲರೆ ಕಾಸೆಂದು ಎರಡು ರೂಪಾಯಿನ ಒಂದು ನೋಟನ್ನೂ ಕೊಟ್ಟು ದಾಯಿತು.

ಮುತ್ತುವು ಮಹಡಿಯ ಬಳಿಗೆ ಹೋದ. ಸ್ವಾಮಿಯು ಕುತೂಹಲ ದಿಂದ ಅತ್ತಕಡೆಯೇ ನೋಡುತ್ತಿದ್ದ. ಗಾಡಿಯಬಳಿ ಅವನು ನಿಂತು ಬುರುಕಿಯನ್ನು ಓರೆ ಮಾಡುತ್ತಿದ್ದಹಾಗೆ ಕಂಡಿತು. ಆ ವೇಳೆಗೆ ಯಾರೋ ಒಬ್ಬರು ಬಂದು ಮುತ್ತುವನ್ನು ಮಾತನಾಡಿಸಿದ ಹಾಗೆ ಅವರವರು ಎರಡು ನಿಮಿಷ ಮಾತನಾಡಿದ ಮೇಲೆ ಬಂದವರು ಹೊರಟು ಹೋದಂತೆ, ಮುತ್ತುವು ಮತ್ತೆ ಗಾಡಿಯಲ್ಲಿದ್ದವರೊಡನೆ ಏನೋ ಮಾತನಾಡಿದಂತೆ ಕಂಡಿತು. ಅನಂತರ ಮುತ್ತುವೊಬ್ಬನೇ ಹಿಂತಿರುಗಿಬಂದ. ನಿರಾಶನಾದ ಸ್ವಾಮಿಯು ಅವನನ್ನು ಕಂಡು

'ಏಕೆ, ಬರಲಿಲ್ಲವೇ ?' ಎಂದ.

'ಅವರು ಇಲ್ಲಿಗೆ ಬರುವುದಕ್ಕೆ ಹೆದರುತ್ತಾರೆ. ಇದು ಹೋಟಲಾದ್ದರಿಂದ ಯಾರಾದರೂ ಕಂಡಾರೆಂಬ ಹೆದರಿಕೆ. ನೀವು ಟ್ರಾವೆಲರ್ಸ್ ಬಂಗಲೆಯಲ್ಲಿದೀ

ರೆಂದು ಹೇಳಿ ಅವರನ್ನು ಕರೆತಂದಿದ್ದೆ. ಇಲ್ಲಿಗೆಂದರೆ ಅವರು ಬರುತ್ತಲೇ ಇರಲಿಲ್ಲ. ಈಗ ಹೇಗೆ ಮಾಡೋಣ?'

ಸ್ವಾಮಿಗೆ ಹೊಸದೊಂದು ಸಮಸ್ಯೆ ಹುಟ್ಟಿದಹಾಗಾಯಿತು. ತನ್ನ ನಿರೀಕ್ಷೆಯಲ್ಲಿದ್ದ ಸುಖವು ದೂರದೂರ ಸರಿಯುವಂತೆ ತನ್ನೊಡನೆ ಕಣ್ಣು ಮುಚ್ಚಾಲೆಯನ್ನಾಡುತ್ತಿರುವಂತೆ ತೋರಿತು. ಅದು ಆ ರೀತಿ ಆಡಿದಷ್ಟೂ ಅದನ್ನು ಪಡೆಯಲೇಬೇಕೆಂಬ ಚಪಲ ಹೆಚ್ಚುತ್ತಿತ್ತು. ಇಂಥ ತರುಣ ವಿಹಾರಿಗಳ ಮಾನಸಿಕ ವ್ಯಾಪಾರವನ್ನು ಚೆನ್ನಾಗಿ ಅರಿತಿದ್ದ ಮುತ್ತುವು ತನ್ನ ಪ್ರಯೋಜನಕ್ಕಾಗಿ ಅದನ್ನು ಉಪಯೋಗಿಸಿಕೊಳ್ಳುವ ಸಮಯ ಸನ್ನಿವೇಶ ಗಳನ್ನು ಸಾರ್ಥಕಗೊಳಿಸುತ್ತಿದ್ದ. ಪೀಠಿಕೆ ಹಾಕಿದ್ದ ಸಮಸ್ಯೆಯನ್ನು ಬಲ ಗೊಳಿಸುತ್ತ

'ಅಲ್ಲಿ—ಗಾಡಿ ಹತ್ತಿರ—ಎಂಥ ಕೆಲಸವಾಯಿತು ಅಂತೀರಿ ಸ್ವಾಮಿಗಳೆ? ಇನ್ನೆರಡು ನಿಮಿಷ ಮುಂದಾಗಿ ಅವರು ಗಾಡಿಯಿಂದ ಇಳಿದುಬಿಟ್ಟದ್ದರೆ ಕೆಲಸ ಕೆಡುತಿತ್ತು; ಅವರ ತಂದೆಯವರ ಗುಮಾಸ್ತೆ ಹೇಳಿ ಕಳಿಸಿದಹಾಗೆ ಬಂದು ಬಿಡೋಣವೆ! ದೇವರ ದಯದಿಂದ ನಾನೊಬ್ಬನೇ ನಿಂತಿದ್ದೆ. ಅಲ್ಲಿಗೂ ಆ ಪುಣ್ಯಾತ್ಮ ನನ್ನನ್ನ ಮಾತಾಡಿಸಿಯೇಬಿಟ್ಟ. ಅವನು ಬಂದದ್ದನ್ನು ಕಂಡ ಮೇಲಂತೂ ಅಮ್ಮಾವರು ಬಹಳ ಹೆದರಿಬಿಟ್ಟರು. ಮರ್ಯಾದಸ್ಥರ ಮಾತು, ನೋಡಿ.'

'ಈಗೇನು ಮಾಡುವುದು, ಮುತ್ತು ?'

'ಎಲ್ಲಾದರೂ ಟಿ. ಬಿ. ಕಡೆ ಆಗೊಲ್ಲವೆ ?'

ಟಿ. ಬಿ. ಕಡೆ? ಸ್ವಾಮಿಗೆ ಧೈರ್ಯವಾಗಲಿಲ್ಲ. ಇಷ್ಟು ಹೊತ್ತಿನಲ್ಲಿ ಟಿ. ಬಿ. ಗೆ ಹೋದರೆ ಅಲ್ಲಿಯವರಿಗೆ ಸಂದೇಹ ಬರುತ್ತದೆ.

ಸ್ವಾಮಿ ಸುಮ್ಮನಿರುವುದನ್ನು ಕಂಡು ಮುತ್ತು ತನ್ನ ತಂತ್ರವನ್ನು ತೆಗೆದ.

'ಏನು ಸ್ವಾಮಿಗಳೆ, ಹೊತ್ತಾಗುತಬಂತು. ಅಲ್ಲಿ ಗಾಡಿಯಲ್ಲಿ ಅವರು ಸುಮ್ಮನೆ ಕಾದಿದಾರೆ, ಹೊತ್ತಾದರೆ ಮನೆಯಲ್ಲಿ ಜವಾಬು ಹೇಳುವುದು ಕಷ್ಟ ವಾಗುತ್ತೆ.'

'ನಾನೇನು ಹೇಳಲಿ ಮುತ್ತೂ; ನನಗೆ ಈ ಊರೇ ಹೊಸದು, ನೀನೇ ಏನಾದರೂ ಆಲೋಚನೆ ಮಾಡಬೇಕು.'

'ನಾನೇನು ಹೇಳಲಿ ಸ್ವಾಮಿ, ಏನೋ ಸಬಬು ಹೇಳಿ ತಟಾಯಿಸುತ್ತ ಇದ್ದೀನೀಂತ ನೀವು ತಿಳಕೊಳ್ಳೋದಾದರೆ ಕೆಳಗಡೆ ಬನ್ನಿ, ನಿಮಗೂ ಅವರಿಗೂ ಭೇಟಿ ಮಾಡಿಸಿಬಿಡುತೀನಿ. ನಿಮಗೆ ಇಷ್ಟಬಂದ ಏರ್ಪಾಡು ಮಾಡಿಕೊಳ್ಳಿ.'

ಮುತ್ತುವು ಧೈರ್ಯವಾಗಿ ಹೇಳಿದ, ಏಕೆಂದರೆ ಸ್ವಾಮಿಯು ಅಷ್ಟೇ ಧೈರ್ಯವಾಗಿ ಮಹಡಿಯಿಳಿದುಬಂದು ಗಾಡಿಯಲ್ಲಿರುವವರನ್ನು ನೋಡುವುದಿಲ್ಲವೆಂಬ ನಂಬಿಕೆ ಅವನಿಗಿತ್ತು. ಬರಿಯ ಗಾಡಿ ನಿಲ್ಲಿಸಿರುವ ಮುತ್ತುವಿಗೆ ಅಷ್ಟು ಭರವಸೆ ಇಲ್ಲವೆ? ಮುತ್ತುವು ತನ್ನ ಮೇಲೆ ಅಸಮಾಧಾನಗೊಂಡಾನೆಂಬ ಶಂಕೆಯಿಂದ ಸ್ವಾಮಿಯು

'ಇದೇಕೆ ಮುತ್ತು ಹೀಗೆ ಹೇಳುತೀ? ನಾನೇನೂ ಬೇರೆಯಾಗಿ ತಿಳಿದುಕೊಳ್ಳುವವನಲ್ಲ; ಏನು ಮಾಡಬೇಕೆಂದು ನೀನು ಯೋಚಿಸಿದೀಯೋ ಹೇಳು.'

'ಹೇಳಲೊ?'

'ಹೇಳಿ, ಏನೂ ಸಂದೇಹಪಡಬೇಡ.'

'ಟಿ. ಬಿ. ಯಲ್ಲಿ ಈ ದಿನ ಇರುವುದಕ್ಕೆ ನಿಮಗೆ ಇಷ್ಟವಿದ್ದರೆ ಈಗಲೇ ನಡೀರಿ, ಇಲ್ಲವಾದರೆ ಈ ದಿನ ಯಾವ ಏರ್ಪಾಡೂ ಬೇಡ. ನಾಳೆಯ ದಿನ ಯಾರ ಕಣ್ಣಿಗೂ ಬೀಳದೆ ಇರುವಹಾಗೆ ನಾನು ಒಂದು ಮನೆಯಲ್ಲಿ ಏರ್ಪಾಡು ಮಾಡಿ ಕೊಡುತೇನೆ. ಇವತ್ತು ಬೇಡವೇಬೇಡ. ಏನು ಹೇಳುತೀರಿ?'

'ಅವರು............'

'ಅವರ ವಿಷಯ ನನಗಿರಲಿ. ಇವತ್ತಲ್ಲದಿದ್ದರೆ ನಾಳೆ ಆಗುತ್ತೆ.'

'ನಿನ್ನಿಷ್ಟ; ಹಾಗೇ ಮಾಡು.'

ಮುತ್ತುವು ತಲೆ ಕೆರೆದುಕೊಳ್ಳುತ್ತ ನಿಂತ. ಅವನು ತಲೆ ಕೆರೆದುಕೊಳ್ಳುತ್ತಾನೆಂದರೆ ಹಣಕ್ಕೆ ತಗಾದೆಯೆಂಬ ಅನುಭವ ಇನ್ನೂ ಸಾಕಷ್ಟು ಆಗಿಲ್ಲದ ಸ್ವಾಮಿಯು

'ಇನ್ನೇನು?' ಎಂದು ಕೇಳಿದ.

'ಏನೂ ಇಲ್ಲ. ಗಾಡಿ ಬಾಡಿಗೆ ಕೊಡಬೇಕಾಗಿತ್ತು; ಹಾಗೇ ಕಾಫಿ ಖರ್ಚಿಗೆ.........,'

'ಸಾಯಂಕಾಲ ಕೊಟ್ಟದ್ದು........'

'ಅದು ಅಲ್ಲಿ ಇಲ್ಲಿ ಸುತ್ತಾಡುವುದಕ್ಕೇ ಸಾಲಲಿಲ್ಲ.'

ಸ್ವಾಮಿಯು ಐದು ರೂಪಾಯಿನ ಒಂದು ನೋಟನ್ನು ತೆಗೆದುಕೊಟ್ಟ. ಮುತ್ತುವಿಗೆ ತೃಪ್ತಿಯಾದಂತೆ ಕಾಣಲಿಲ್ಲ.

'ಇವತ್ತೆಲ್ಲಾ ಒಂದು ಕಾಸು ಸಂಪಾದಿಸಿದ್ದರೆ ನಿಮ್ಮ ಪಾದದಾಣೆ. ಮನೆಯಲ್ಲಿ ಏನೂ ಇಲ್ಲ.'

ಸ್ವಾಮಿಯು ಇನ್ನೊಂದು ನೋಟನ್ನು ಕೊಟ್ಟು 'ಸಾಕೆ' ಎಂದ. ಮುತ್ತುವು ನಮಸ್ಕರಿಸಿ ಮರುದಿನ ಸಂಜೆ ತನ್ನೊಡನೆ ಬರಲು ಸಿದ್ಧರಿರ ಬೇಕೆಂದು ಹೇಳಿ ಅಲ್ಲಿಂದ ಹೊರಟ.

ಮೂರನೆಯ ದಿನ ಸ್ವಾಮಿಯು ಗಣಿ ಪ್ರದೇಶವನ್ನು ನೋಡುವುದ ಕ್ಕೆಂದು ಹೋಗಿ ನಟೇಶನ ಮನೆಯನ್ನು ಗುರುತಿಸಿದ. ಒಳಗೆ ಹೋಗಲು ಧೈರ್ಯವಾಗಲಿಲ್ಲ; ಗೌರಮ್ಮನಿಗೆ ವಸಂತಾದೇವಿಯು ಬರೆದಿದ್ದ ಕಾಗದದ ನೆನಪಾಯಿತು. ಮನೆಯು ಎಲ್ಲಿದೆ ಎಂದು ಕಂಡುದಾಯಿತು. ಮುಂದಿನ ಕಾರ್ಯಕ್ರಮವನ್ನು ಆಲೋಚಿಸೋಣವೆಂದು ಹೋಟಲಿಗೆ ಹಿಂತಿರುಗಿಬಂದು ಊಟಮಾಡಿ ಮಲಗಿದ. ಮಧ್ಯಾಹ್ನದ ನಿದ್ದೆ ಮುಗಿಸಿ ಎದ್ದವನಿಗೆ ಅಂದಿನ ಸಂಜೆಯ ಯೋಚನೆ ತಲೆಗೆ ಹತ್ತಿತು. ಆ ಯೋಚನೆಯಲ್ಲಿ ಬೇರೆಲ್ಲಿಗೂ ಹೋಗದೆ ವರ್ತಮಾನ ಪತ್ರವನ್ನು ತಿರುವಿಹಾಕುತ್ತ ಕೋಣೆಯಲ್ಲೇ ಕಾಲ ಕಳೆದ.

ಮಾತು ಕೊಟ್ಟಿದ್ದಂತೆ ಮುತ್ತುಕಣ್ಣನು ಸಂಜೆ ಸ್ವಾಮಿಯ ಬಳಿಗೆ ಬಂದ. ಸ್ವಾಮಿಗಿನ್ನೂ ಊಟವಾಗಿರಲಿಲ್ಲ. ಮುತ್ತುವು ತಪ್ಪಿಸಿಕೊಳ್ಳದೆ ಬಂದನೆಂದು ಹರ್ಷಿತನಾದ ಸ್ವಾಮಿಯು ಅವನಿಗೂ ಊಟವನ್ನು ತರಿಸಿ ಅಲ್ಲೇ ಇಬ್ಬರೂ ಊಟಮಾಡಿ ಎಂಟು ಗಂಟೆ ಕಳೆದ ಸ್ವಲ್ಪ ಹೊತ್ತಿನಲ್ಲಿ ಕೋಣೆಯನ್ನು ಬಿಟ್ಟರು. ಸೂಟು ಬೂಟುಗಳನ್ನು ಬಿಟ್ಟು ತೆಳ್ಳನೆಯದೊಂದು ಪಟ್ಟೆಯುಟ್ಟು ಪರಟು ಕೋಟು ಹಾಕಿಕೊಂಡು ಸ್ವಾಮಿಯು ಮುತ್ತುವನ್ನು ಹಿಂಬಾಲಿಸಿದ.

ದೊಡ್ಡ ರಸ್ತೆಗಳನ್ನು ಬಿಟ್ಟು ಮುತ್ತುವು ಸ್ವಾಮಿಯನ್ನು ಓಣಿಗಳೊಳಗೆ ಕರೆದೊಯ್ದ. ಇಕ್ಕಟ್ಟಾದ ಸ್ಥಳ, ನೆಲ ಮಟ್ಟವಾಗಿಲ್ಲದುದರಿಂದ ಅಲ್ಲಲ್ಲಿ ಎಡವರಿಸುವಂತಾಯಿತು. ಸಾಲದುದಕ್ಕೆ ಬೀದಿಯ ದೀಪಗಳು ಎಲ್ಲೋ ದೂರ ದೂರದಲ್ಲಿ ಒಂದೊಂದು ಬೇಕೋ ಬೇಡವೋ ಎನ್ನುವಂತೆ ಉರಿಯು ತ್ತಿದ್ದುವು. ಅಲ್ಲಿ ಸಮೃದ್ಧಿಯಾಗಿದ್ದುದೆಂದರೆ ದುರ್ನಾತವೊಂದೇ. ಇದೆಲ್ಲ ವನ್ನೂ ಸದ್ದಿಲ್ಲದೆ ಸಹಿಸಿಕೊಂಡು ಸ್ವಾಮಿಯು ಅವನ ಹಿಂದೆ ಹೋಗುತ್ತಿದ್ದ. ನಾಲ್ಕಾರು ಸಂದಿಗಳನ್ನು ದಾಟಿದಮೇಲೆ ಒಂದುಕಡೆ ಸ್ವಾಮಿಯನ್ನು ನಿಂತಿರಲು ಹೇಳಿ, ಮುತ್ತುವು ಸ್ವಲ್ಪ ದೂರ ಹೋಗಿ ಯಾವುದೋ ಮನೆಯೊಳಗೆ ಹೋಗಿ ಬಂದು

'ಎಲ್ಲಾ ಸಿದ್ಧವಾಗಿದೆ; ನೀವು ಬರುವುದನ್ನೇ ಕಾದಿದಾರೆ' ಎಂದ.

ಸ್ವಾಮಿಯು ಹೃದಯದಲ್ಲಿ ಹರಿಯುತ್ತಿದ್ದ ರಕ್ತವು ಇದ್ದಕ್ಕಿದ್ದಂತೆ ತಣ್ಣಗಾದಂತಾಯಿತು ; ಕಾಲುಗಳು ನಡುಗತೊಡಗಿದವು ; ಗಂಟಲು ಒಣಗಿತ್ತು. ಇವನ ಕಷ್ಟವನ್ನರಿಯದೆ ಮುತ್ತುವು ಅವಸರಪಡಿಸುತ್ತಿದ್ದ. ತನ್ನ ದೌರ್ಬಲ್ಯವು ಅವನಿಗೆ ತಿಳಿಯಬಾರದೆಂಬ ಸಂಕಲ್ಪವು ಸ್ವಾಮಿಯನ್ನು ಮುಂದಕ್ಕೆ ಮುಂದಕ್ಕೆ ತಳ್ಳಿ ಆ ಮನೆಯ ಬಾಗಿಲಿಗೆ ತಂದುಬಿಟ್ಟಿತು.

ಮನೆ ಅಲ್ಲಿನ ಆವರಣಕ್ಕೆ ಹೊಂದಿಕೊಳ್ಳುವಂತೆ ಕೊಳಕಿನ ತೌರುಮನೆ ಯಾಗಿತ್ತು. ಸಗಣಿಯನಲ್ಲ, ತಡಿಕೆಗೆ ಮಣ್ಣುಮೆತ್ತಿ ನಿಲ್ಲಿಸಿದ ಗೋಡೆಗಳು ನಾಡಹೆಂಚಿನ ಮೇಲು ಹೊದಿಕೆ. ತಗಣೆಗಳನ್ನು ಒರೆದ ಚಿತ್ತಾರಗಳು ಎಂದೋ ಸುಣ್ಣ ಕಂಡಿದ್ದ ಗೋಡೆಗಳನ್ನು ಅಲಂಕರಿಸಿದ್ದುವು. ಅಲ್ಲೊಂದು ಇಲ್ಲೊಂದು ಜಪಾನೀ ಅರೆನಗ್ನ ಚಿತ್ರಗಳು ನಡುಮನೆಯಲ್ಲಿ ವಿಸ್ತರಿಸಿದ್ದ ಶೂನ್ಯತೆಯನ್ನು ಅಷ್ಟಿಷ್ಟು ಕಳೆದಿದ್ದುವು. ಒಂದು ಹಳೆಯ-ಮರದ-ಮಂಚ, ಎರಡು ಅರೆಜೀವದಲ್ಲಿದ್ದ ಕುರ್ಚಿಗಳು ನಡುಮನೆಯ ಒಂದು ಭಾಗ ದಲ್ಲಿ ಬಂದವರನ್ನು ಸ್ವಾಗತಿಸುತ್ತಿದ್ದುವು. ಅವಕ್ಕೆ ಅಭಿಮುಖವಾಗಿದ್ದ ಒಂದು ಕೊಟಡಿಯ ಬಾಗಿಲು ಸ್ವಲ್ಪ ಓರೆಯಾಗಿ ತೆರೆದು ಒಳಗೆ ಬೆಳಕಿದ್ದ ಹಾಗೆ ಕಾಣುತ್ತಿತ್ತು.

ಸ್ವಾಮಿಯು ಬಾಗಿಲಬಳಿ ನಿಂತುಬಿಟ್ಟುದನ್ನು ಕಂಡು ಮುತ್ತುವು

'ಒಳಕ್ಕೆ ಬನ್ನಿ ಸ್ವಾಮಿಗಳೆ, ಬೇರೆ ಯಾರೂ ಇಲ್ಲ. ನಿಮ್ಮ ಕೆಲಸ

ಕ್ಕಾಗಿ ಮನೆಯವರನ್ನು ಬೇರೆಕಡೆ ಕಳಿಸಿಬಿಟ್ಟಿದೇನೆ. ಬನ್ನಿ ಒಳಗೆ' ಎಂದು ಗೋಡೆಗೆ ಹಾಕಿದ್ದ ಚಿಮಣಿ ಎಣ್ಣೆ ದೀಪವನ್ನು ಸ್ವಲ್ಪ ದೊಡ್ಡದು ಮಾಡುತ್ತ ಹೇಳಿದ. ಮನೆಯೊಳಗಿನ ಒಂದು ತೆರೆದ ದುಸ್ಸಹವಾದ ಕಂಪು ಸ್ವಾಮಿಯನ್ನು ಹೊರಕ್ಕೆ ತಳ್ಳುತ್ತಿತ್ತು; ಅವನಲ್ಲಿ ಉತ್ಸಾಹವನ್ನುಂಟುಮಾಡಿ ಇಲ್ಲಿಯವರೆಗೆ ಕರೆತಂದ ಚಾಪಲ್ಯ ಅವನನ್ನು ಒಳಕ್ಕೆ ಎಳೆಯುತ್ತಿತ್ತು. ಆ ಎಳೆತದ ಶಕ್ತಿಯಿಂದ ಅವನು ಒಳಕ್ಕೆ ಬಂದು ಕುಳಿತ.

ಕುಳಿತವನ ದೃಷ್ಟಿ ಅತ್ತಿತ್ತ ಹರಿಯುತ್ತಿತ್ತು; ಉದ್ದಿಷ್ಟ ರೂಪಸಿಯ ದರ್ಶನಕ್ಕಾಗಿ ಕಣ್ಣು ತವಕ ಪಡುತ್ತಿತ್ತು. ಅದನ್ನು ಬಲ್ಲ ಮುತ್ತು

'ಇನ್ನು ಎರಡು ನಿಮಿಷ ಸಾರ್, ಬಂದುಬಿಡುತಾರೆ.........ಏನಾದರೂ ಹೂವಿಗೆ ಅಪ್ಪಣೆ ಮಾಡಿದ್ದರೆ ತಂದುಬಿಡುತ್ತಿದ್ದೆ.........ಹಾಗೇನೆ ಸ್ವಲ್ಪ ಕಾಫೀನೂ.........ಈಗ ಬಂದುಬಿಡುತೀನಿ. ತಾವು ಧೈರ್ಯವಾಗಿ ಇಲ್ಲೇ ಕೂತಿರಿ' ಎಂದು ಎರಡು ರೂಪಾಯಿಗಳ ನೋಟುಗಳನ್ನು ಅಂಗಿಯ ಜೇಬಿನೊಳಕ್ಕೆ ಸೇರಿಸಿಕೊಳ್ಳುತ್ತ ಬಾಗಿಲನ್ನು ಮುಂದಕ್ಕೆ ಹಾಕಿಕೊಂಡು ಹೊರಬಿದ್ದ.

ಮುತ್ತುವು ಹಿಂತಿರುಗಲು ತೆಗೆದುಕೊಂಡ ಆ ಎರಡು ನಿಮಿಷವೆನ್ನುವುದು ಸ್ವಾಮಿಗೆ ಎರಡು ವರ್ಷವಾಗಿ ತೋರಿತು. ಅದೇನು ತಂದನೋ ಎಲ್ಲಿ ತಂದನೋ ಅಥವಾ ಏನೂ ತರಲೇ ಇಲ್ಲವೋ ಅಂತೂ ಹಿಂತಿರುಗಿದವನು ಎದುರಿಗಿದ್ದ ಕೋಣೆಯೊಳಕ್ಕೆ ಹೋಗಿ ನಾಲ್ಕು ಪಿಸುಮಾತಾಡಿ ಬಂದು ಸ್ವಾಮಿಯನ್ನು ಅಲ್ಲಿಗೆ ಕಳುಹಿಸಿದ.

ತನಗಾಗಿ ಕಾದಿರುವಳೆಂಬ ಅಪ್ಸರೆಯ ಬಣ್ಣನೆಯನ್ನು ಕೇಳಿ ಅವಳ ರೂಪರೇಖೆಯನ್ನು ಹೃದಯದಲ್ಲಿ ಕಲ್ಪಿಸಿಕೊಂಡಿದ್ದ ಸ್ವಾಮಿಯ ಬಯಕೆ ಮೊದಲೆ ಬಯಲಾಯಿತು. ತಾನು ಇದುವರೆಗೆ ಕಂಡಿರದ ಸೌಂದರ್ಯ ರಾಶಿಯ ಮುಂದೆ ತಾನು ಹೇಗೆ ನಡೆದುಕೊಳ್ಳಬೇಕು, ಹೇಗೆ ಮಾತನಾಡಬೇಕು ಎಂದು ಇಪ್ಪತ್ತನಾಲ್ಕು ಗಂಟೆಗಳಕಾಲ ಅಭ್ಯಾಸ ಮಾಡಿದ್ದ ಪಾಠ ಅವಳ ಮುಖವನ್ನು ನೋಡಿ ಉಂಟಾದ ನಿರಾಸೆಯಿಂದ ಮರೆತುಹೋಯಿತು. ಒಳಗೆ ಸಹಜವಾಗಿ ಹುಟ್ಟಿದ್ದ ಅಳುಕಿನೊಡನೆ ಈ ಅನಿರೀಕ್ಷಿತವಾದ ನಿರಾಸೆಯೂ ಬೆರೆತು ಅವನನ್ನು ಮೂಕನನ್ನಾಗಿ ಮಾಡಿತು. ಅಂಥ ಅನುಭವವನ್ನು ಸಾಕಷ್ಟು ಪಡೆದಿದ್ದ ಅವಳು ಆ ಮೌನವನ್ನೊಡೆದು ಕೇಳಿದಳು

'ಏಕೆ ? ಮಾತಾಡೋಕೆ ಬರಲ್ಲವೆ ?'

'ಬರುತ್ತೆ.'

'ಮತ್ತೆ ಸುಮ್ಮಿದ್ದೀರಲ್ಲ ?'

'ಏನು ಮಾತಾಡಬೇಕೆಂದು ಗೊತ್ತಿಲ್ಲ.'

ಸ್ವಾಮಿಯು ಸ್ವಲ್ಪ ಧೈರ್ಯವಾಗಿಯೇ ಉತ್ತರ ಕೊಟ್ಟಿದ್ದ ; ಅವಳು ಆಡಿದ್ದ ಆ ಎರಡು ಮಾತು ಜೀವನದಲ್ಲಿ ಅವಳ ಅಂತಸ್ತನ್ನು ತೋರಿಸಿತ್ತು.

ಮಾತುಕತೆ ಮುಂದುವರಿಯಿತು ; ಸ್ವಾಮಿಯು ಮುಳ್ಳು ಮೇಲೆ ಕುಳಿತವನಂತೆ ಇದ್ದ. ಎದ್ದು ಹೊರಟುಬಿಡಬೇಕೆನಿಸುತ್ತಿತ್ತು ; ಆದರೆ ಹಾಗೆ ಮಾಡುವ ಧೈರ್ಯವಿರಲಿಲ್ಲ. ಬಂದುದಾಯಿತು, ಅನುಭವಿಸೋಣ ಎಂಬ ಉದಾಸೀನತೆಯೊಂದುಕಡೆ ; ಅಷ್ಟೊಂದು ಹಣವನ್ನು ವೃಥಾ ವೆಚ್ಚಮಾಡಿದೆ ನಲ್ಲಾ ಎಂಬ ವ್ಯಥೆಯೊಂದುಕಡೆ ; ಮೊದಲ ಅನುಭವ, ಮನಸಿಗೆ ತಕ್ಕಷ್ಟು ತೃಪ್ತಿಯಿಲ್ಲದಿದ್ದರೂ ಒಂದು ರೀತಿ ಅದೂ ಅನುಭವವೇ ತಾನೇ ಎಂಬ ಸಮಾಧಾನವೊಂದುಕಡೆ ; ಹೀಗಾಗಿ ಅವನು ಅಲ್ಲಿಯೇ ಉಳಿದಿದ್ದ.

ಸ್ವಾಮಿಯ ಕೋಣೆಯೊಳಕ್ಕೆ ಹೋದ ಸ್ವಲ್ಪ ಹೊತ್ತಿನಲ್ಲಿ ನಡುಮನೆಯಲ್ಲಿ ಯಾರೋ ಇಬ್ಬರು ಮೂವರು ಜಗಳವಾಡುತ್ತಿರುವಂತೆ ಕೇಳಿಸಿತು ; ಮಾತುಗಳು ತಕ್ಕಷ್ಟು ಬಿರುಸಾಗಿಯೇ ಇದ್ದುವು. ಸ್ವಾಮಿಗೆ ಎದೆ ಹೊಡೆದು ಕೊಳ್ಳಲಾರಂಭವಾಯಿತು. ಪಕ್ಕದಲ್ಲಿ ಮಲಗಿದ್ದ ಆ ಹೆಂಗಸನ್ನು 'ಅದೇನು ಗಲಾಟೆ ಹೊರಗೆ' ಎಂದು ಕೇಳಿದ. ಅವಳು ಗಟ್ಟಿಯಾಗಿ ಮಾತಾಡಬೇಡಿರೆಂದು ಎಚ್ಚರಿಕೆ ಕೊಟ್ಟು 'ಯಾರೋ ಪೋಲೀಸಿನವರು ಬಂದಿದಾರೆ ; ನಮಗೆ ಅವರದೊಂದು ಹಾವಳಿ' ಎಂದಳು. ಸ್ವಾಮಿಗೆ ಜೀವವೇ ಹಾರಿಹೋಯಿತು. ಪೋಲೀಸಿನವರೆ ! ತಾನು ಇಲ್ಲಿರುವುದನ್ನು ಕಂಡು ಠಾಣೆಗೆ ಕರೆದೊಯ್ದರೆ ? ಇದು ಯಾರದೋ ಮರ್ಯಾದಸ್ಥರ ಮನೆಯೆಂದು ಮುತ್ತುವು ಕರೆತಂದನಲ್ಲ ? ಮರ್ಯಾದಸ್ಥರ ಮನೆಯಾಗಿದ್ದರೆ ಪೋಲೀಸಿನವರೇಕೆ ಬರುತ್ತಾರೆ. ಒಂದು ಗಳಿಗೆಯಲ್ಲಿ ಸ್ವಾಮಿಗೆ ನೂರಾರು ಯೋಚನೆಗಳು ಹೊಳೆದು ಹೋದವು.

ಜಗಳ ಸ್ವಲ್ಪ ನಿಂತಂತಾಯಿತು ; ಜನರು ಹೊರಕ್ಕೆ ಹೋದ ಸದ್ದು ; ಮುತ್ತುವು ಅವರನ್ನು ಸಾಗಹಾಕಿ ಒಳಕ್ಕೆಬಂದು ಕೆಮ್ಮಿದಧ್ವನಿ. ಸ್ವಾಮಿಯು

ಇದೇ ಸಮಯವೆಂದು ಮೇಲಕ್ಕೆದ್ದ ; ಜೊತೆಯಲ್ಲಿದ್ದವಳೂ ಎದ್ದು 'ಯಾಕೆ ಎದ್ದಿರಿ' ಎಂದಳು.

'ನಾನು ಹೋಟಲಿಗೆ ಹೋಗುತ್ತೇನೆ. ಎಲ್ಲಿದೆ ನನ್ನ ಕೋಟು ?'

ಕತ್ತಲೆಯಲ್ಲಿ ಅದು ಎಲ್ಲಿದೆಯೆಂದು ಅವನಿಗೆ ತಿಳಿಯಲಿಲ್ಲ.

'ತಡೀರಿ, ಕೊಡುತೀನ್ನಿ! '

ಸ್ವಾಮಿಯು ಕೋಟನ್ನು ಹಾಕಿಕೊಂಡು ಸರಸರನೆ ಅಲ್ಲಿಂದ ಹೊರಬಿದ್ದ. ನಡುಮನೆಯಲ್ಲಿ ನಿಂತಿದ್ದ ಮುತ್ತುವು

'ಅಲ್ಲೀವರೆಗೂ ಬಿಟ್ಟುಬರಲಾ ಸ್ವಾಮಿಯವರೆ?' ಎಂದ.

ಯಾರೂ ಬೇಡ ಎನ್ನುತ್ತ ಸ್ವಾಮಿಯು ಬೀದಿಯನ್ನು ಸೇರಿ ಎಲ್ಲೆಲ್ಲೋ ಸುತ್ತಾಡಿಕೊಂಡು ಹತ್ತುಗಂಟೆಯ ಹೊತ್ತಿಗೆ ಹೋಟಲನ್ನು ಸೇರಿದ. ಅಲ್ಲಿಗೆ ಸ್ವಲ್ಪ ಧೈರ್ಯ ಬಂತು. ಒಂದು ಸಿಗರೇಟ್ ಪ್ಯಾಕೆಟ್ ಕೊಂಡುಕೊಳ್ಳೋಣವೆಂದು ಜೇಬಿಗೆ ಕೈಹಾಕಿದ ; ಜೇಬು ಬರಿಯದಾಗಿತ್ತು ; ಹಣದಚೀಲ ಯಾವಾಗಲೋ ಮಾಯವಾಗಿತ್ತು.

— ೨೮ —

ವಸಂತಾದೇವಿಯು ಗಂಡನ ಮನೆಗೆ ಬಂದು ಒಂದು ವಾರವಾಗಿತ್ತು. ಒಂದು ವಾರದ ಅವಳ ಸಂಸಾರವು ಯಶಸ್ವಿಯಾಗಿಯೇ ನಡೆದಿತ್ತು. ಮೊದ ಮೊದಲು ಇದ್ದ ಬೇಸರ ದಿಗಿಲು ಉದಾಸೀನತೆಗಳು ಈಗಿಲ್ಲ. ಪೇಟೆಗೆ ಹೋದಾಗ ಜನ ಇವಳನ್ನು ದುರುಗುಟ್ಟಿಕೊಂಡು ನೋಡುತ್ತಿರಲಿಲ್ಲ, ಪಿಸುಗುಟ್ಟಿ ಮಾತಾಡಿ ಇವಳ ಮನಸ್ಸನ್ನು ಕೊರೆಯುತ್ತಿರಲಿಲ್ಲ. ಕೆಲ ಕೆಲವರು–ಹೆಂಗಸರು –ಸೌಹಾರ್ದ ತೋರುತ್ತ ನಗುಮುಖ ಮಾಡುವರು. ಇನ್ನೂ ಹೆಚ್ಚು ಸಲಿಗೆ ಯಿದ್ದಂತೆ ತಿಳಿಯುತಿದ್ದವರು ಒಂದೆರಡು ಮಾತನ್ನೂ ಆಡಿಸುವರು. ಮೊದಲ ದಿನ ಇವಳನ್ನು ಕಂಡು ಸಿಡುಗಟ್ಟಿದ ಮೀನಾಕ್ಷಿ ಅಡಿಗೆ ಕೆಲಸಗಳನ್ನು ವಿಚಾರಿ ಸುವ ಹದಕ್ಕೆ ಬಂದಿದ್ದಳು ; ಅವಳ ಮಗು ಈಗಲೂ ಹತ್ತಿರಕ್ಕೆ ಬರುತ್ತಿರಲಿಲ್ಲ, ಆದರೆ ಇವಳು ಮಾತನಾಡಿಸಿದರೆ ನಗುತ್ತಿತ್ತು. ಏನಾದರೂ ಕೊಟ್ಟರೆ ತೆಗೆದು ಕೊಳ್ಳಲೋ ಬೇಡವೋ ಎಂದು ಸಂದೇಹದಿಂದಾದರೂ ಕೈ ಚಾಚುತ್ತಿತ್ತು.

ಮನೆಯ ಕೆಲಸಗಳು ಈಗ ಅವಳಿಗೆ ಅಷ್ಟು ಕಠಿಣವಾಗಿ ತೋರುತ್ತಿರ ಲಿಲ್ಲ ; ಬಟ್ಟೆಯೊಗೆದಾಗ ಮೊದಲು ತನ್ನ ಸೀರೆಯನ್ನೆಲ್ಲಾ ತೊಯ್ಸಿಕೊಂಡಂತೆ

ಈಗ ತೊಯ್ಸಿಕೊಳ್ಳುತ್ತಿರಲಿಲ್ಲ; ಮೊದಲು ದಿನ ಊಟ ಮಾಡಿದ ನೆಲವನ್ನು ಸಾರಿಸಲು ಸಗಣಿ ಮುಟ್ಟಬೇಕಾದಾಗ—ಹಾಗೇ ಸಾರಿಸಬೇಕೆಂದು ಇಂದಿರೆ ತಿಳಿಸಿದಾಗ—ಬಹುವಾಗಿ ಅಸಹ್ಯಪಟ್ಟುಕೊಂಡಿದ್ದಳು. ಯಾರೂ ಕಾಣದಂತೆ ಬಚ್ಚಲುಮನೆಗೆ ಹೋಗಿ ಸಾಬೂನು ಹಾಕಿಕೊಂಡು ಚೆನ್ನಾಗಿ ತಿಕ್ಕಿ ಕೈ ತೊಳೆದುಕೊಂಡಿದ್ದಳು. ಈಗ ಅದೇ ಸಗಣಿಯ ಸ್ಪರ್ಶವು ವಾಸನೆಯು ಒಗ್ಗಿ ಹೋಗಿತ್ತು; ಸಾಬೂನು ವೆಚ್ಚವಾಗುತ್ತಿರಲಿಲ್ಲ; ಅಡಿಗೆ ಮಾಡುವುದು ಅಗಾಧ ವಾದ ಕೆಲಸವೆಂದು ತಿಳಿದಿದ್ದವಳಿಗೆ ಅದು ಈಗ ಸಾಮಾನ್ಯವಾಗಿ ತೋರುತ್ತಿತ್ತು.

ಒಂದು ವಾರದಲ್ಲಿ ತಾನು ಎಷ್ಟು ವಿಷಯಗಳನ್ನು ಕಲಿತುಕೊಂಡಿ ದೇನೆಂಮು ವಸಂತಾದೇವಿಯು ಒಮ್ಮೊಮ್ಮೆ ಆಶ್ಚರ್ಯಪಡುವಳು. ವಿಶ ಜೀವನದಲ್ಲಿ ಒಂದು ಜನಾಂಗವು, ಒಂದು ದೇಶವು ಸುಖ ಶಾಂತಿಗಳಿಂದ ಬಾಳ ಬೇಕಾದರೆ ಅದು ಆದಷ್ಟುಮಟ್ಟಿಗೆ ಸ್ವಾವಲಂಬಿಯಾಗಿರಬೇಕು; ಅದೇ ಪ್ರಗತಿ ಸಾಧನೆಯ ಅಡಿಗಲ್ಲು; ಒಂದು ದೇಶಕ್ಕೆ ಅನ್ವಯಿಸುವ ಮಾತೇ ಆ ದೇಶದ ಅಂಗವಾದ ವ್ಯಕ್ತಿಗೂ ಅನ್ವಯಿಸುವುದಿಲ್ಲವೆ ಎಂಬುದು ಅವಳಿಗೆ ಈ ಒಂದು ವಾರದಲ್ಲಿ ಅನುಭವಕ್ಕೆ ಬಂದಿತ್ತು. ಬೆಂಗಳೂರಿನಲ್ಲಿದ್ದಾಗ ತನ್ನ ಕ್ಷೇಮವನ್ನು ಎಷ್ಟುಮಂದಿ ನೋಡಿಕೊಳ್ಳುತ್ತಿದ್ದರು! ಎದ್ದಾಗ ಮುಖ ತೊಳೆಸಬೇಕಾದರೆ ನಾಲ್ಕುಜನ. ಈಗ ಯಾರೂ ಇಲ್ಲದೆ ತನ್ನ ಕೆಲಸಗಳನ್ನು–ಅಲ್ಲದೆ ಮನೆಯವ ರೆಲ್ಲರ ಕೆಲಸಗಳನ್ನು—ತಾನೇ ಮಾಡುತ್ತಿದೇನೆ. ಆಗ ಇನ್ನೊಬ್ಬರ ಕೈಗೆ ತಾನು ಕಾಯಬೇಕಾಗಿತ್ತು, ಈಗ ತಾನು ಸ್ವತಂತ್ರಳಾಗಿದೇನೆ. ಅದು ಸುಖವೆ, ಇದು ಸುಖವೆ? ಅಲ್ಲಿನ ಜೀವನದಲ್ಲಿ ಆಡಂಬರವಿತ್ತು, ವೈಭವವಿತ್ತು, ಅಧಿಕಾರ ವಿತ್ತು; ಇಲ್ಲಿಯದು ಸರಳವಾದುದು, ಸಾಮಾನ್ಯವಾದುದು, ದರ್ಪರಹಿತ ವಾದುದು; ಅದಕ್ಕಿಂತ ಇದೇ ಹೆಚ್ಚು ಸುಖಕರವಾಗಿರುವಂತೆ ಒಮ್ಮೊಮ್ಮೆ ವಸಂತಾದೇವಿಗನಿಸುತ್ತಿತ್ತು. ತಾನಿಂದು ಸ್ವಾವಲಂಬಿ; ತನ್ನ ಸುಖವು ತನ್ನ ಕೈಯಲ್ಲಿದೆ ಎಂಬ ಸಮಾಧಾನ. ಎಂದರೆ ತಾನು ಇಲ್ಲಿಂದ ಬೆಂಗಳೂರಿಗೆ ಹಿಂತಿರುಗಿದಮೇಲೆ? ಅಲ್ಲಿರುವಾಗ ಆ ತೆರದ ಜೀವನ ಕ್ರಮವೇ ಸರಿ, ಅದನ್ನು ಬದಲಾಯಿಸಿ ಇದನ್ನು ಅಲ್ಲಿಗೆ ಹೊಂದಿಕೆ ಪಡಿಸಬಾರದು. ಇಲ್ಲಿ ತನಗಾದ ಶಿಕ್ಷಣ, ಅನುಭವ ಇವೆಲ್ಲ ಸಮಯ ಬಂದಾಗ ಉಪಯೋಗಿಸುವುದಕ್ಕೆ ಮಾತ್ರ

ಇರಬೇಕು. ಎರಡನ್ನೂ ಒಂದರೊಡನೊಂದು ಬೆರೆಸುವುದು ಅಥವಾ ಒಂದರ ಸ್ಥಾನದಲ್ಲಿ ಇನ್ನೊಂದನ್ನಿರಿಸುವುದು ಸರಿಯಲ್ಲ.

ಈ ಒಂದು ವಾರದಲ್ಲಿ ಇನ್ನು ಕೆಲವು ಸಂಗತಿಗಳೂ ನಡೆದಿದ್ದುವು. ಅನಾಥ ಪೋಷಕ ಸಂಘದವರು ಮತ್ತೆ ಬಂದು ತಮ್ಮ ಸಂಘಕ್ಕೆ ಆಕೆಯನ್ನು ಪೋಷಕಳಾಗಿರಬೇಕೆಂದು ಒತ್ತಾಯ ಪಡಿಸಿದ್ದರು. ಬಂಗಾರ ಪೇಟೆಯ ಮಹಿಳಾ ಸಮಾಜದವರು ತಮ್ಮ ಸಮಾಜಕ್ಕೆ ಆಜೀವ ಸದಸ್ಯಳಾಗಬೇಕೆಂದು ಕೇಳಿದ್ದರು. ಒಂದೆರಡು ಪಾಠಶಾಲೆಗಳವರು ಬಂದು ಮಕ್ಕಳ ಚರ್ಚಾ ಕೂಟಕ್ಕೆ ಅಧ್ಯಕ್ಷಿಣಿಯಾಗಬೇಕೆಂದು ಇಲ್ಲವೆ ಪಂದ್ಯಗಳಲ್ಲಿ ಗೆದ್ದ ಬಾಲಕಿಯರಿಗೆ ಬಹುಮಾನ ವಿನಿಯೋಗ ಮಾಡಬೇಕೆಂದು ಪ್ರಾರ್ಥಿಸಿದ್ದರು. ಇಲ್ಲಿ ಸಮಾಜದಲ್ಲಿ ತಾನೊಬ್ಬಳು ಗಣ್ಯವ್ಯಕ್ತಿಯಾಗಿದ್ದೇನೆಂಬ ನೆನವು ಪ್ರತಿದಿನವೂ ಒಂದಲ್ಲ ಒಂದು ರೀತಿಯಲ್ಲಿ ಬರುತ್ತಿತ್ತು. ಬೆಂಗಳೂರಲ್ಲಿ ತನಗೆ ಅರಮನೆಯಂಥ ಭವನವಿದೆ, ಸೊಗಸಾದ ಮೋಟಾರು ಕಾರುಗಳಿವೆ, ಬೇಕಾದಷ್ಟು ಐಶ್ವರ್ಯವಿದೆ; ಆದರೆ ಅಲ್ಲಿ ತನ್ನಂತಿರುವ ಅಥವಾ ತನಗೆ ಮಿಗಿಲಾದ ನೂರಾರು ಮಂದಿಯಲ್ಲಿ ತಾನು ನೂರೇಳನೆಯವಳು ; ಇಲ್ಲಿ ವಾಸಿಸುತ್ತಿರುವುದು ಮುರುಕು ಮನೆಯಲ್ಲಿ, ದಾಸದಾಸನಿಯರ ಸುಳಿವೇ ಇಲ್ಲ ; ತಾನೊಬ್ಬ ಗಣಿಯ ಕೂಲಿಗಾರನ ಹೆಂಡತಿ, ಆದರೂ ತನಗೆ ಇಲ್ಲೆಷ್ಟು ಗೌರವವಿದೆ. ಒಮ್ಮೆ ಸೀಜರ್ ಮಹಾಶಯನು ಹೇಳಿದನಂತೆ 'ರೋಂ ನಗರದಲ್ಲಿ ಕಡೆಯ ಪ್ರಜೆಯಾಗಿರುವುದಕ್ಕಿಂತಲೂ ಹಳ್ಳಿಯೊಂದರಲ್ಲಿ ಮೊದಲ ಮನುಷ್ಯನಾಗಿರುವುದು ನನಗೆ ಪ್ರಿಯವಾದುದು' ಎಂದು. ಹಾಗೆ ತಾನು ಈ ಜನರ ನಡುವೆ ಪ್ರಮುಖ ವ್ಯಕ್ತಿಯಾಗಿದೇನೆಂಬ ಹೆಮ್ಮೆ ಆಗಾಗ್ಗೆ ಅವಳಲ್ಲಿ ಕಾಣಿಸಿಕೊಳ್ಳುವುದು.

ಈ ನಡುವೆ ದಿನಕ್ಕೊಮ್ಮೆ ವೆಂಕಟಾಚಲಯ್ಯನು ಬಂದು ಭೇಟಿ ಕೊಡುತ್ತಿದ್ದ. ಅವನ ಸಮಸ್ಯೆಗೆ ಇನ್ನೂ ಉತ್ತರ ದೊರೆತಿರಲಿಲ್ಲ ; ಅದು ದೊರೆತಲ್ಲದೆ ಅವನು ಆ ಪ್ರದೇಶವನ್ನು ಬಿಟ್ಟು ಹಿಂತಿರುಗುವಹಾಗಿರಲಿಲ್ಲ. ಸಮಯ ಕಾದು ಒಂದು ದಿನ ಆಸೆಯೊಡನೆ ಆ ಮಾತನ್ನೆತ್ತಿದ.

'ತಮ್ಮನ್ನೊಂದು ಪ್ರಶ್ನೆ ಕೇಳಬೇಕೆಂದು ಬಹು ದಿನಗಳಿಂದ ಯೋಚಿಸುತ್ತಿದೇನೆ. ಕೇಳಲೆ ?'

'ಕೇಳಿ, ಸಂಕೋಚವೇಕೆ ?'

'ನನ್ನ ಪ್ರಶ್ನೆಗೆ ನಿಜವಾದ ಉತ್ತರ ದೊರೆಯದಿದ್ದರೆ........'

'ನೀವು ನಿರೀಕ್ಷಿಸುವ ಉತ್ತರವನ್ನು ಕೊಡುವುದರಿಂದ ತೊಂದರೆಯಿಲ್ಲದ ಪಕ್ಷದಲ್ಲಿ ನಿಜವಾದ ಉತ್ತರವೇ ನಿಮಗೆ ದೊರೆಯುತ್ತದೆ ; ಹಾಗಿಲ್ಲದ ಪಕ್ಷದಲ್ಲಿ ಉತ್ತರವೇ ದೊರೆಯುವುದಿಲ್ಲ. ಆದರೆ ಯಾವಾಗಲೇ ಆಗಲಿ ನಾನು ಕೊಡುವ ಉತ್ತರ ಸುಳ್ಳಾಗಿರುವುದಿಲ್ಲ. ನಿಮ್ಮ ಪ್ರಶ್ನೆ ಏನು ಹೇಳಿ.'

'ನೀವು ನಟೇಶನನ್ನು ಮದುವೆಯಾದುದೇಕೆ ?'

'ಏಕೆ ಆಗಬಾರದು ?'

'ಆಗಬಾರದುದಕ್ಕೆ–ಅಥವಾ ಆಗಲಾರದುದಕ್ಕೆ–ಕಾರಣಗಳಿವೆ; ಆದರೆ ಮದುವೆಯಾದುದಕ್ಕೆ ಕಾರಣಗಳನ್ನು ಊಹಿಸುವುದು ಕಷ್ಟ.'

'ಆ ಕಾರಣಗಳನ್ನು ತಿಳಿಯಲು ನೀವು ಏಕೆ ಅಪೇಕ್ಷಿಸುವಿರಿ ?'

'ಮೊದಲನೆಯದಾಗಿ ಅದು ನನ್ನ ಕರ್ತವ್ಯ. ಆ ಕಾರಣಗಳನ್ನು ತಿಳಿದು ನಮ್ಮ ಪತ್ರಿಕೆಗೆ ವರದಿ ಮಾಡಬೇಕೆಂದು ನಮ್ಮ ಯಜಮಾನರಿಂದ ನನಗೆ ಅಪ್ಪಣೆಯಾಗಿದೆ. ಎರಡನೆಯದು ಸ್ವಸಂತೋಷಕ್ಕಾಗಿ. ಕಾವ್ಯಗಳಲ್ಲಿ ಬಣ್ಣಿಸಿದ ಮತ್ತು ಬಣ್ಣಿಸಬಹುದಾದ ಪ್ರಸಂಗವೊಂದು ನಮ್ಮ ಕಣ್ಣೆದುರಿಗೆ ಇಂದು ನಡೆದಿದೆ ; ಅದರ ಸಂಪೂರ್ಣ ವಿವರವನ್ನು ತಿಳಿಯಬೇಕೆಂಬ ಚಪಲ.'

ಒಂದು ಸಣ್ಣ ವಿಷಯಕ್ಕೆ ನಿಮ್ಮ ಪತ್ರಿಕೆಯಲ್ಲಿ ವಿಶೇಷ ಪ್ರಾಮುಖ್ಯತೆ ಕೊಟ್ಟಿರಿ. ಒಂದು ವಿಧದಲ್ಲಿ ಅದು ನನಗೆ ಉಪಕಾರವನ್ನೇ ಮಾಡಿತಾದರೂ ನೀವು—ಎಂದರೆ ನಿಮ್ಮ ಪತ್ರಿಕೆಯವರು ಇದನ್ನು ಹೀಗೆ ಹಿಂಬಾಲಿಸಿದರೇಕೆ ಎಂದು ನನಗೂ ಕುತೂಹಲವಿದೆ.'

'ವಿಷಯ ಚಿಕ್ಕದೆಂದು ನಿಮಗೆ ತೋರುವುದು ಸಹಜ. ಸಾಮಾನ್ಯ ವಾದ ವಿಷಯವೇ ಸಮಯ ಸನ್ನಿವೇಶಗಳ ಪ್ರಭಾವದಿಂದ ಅಥವಾ ತನ್ನಲ್ಲಿ ಪ್ರಕಟವಾಗುವ ಗುಣ ವಿಶೇಷದಿಂದ ಅಥವಾ ಆ ವಿಷಯಕ್ಕೆ ಪ್ರೇರಕರೋ ಪೋಷಕರೋ ಕಾರಕರೋ ಆಗಿರುವ ವ್ಯಕ್ತಿಗಳ ಪ್ರಾಧಾನ್ಯತೆಯಿಂದ ನಮ್ಮ ದೃಷ್ಟಿಯಲ್ಲಿ ಮಹತ್ತಾಗಿ ಕಾಣುತ್ತದೆ. ಅದನ್ನು ಜನತೆಯ ಮುಂದಿಡುವುದಕ್ಕೆ ಅದು ಕಾರಣ.'

'ಕೇವಲ ವ್ಯಕ್ತಿ ಸಂಬಂಧವಾದ ಇಂಥ ವಿಷಯಗಳನ್ನು ನೀವು ಪತ್ರಿಕೆ ಯಲ್ಲಿ ಹಾಕಿ ಅವರನ್ನು ಬಯಲಿಗೆಳೆಯುವುದು ಸರಿಯೆ ?'

'ಬಹು ಸೂಕ್ಷ್ಮವಾದೊಂದು ವಿಚಾರವನ್ನು ಪ್ರಶ್ನಿಸಿದಿರಿ ತಾಯಿ, ಜನ ಜೀವನದಲ್ಲಿ ದಿನದಿನವೂ ನಡೆಯುತ್ತಿರುವ ಘಟನೆಗಳಲ್ಲಿ ಯಾವುವು ಎಷ್ಟು ಮಟ್ಟಿಗೆ ಮತ್ತು ಎಲ್ಲಿಯವರೆಗೆ ವೈಯಕ್ತಿಕವಾದುವು ಅಥವಾ ಸಾರ್ವಜನಿಕ ವಾದುವು ಎಂದು ನಿರ್ಣಯಿಸುವುದು ಕೆಲವು ಸಂದರ್ಭಗಳಲ್ಲಿ ಕಷ್ಟವಾಗುತ್ತದೆ. ವ್ಯಕ್ತಿಯ ಜೀವನವು ಒಂದು ಕ್ರಮ ನಿಯಮ: ಸಂಪ್ರದಾಯ ಆಚರಣೆಗೆ ಬದ್ಧ ವಾಗಿರುತ್ತದೆ; ಎಲ್ಲಿ ಯಾವಾಗ ಅವಕ್ಕೆ ವಿರೋಧವಾಗಿ ಅಥವಾ ಮೀರಿ ಒಂದು ಘಟನೆ ನಡೆಯುತ್ತದೋ ಆಗ ಅಲ್ಲಿ ಸಾರ್ವಜನಿಕ ಹಿತ ಮೂಡುತ್ತದೆ. ಇಂಥ ಪರಿವರ್ತನೆಯು ಸ್ಫುಟವಾಗಿ ಪ್ರಕಟವಾಗಿರಬಹುದು ಅಥವಾ ಕಂಡು ಕಾಣದಂತೆ ಸೂಕ್ಷ್ಮವಾಗಿರಬಹುದು. ಅದು ಸೂಕ್ಷ್ಮವಾಗಿದ್ದಾಗ ನಮ್ಮ ಕೆಲಸ ಕಷ್ಟವಾಗುತ್ತದೆ.'

'ನನ್ನ ವಿವಾಹದಲ್ಲಿ ಮತ್ತು ವಿವಾಹಿತ ಜೀವನದಲ್ಲಿ ನೀವು ಯಾವ ಸಾರ್ವಜನಿಕ ಹಿತವನ್ನು ಕಂಡು ನನ್ನ ಬೆನ್ನು ಬಿದ್ದಿರಿ?'

'ನಿಮ್ಮ ಸ್ವಂತಕ್ಕೆ ಮಾತ್ರ ಸಂಬಂಧಿಸಿದುದಾಗಿ ತೋರುವ ನಿಮ್ಮ ವಿವಾಹದ ವಿಷಯದಲ್ಲಿ ನಾವಿಷ್ಟು ಆಸಕ್ತಿ ತೋರಿಸುತ್ತಿರುವುದಕ್ಕಾಗಿ ತಮ್ಮ ಕ್ಷಮೆ ಬೇಡುತ್ತೇನೆ. ನಮ್ಮ ಈ ವರ್ತನೆಗೆ ಯುಕ್ತವಾದ ಕಾರಣಗಳಿವೆ. ನನ್ನ ಮಟ್ಟಿಗೆ ಹೇಳುವುದಾದರೆ ಇದು ನಮ್ಮ ಸಮಾಜದ ಭವಿಷ್ಯದ ಸೂಚನೆ ಯಾಗಿದೆ; ಸಾಂಕೇತಿಕವಾಗಿದೆ ಇದರ ಪರಿಣಾಮವು ನಮ್ಮ ಜನರಮೇಲೆ ಬಹುದೂರ ಹೋಗುವುದಾಗಿದೆ.

'ಸಾಮಾನ್ಯವಾದೊಂದು ವಿಷಯಕ್ಕೆ ನೀವು ಮಹತ್ತಾದ ಅರ್ಥ ಕಲ್ಪಿಸು ತ್ತಿರುವಹಾಗಿದೆ.'

'ಇರಬಹುದು. ಇತರ ಸಮಯಗಳಲ್ಲಾದರೆ ಇದು ಸಾಮಾನ್ಯವಾಗಿರ ಬಹುದೋ ಏನೋ. ಆದರೆ ಈಗಿನ ಸಮಾಜದ ಸ್ಥಿತಿ ಏನಾಗಿದೆ ಸ್ವಲ್ಪ ನೋಡಿ. ಮನುಷ್ಯನನ್ನು ಸೃಷ್ಟಿಸಿದ ಬ್ರಹ್ಮನು ಅವನಲ್ಲಿ ಒಂದು ವಿಶೇಷ ಗುಣವನ್ನು ಸೇರಿಸಿದ್ದಾನೆ—ಅದು ಗುಂಪುಗಳನ್ನು ಕಟ್ಟುವ ಸ್ವಭಾವ. ಕಾಲ ಕಾಲಕ್ಕೆ ಈ ಗುಂಪುಗಳು ಏರ್ಪಡುವುದು ಒಡನೆ ಬಾಳುವುದು, ಕಾರಣಾಂತರ ಗಳಿಂದ ಒಡೆದು ಬೇರೆ ಬೇರೆಯಾಗುವುದು ಅಥವಾ ಭಿನ್ನರೂಪವನ್ನು ತಾಳು ವುದು ಮಾನವನ ಜೀವನದಲ್ಲಿ ಯುಗ ಯುಗಾಂತರಗಳಿಂದ ನಾವು ಕೇಳುವ

ವಿಷಯ. ಗೋತ್ರ ಸೂತ್ರಗಳು ಏರ್ಪಟ್ಟುದು ಹೀಗೆಯೇ; ಪಣ ಪಡಿಕಟ್ಟು ಗಳು ಹುಟ್ಟಿದುದು ಹೀಗೆಯೇ. ಬುದ್ಧಿ ಜೀವಿಗಳು ತಮ್ಮದೊಂದು ಗುಂಪನ್ನು ಕಲ್ಪಿಸಿಕೊಂಡರೆ ಪರಾಕ್ರಮಿಗಳಾದವರು ಯುದ್ಧಮಾಡಬಲ್ಲವರು ಇನ್ನೊಂದು ಗುಂಪಾದರು. ವ್ಯಾಪಾರದಿಂದ ಜೀವಿಸುವವರು ಶ್ರಮಜೀವಿಗಳು ಬೇರೆ ಗುಂಪು ಗಳಾದರು. ಸಾಹಿತ್ಯ ಬೆಳೆದಾಗ ವ್ಯಾಕರಣ ಹುಟ್ಟುವಂತೆ ಸಮಾಜ ಬೆಳೆದಾಗ ವರ್ಣಾಶ್ರಮಗಳು, ವರ್ಣಾಶ್ರಮ ಧರ್ಮಗಳು ಸೃಷ್ಟಿಯಾದುವು. ಹೀಗೆ ಹುಟ್ಟಿದ ವರ್ಣವೃಕ್ಷಗಳು ಬೆಳೆದುವು. ಕವಲೊಡೆದು ನಾಲ್ಕು ಇದ್ದುದು ನಲವತ್ತಾಗಿ ನಾಲ್ಕು ನೂರಾಗಿ ಬಹುಶಃ ನಾಲ್ಕುಸಾವಿರವಾದುವು; ಬುಡವನ್ನು ಬಿಟ್ಟು ಬಹು ದೂರವಿರುವ ಶಾಖೆ ಉಪಶಾಖೆಗಳು ಇತರ ಸೋದರ ಶಾಖೆ ಗಳನ್ನು ಮರೆತುವು. ನಾ ಹೆಚ್ಚು ತಾ ಹೆಚ್ಚು ಎಂದು ಮೆರೆದುವು; ಪರಸ್ಪರ ಹಳಿದುವು. ಹಲವುವೇಳೆ ಅವುಗಳ ವಿನಾಶಕ್ಕು ಸಹ ಪ್ರಯತ್ನಿಸಿದುವು. ಸಮಾಜದಲ್ಲಿನ ಈ ಪಂಗಡಗಳ ಉದ್ದೇಶ, ಕರ್ತವ್ಯ ಸಾಧನೆಗಳು ಅವು ಮೊದಲು ಏರ್ಪಟ್ಟ ರೀತಿಯಲ್ಲಿ ಕ್ರಮನಿಯಮಬದ್ಧವಾಗಿ ಪರಸ್ಪರ ಆಕ್ರಮಣ ಈರ್ಷೆ ದುರಾಗ್ರಹಗಳಿಗೆ ಎಡೆಗೊಡದಂತೆ ಇರುವವರೆಗೆ ಸಮಾಜದಲ್ಲಿ ಶಾಂತಿ ಇತ್ತು, ವ್ಯವಸ್ಥೆ ಇತ್ತು. ಆಗಲೂ ಸಹ ಕ್ರಾಂತಿಯ ಅಕುರಗಳು ಅಲ್ಲಲ್ಲಿ ಕಂಡುಬಂದುವು; ಕ್ಷತ್ರಿಯನಾಗಿ ರಾಜ್ಯ ಪರಿಪಾಲನೆಯ ಭಾರವನ್ನು ಹೊತ್ತ ವಿಶ್ವಾಮಿತ್ರನು ಬ್ರಾಹ್ಮಣನಂತೆ ತಪಸ್ಸಿನಲ್ಲಿ ಕುಳಿತ, ಬ್ರಾಹ್ಮಣನಾದ ದ್ರೋಣಾ ಚಾರ್ಯನು ಧನುರ್ವಿದ್ಯೆ ಕಲಿಸುವ ಗುರುವಾಗಿ ನಿಂತು ಕಡೆಗೆ ಯುದ್ಧದಲ್ಲಿ ಮಡಿದ. ಆದರೆ ಇಂಥ ನಿದರ್ಶನಗಳು ಅಲ್ಲೊಂದು ಇಲ್ಲೊಂದು ಅಪವಾದ ರೂಪದಲ್ಲಿ ಕಂಡರೂ ಸಮಾಜದ ವ್ಯವಸ್ಥೆಯನ್ನು ಒಡೆಯಲಿಲ್ಲ. ಇದು ಹಿಂದಿನ ಯುಗಗಳ ಮಾತಾಯಿತು.

'ಅಲ್ಲಿಂದೀಚಿಗೆ ನಮ್ಮ ಜನರು ಅನೇಕ ವಿವಿಧ ರೀತಿಯ ಆಕ್ರಮಣಗಳಿಗೆ ವಿವಿಧ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು; ಸಮಾಜದ ಕಟ್ಟು ಪಾಡುಗಳು ಒಡೆದುವು. ಲೆಕ್ಕವಿಲ್ಲದಷ್ಟು ಪಂಗಡಗಳಾಗಿ ಲೆಕ್ಕವಿಲ್ಲದಷ್ಟು ಆಚಾರ ವಿಚಾರ ಸಂಪ್ರದಾಯಗಳು ಬೆಳೆದುವು; ಅಂತೆಯೇ ಅವುಗಳಲ್ಲಿನ ಶ್ರದ್ಧೆಯೂ ಲಯವಾಗಿ ಹೆಸರಿಗೆ ಮಾತ್ರ ಹಿಂದಿನ ಪಂಗಡಗಳು ಉಳಿದುವು. ಬೆಳವಣಿಗೆಯೇ ತನ್ನ ಹುಟ್ಟು ಸ್ವಭಾವವಾಗಿ ಉಳ್ಳ ಮನುಷ್ಯನು ಇಲ್ಲಿಗೆ ಬೇಸರಗೊಂಡು ಹೊಸ

ಮಾದರಿಯ ಪಂಗಡಗಳನ್ನು ಸೃಷ್ಟಿಸಲು ಹೊರಟ. ಆಧುನಿಕ ವಾತಾವರಣಕ್ಕೆ ಹೊಂದಿಕೊಂಡಂತೆ ಹೊಸ ಹೊಸ ಗುಂಪುಗಳು ಏರ್ಪಟ್ಟುವು.

'ಧರ್ಮವನ್ನು ಪ್ರಧಾನವಾಗಿಟ್ಟುಕೊಂಡು ಗುಂಪುಗಳನ್ನು ಮಾಡಿಕೊಂಡ ಹಿಂದಿನ ಜನರು ವರ್ಣಾಶ್ರಮಗಳನ್ನು ಸೃಷ್ಟಿಸಿದರು; ಜಾತಿ ಮತಗಳನ್ನು ಬೆಳೆಸಿದರು. ಧರ್ಮ ಸಾವಿರಾರು ವರ್ಷಗಳು ಆಧಿಪತ್ಯಮಾಡಿ ವಿಶ್ರಾಂತಿಯನ್ನು ಬಯಸಿದಂತೆ ಕಾಣುತ್ತದೆ. ಜನಜೀವನದಲ್ಲಿ ಅರ್ಥಕ್ಕೆ ಪ್ರಮುಖಸ್ಥಾನವೊದಗುತ್ತ ಬಂತು. ಹಣವೇ ಸಮಾಜದಲ್ಲಿನ ಸ್ಥಾನವನ್ನು ನಿರ್ದೇಶಿಸುವ ಅಳತೆ ಗೋಲಾಯಿತು; ಶ್ರೀಮಂತರು, ಸಾಮಾನ್ಯರು ಮತ್ತು ಬಡವರು ಎಂಬ ಮೂರು ಗುಂಪುಗಳು ಕ್ರಮೇಣ ರೂಪುಗೊಂಡವು. ಜನತೆ ತಮಗೆ ಅರಿವಿಲ್ಲದೆಯೇ ಈ ಗುಂಪುಗಳಲ್ಲಿ ತನಗೆ ತಕ್ಕುದಾದ ಒಂದರಲ್ಲಿ ಹೊಂದಿಕೊಂಡಿತು.

'ಹಿಂದಿನ ಸಮಾಜದ ವ್ಯವಸ್ಥೆಯಲ್ಲಿ ಬುದ್ಧಿಜೀವಿಗಳಿಗೂ ಶ್ರಮಜೀವಿಗಳಿಗೂ ನಡುವೆ ಕ್ಷತ್ರಿಯರೂ ವೈಶ್ಯರೂ ಇದ್ದಂತೆಯೇ ಈ ಹೊಸ ವ್ಯವಸ್ಥೆಯಲ್ಲೂ ಶ್ರೀಮಂತರು ಮತ್ತು ಬಡವರ ನಡುವೆ ಸಾಮಾನ್ಯ ವರ್ಗದವರು ಇದ್ದರು. ಮೇಲಿನ ಕೆಳಗಿನ ಎರಡು ಗುಂಪುಗಳಿಗೂ ನಡುವೆ ಈ ತೆರೆದ ಮಧ್ಯವರ್ತಿಯಾದ, ಅವೆರಡು ಗುಂಪುಗಳಿಗೂ ಸಂಬಂಧ ಪಡಬಹುದಾದ, ಸಮಯ ಬಂದಲ್ಲಿ ಅವೆರಡನ್ನೂ ತನ್ನ ಹಿಡಿತದಲ್ಲಿಟ್ಟುಕೊಳ್ಳಬಹುದಾದ ಮಧ್ಯಮವರ್ಗವು ನೆಲೆಸಿರುವುದು ಮತ್ತು ತಕ್ಕಷ್ಟು ಬಲಯುತವಾಗಿರುವುದು ದೇಶದ ಜನರ ಹಿತದೃಷ್ಟಿಯಿಂದ ಅತ್ಯಾವಶ್ಯಕ. ತಾವು ಉಚ್ಛವರ್ಗದವರೆಂದು ಭಾವಿಸುವ ಜನ ಕನಿಷ್ಠರೆಂದು ಭಾವಿಸುವ ಜನರನ್ನು ತಮ್ಮ ಪ್ರಯೋಜನಕ್ಕಾಗಿಯೇ ಬಳಸಿಕೊಳ್ಳುವುದೂ ಕನಿಷ್ಠರೆಂದು ತಿಳಿದುಕೊಳ್ಳುವ ಈ ಗುಂಪಿನವರು ಮೇಲಿನವರನ್ನು ಯಾವಾಗಲೂ ಸಂಶಯದಿಂದ ಅಸೂಯೆಯಿಂದ ನೋಡುವುದೂ ಸಹಜ. ಪರಸ್ಪರ ವಿರುದ್ಧ ಸ್ವಭಾವವಿರುವ ಈ ಗುಂಪುಗಳ ನಡುವೆ ಇವುಗಳ ಶಕ್ತಿಯನ್ನು ನಿಗ್ರಹಿಸಬಲ್ಲ ಮತ್ತು ಅದನ್ನು ಉತ್ತಮ ಕಾರ್ಯಗಳ ಕಡೆಗೆ ತಿರುಗಿಸಬಲ್ಲ ಮಧ್ಯಮ ವರ್ಗವೊಂದಿಲ್ಲದಿದ್ದರೆ ಎಂದಿದ್ದರೂ ಈ ಎರಡು ಗುಂಪುಗಳಿಗೂ ಘರ್ಷಣೆ ಅನಿವಾರ್ಯ. ನಾನಾ ದೇಶಗಳಲ್ಲಿ ನಡೆದಿರುವ ಕ್ರಾಂತಿಗಳಿಗೆ ಇದೇ ಮೂಲಕಾರಣ.

'ನಮ್ಮ ದೇಶದಲ್ಲಿ ಈಗ ಏನಾಗಿದೆ? ಪ್ರಪಂಚದ ಎರಡನೆಯ ಯುದ್ಧಕ್ಕೆ ಮೊದಲು ಈ ಮಧ್ಯಮವರ್ಗವು ಪ್ರಬಲವಾಗಿತ್ತು. ಈ ಯುದ್ಧದಿಂದ ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾಗಿರುವ ದೊಡ್ಡ ಬದಲಾವಣೆಯೆಂದರೆ ಈ ಮಧ್ಯಮವರ್ಗದ ವಿನಾಶ. ಯುದ್ಧ ಕಾಲದಲ್ಲಿ ಮತ್ತು ಈಚೆಗೆ ದೊರೆತ ಸ್ವಾತಂತ್ರ್ಯ ದಿನಗಳಲ್ಲಿ ಶ್ರೀಮಂತರು ಅತಿ ಶ್ರೀಮಂತರಾದರು, ಕೆಲವು ಮಂದಿ ಇತರರೂ ಈ ವರ್ಗದಲ್ಲಿ ಸೇರಿಕೊಂಡು ಅದನ್ನು ಬಲಪಡಿಸಿದರು. ಬಡವರಂತೂ ಅದೃಷ್ಟಶಾಲಿಗಳಾದ ಹಲವರು ಹೊರತು ಉಳಿದವರು ಬಡವರಾಗಿಯೇ ಉಳಿದರು; ಮಧ್ಯವರ್ತಿಗಳಾಗಿದ್ದ ಜನರುಮಾತ್ರ ತಮ್ಮ ಮೇಲೆಬಿದ್ದ ಹೊರೆಯನ್ನು ತಡೆಯಲಾರದೆ ಬಡವರಾಗಿ ಅಥವಾ ಬಡವರಿಗಿಂತ ಕಡು ಬಡವರಾಗಿ ಪರಿವರ್ತಿತರಾದರು. ಇದರಿಂದಾಗಿ ಈಗ ದೇಶದಲ್ಲಿ ಉಳಿದಿರುವುದು ಶ್ರೀಮಂತರು ಬಡವರು ಎಂಬ ಎರಡೇ ಗುಂಪುಗಳು.

'ನಮ್ಮ ಸಮಾಜದಲ್ಲಿ ಉಂಟಾಗಿರುವ ಈ ಪರಿವರ್ತನೆಯು ಮುಂದಿನ ಕ್ರಾಂತಿಯ ಸೂಚನೆಯೇನೋ ಎಂಬ ಹೆದರಿಕೆಯಿರುವವರಲ್ಲಿ ನಾನೊಬ್ಬ. ಇವೆರಡು ಗುಂಪುಗಳಲ್ಲಿ ಅನ್ಯೋನ್ಯ ಮೈತ್ರಿ ವಿಶ್ವಾಸಗಳು ಹುಟ್ಟುವುದು ಅತಿ ವಿರಳ. ನಮ್ಮ ದೇಶದಲ್ಲಿ ಈಗಾಗಲೇ ಅಲ್ಲಲ್ಲಿ ಅಶಾಂತಿಯು ತಲೆದೋರುತ್ತಿರುವುದರ ಮೂಲ ಈ ಭಿನ್ನತೆ. ಮುಂದೊದಗಬಹುದಾದ ಘರ್ಷಣೆಯನ್ನು ನಿವಾರಿಸಿ ದೇಶದಲ್ಲಿ ಶಾಂತಿ ಸಮಾಧಾನಗಳು ಎಂದಿನಂತೆ ನೆಲೆಸಿರುವಂತೆ ಮಾಡುವ ಜವಾಬ್ದಾರಿ ಈಗ ಶ್ರೀಮಂತರ ಮೇಲೆ ಬಿದ್ದಿದೆ. ಅವರು ಉಪೇಕ್ಷೆಯಿಂದ ಉದಾಸೀನದಿಂದ ಧೋರಣೆಯಿಂದ ಇದ್ದರೆ ಅದರ ಪರಿಣಾಮ ಒಳ್ಳೆಯದಾಗುವುದಿಲ್ಲ. ಹಸಿದ ಹೊಟ್ಟೆಯಲ್ಲಿ ಉರಿಯುತ್ತಿರುವ ಬೆಂಕಿ ಅವರ ಶ್ರೀಮಂತಿಕೆಯನ್ನು ಆಹುತಿ ತೆಗೆದುಕೊಂಡೀತು. ಶಾಂತಿ ಪ್ರಿಯರಾದ ನಮ್ಮ ಜನರು ಕೆರಳುವುದಕ್ಕೆ ಮುನ್ನ ಶ್ರೀಮಂತರು ಎಚ್ಚರಗೊಳ್ಳಬೇಕು.

'ಆಗರ್ಭ ಶ್ರೀಮಂತರಾದ ನೀವು ಬಡವನಾದ ಕೂಲಿಗಾರನನ್ನು ಮದುವೆಯಾದುದು ಇಂದಿನ ಸಮಾಜದ ದೃಷ್ಟಿಯಲ್ಲಿ ಮುಖ್ಯವಾದುದೆ ಅಲ್ಲವೆ ಎಂದು ನೀವೇ ಹೇಳಿ. ನೀವು ತೋರಿಸುವ ಸಹೃದಯತೆಯಲ್ಲಿ ನೂರರಲ್ಲಿ ಒಂದು ಪಾಲನ್ನು ಇತರರು ಬಡವರ ವಿಷಯದಲ್ಲಿ ತೋರಿಸುವುದಾದರೆ ನಮ್ಮ

ದೇಶವನ್ನು ಸ್ವರ್ಗಲೋಕವನ್ನಾಗಿ ಮಾಡಬಹುದು. ದೇಶದ ಹಿತದ ದೃಷ್ಟಿಯಿಂದ ನೀವು ಮಾಡಿರುವ ತ್ಯಾಗ ಅಸಾಧಾರಣವಾದುದು.'

ವೆಂಕಟಾಚಲಯ್ಯನ ಮಾತುಗಳನ್ನು ಮೌನವಾಗಿ ಕೇಳುತ್ತಿದ್ದ ವಸಂತಾದೇವಿಯು ನಸುನಗುತ್ತ ಹೇಳಿದಳು

'ನಿಮ್ಮ ಪ್ರಶಂಸೆಯನ್ನು ಒಪ್ಪಿಕೊಳ್ಳಲು ನನ್ನ ಮನಸ್ಸು ಹಿಂದೆಗೆಯುತ್ತಿದೆ ವೆಂಕಟಾಚಲಯ್ಯನವರೆ. ಈ ಮದುವೆ ಮಾಡಿಕೊಂಡುದರಲ್ಲಿ ನೀವು ಆರೋಪಿಸುವಂಥ ಘನವಾದ ಉದ್ದೇಶವೇನೂ ನನಗಿರಲಿಲ್ಲ.'

'ಉದ್ದೇಶವಿಲ್ಲದಿದ್ದರೂ ಫಲ ಒಂದೇ ಆಗಿದೆ. ತಮ್ಮ ಉದ್ದೇಶವನ್ನೂ ತಿಳಿಸಿದರೆ ನನಗೆ ಒಂದು ರೀತಿ ಸಮಾಧಾನವಾಗುತ್ತದೆ.'

'ಕ್ಷಮಿಸಿ; ಆ ವಿವರಗಳನ್ನು ತಿಳಿಸುವ ಸಮಯ ಇನ್ನೂ ಬಂದಿಲ್ಲ. ಸಮಯ ಬಂದಾಗ ಅವನ್ನು ಖಂಡಿತ ನಿಮಗೆ ತಿಳಿಸುತ್ತೇನೆ. ಯಾವುದನ್ನೂ ಮರೆಮಾಚುವುದಿಲ್ಲ.'

'ನಿಮ್ಮ ಸಂತೋಷ ತಾಯಿ. ಗುಟ್ಟಾದ ವಿಷಯವಾದರೆ ಅದನ್ನು ಹೊರಗೆಡಹುವ ಇಚ್ಛೆ ನನಗಿಲ್ಲ.'

'ಇನ್ನೂ ಕೆಲವು ಕಾಲ ಆ ವಿಷಯ ನನ್ನಲ್ಲಿರುವುದೇ ಮೇಲು. ಇದನ್ನು ಗುಟ್ಟಾಗಿರಿಸಿ ಎಂದು ನಿಮ್ಮ ಮುಂದೆ ಬಿಚ್ಚಿ ಹೇಳಿ ಅನಂತರ ನೀವು ಅದನ್ನು ಬಹಿರಂಗಪಡಿಸುವಿರೋ ಏನೋ ಎಂದು ಹಗಲು ರಾತ್ರಿಯೂ ಹಲುಬುವುದಕ್ಕಿಂತ ಅದನ್ನು ನನ್ನಲ್ಲಿಯೇ ಯುಕ್ತ ಕಾಲದವರೆಗೆ ಇಟ್ಟಿರುವುದು ಒಳ್ಳೆಯದಲ್ಲವೆ?'

'ನೀವು ಬಹು ಜಾಣರು ತಾಯಿ. ಅದನ್ನು ಕಂಡೇ ನಮ್ಮ ಕುತೂಹಲವು ಈ ವಿವಾಹದ ವಿಷಯದಲ್ಲಿ ಇಷ್ಟು ಹೆಚ್ಚಾಗಿರುವುದು.'

'ತಮ್ಮನ್ನು ಬಹಳ ಹೊತ್ತು ಕುಳ್ಳಿರಿಸಿಬಿಟ್ಟೆ.'

'ನಾನಿನ್ನು ಬರಲೆ ತಾಯಿ?'

ವಸಂತಾದೇವಿಯ ಅಪ್ಪಣೆ ಪಡೆದು ವೆಂಕಟಾಚಲಯ್ಯ ಅಲ್ಲಿಂದ ಹಿಂತಿರುಗಿದ. ಅವನನ್ನೇ ನೋಡುತ್ತ ಆಕೆಯು

'ಸಾಮಾನ್ಯ ವರದಿಗಾರ ಎಂದಿದ್ದೆ; ಬೇಕಾದಷ್ಟು ಸರಕಿದೆ' ಎಂದುಕೊಂಡಳು.

— ೨೯ —

ಸ್ವಾಮಿಯು ಹಾಸಿಕೆಯಿಂದೇಳುವಾಗ್ಗೆ ಆಗಲೇ ಎಂಟುಗಂಟೆಯಾಗಿತ್ತು. ಹೋಟಲಿನ ಮಾಣಿಯು ಆ ವೇಳೆಗೆ ಎರಡುಸಲ ಬಂದು ಕಿಟಕಿಯಲ್ಲಿ ಇಣಿಕಿ ನೋಡಿ ಹೋಗಿದ್ದ. ರಾತ್ರಿಯೆಲ್ಲಾ ಏನೇನೋ ಕೆಟ್ಟ ಸ್ವಪ್ನಗಳು ಬಿದ್ದು ಸ್ವಾಮಿಗೆ ಸರಿಯಾಗಿ ನಿದ್ರೆ ಬಂದಿರಲಿಲ್ಲ. ಸೂರ್ಯನ ಬಿಸಿಲು ಕಿಟಕಿಯಿಂದ ಮಂಚದ ಮೇಲೆ ಬಿದ್ದು ಹೊತ್ತಾಯಿತೆಂದು ಎಚ್ಚರಿಕೆ ಕೊಟ್ಟಿತ್ತು. ಮೈ ಮುರಿಯುತ್ತ ಅವನು ಎದ್ದು ಕುಳಿತ; ಆದರೆ ಬಿಸಿಲು ಏರಿದ್ದುದನ್ನು ಕಂಡ ಸ್ವಾಮಿಯು ಪ್ರಯತ್ನದಿಂದ ಮಂಚವನ್ನಿಳಿದು ನಡೆದು ಜಲಬಾಧೆ ತೀರಿಸಲು ಬಚ್ಚಲ ಮನೆಗೆ ಹೋದ.

ಜಲವಿಸರ್ಜನೆಯಾಗುವಾಗ ಸ್ವಾಮಿಗೆ ಆದ ಅನುಭವದಿಂದ ಅವನ ಎದೆ ಬೆದರಿತು. ವಸ್ತು ಪ್ರದರ್ಶನಗಳಲ್ಲಿನ ಆರೋಗ್ಯ ವಿಭಾಗದಲ್ಲಿ ನೋಡಿದ್ದ ಚಿತ್ರಗಳಿಂದ ಮತ್ತು ಅಲ್ಲಿ ಇಲ್ಲಿ ಕದ್ದು ಕಾಣದಂತೆ ಓದಿದ್ದ ಒಂದೆರಡು ಕಾಮ ಶಾಸ್ತ್ರ ಸಂಬಂಧವಾದ ಪುಸ್ತಕಗಳಿಂದ ಮರ್ಮವ್ಯಾಧಿಗಳ ಲಕ್ಷಣಗಳನ್ನು ಅಷ್ಟಿಷ್ಟು ತಿಳಿದುಕೊಂಡಿದ್ದ ಸ್ವಾಮಿಗೆ ತಾನು ಆ ವ್ಯಾಧಿಗೆ ಬಲಿ ಬಿದ್ದೆನೆ ಎಂಬ ಶಂಕೆಯು ಮೂಡಿತು. ಹಿಂದೆಯೇ ತಾನು ಪ್ರದರ್ಶನಗಳಲ್ಲಿ ಕಂಡಿದ್ದ ಆ ವ್ಯಾಧಿಯ ಭಯಂಕರ ರೂಪಗಳು ಕಣ್ಣಮುಂದೆ ಚಲಿಸಿದುವು. ದೇಹದ ಯಾವ ಅಂಗವನ್ನು ಅದು ವಿಕಾರಗೊಳಿಸುವುದೋ ಎಂಬ ಭಯವೊಂದುಕಡೆ; ಅದಕ್ಕಿಂತ ಹೆಚ್ಚಾಗಿ ತನ್ನ ಈ ದುಷ್ಕೃತ್ಯವು ಬಯಲಿಗೆ ಬಿದ್ದು ಮರ್ಯಾದೆ ಹೋಗುವುದಲ್ಲಾ ಎಂಬ ಚಿಂತೆ; ತಾನು ಇಂಥ ವ್ಯಾಧಿಗೆ ತುತ್ತಾದೆನೆಂದು ತಿಳಿದರೆ ತನ್ನ ತಂದೆಯು ಏನೆನ್ನಬಹುದು! ವಸಂತಾದೇವಿಯು ತನ್ನ ವಿಷಯದಲ್ಲಿ ಎಂಥ ತಿರಸ್ಕಾರ ತೋರಿಸಬಹುದು! ಈಗೇನು ಮಾಡಲಿ? ಯಾರನ್ನು ಮರೆಹೊಗಲಿ?

ಬೆಟ್ಟ ತಲೆಯಮೇಲೆ ಕವಿದು ಬಿದ್ದಂತೆ ಸ್ವಾಮಿಗೆ ಯೋಚನೆಗಿಟ್ಟು ಕೊಂಡಿತು. ಮೇಜಿನ ಮುಂದೆ ಕುಳಿತು ತಲೆ ಕೆರೆದುಕೊಂಡಾಯಿತು, ಕೋಣೆ ಯಲ್ಲಿ ಶತಪಥ ತಿರುಗಿಯಾಯಿತು, ಮತ್ತೆ ಕುರ್ಚಿಯಲ್ಲಿ ಕುಳಿತು ಚಿಂತಿಸಿದ್ದಾ ಯಿತು; ಏನಾದರೂ ಪರಿಹಾರ ದೊರೆಯಲಿಲ್ಲ. ಮಾಣಿಯು ಮೇಜಿನ ಮೇಲೆ ತಂದಿಟ್ಟಿದ್ದ ಕಾಫಿಯು ತಣ್ಣಗಾಗಿತ್ತು; ಸಿಗರೇಟಿಗಾಗಿ ಕೋಣೆಯನ್ನೆಲ್ಲ

ಒಮ್ಮೆ ಶೋಧಿಸಿ ನೋಡಿದ—ಅದೂ ನಿಷ್ಫಲ. ಮಾಣಿಯನ್ನು ಕರೆದು ಸಾಲವಾಗಿ ಸಿಗರೇಟನ್ನಂತೂ ತರಿಸಿದ. ಅದರ ಹೊಗೆಯ ಸುರುಳಿಗಳಲ್ಲಿ ತನ್ನ ಸಮಸ್ಯೆಗೆ ಪರಿಹಾರ ದೊರೆಯಬಹುದೇನೋ ಎಂದು ನೋಡಿದ. ಸಿಗರೇಟುಗಳು ಉರಿದುಹೋದುವೇ ಹೊರತು ಸಮಾಧಾನ ದೊರೆಯಲಿಲ್ಲ.

ಈ ಮಧ್ಯೆ ವ್ಯಾಧಿ ಕ್ಷಣಕ್ಷಣಕ್ಕೆ ಬಲವಾಗುತ್ತಿರುವಂತೆ ಕಂಡಿತು. ವ್ಯಾಧಿಯು ಸಣ್ಣ ಕ್ರಿಮಿಗಳ ಸೋಂಕಿನಿಂದ ಬರುವುದೆಂದು, ಒಂದೆರಡಾಗಿ ಮೈಯನ್ನು ಸೇರಿದ ಈ ಕ್ರಿಮಿಗಳು ಅತಿ ಸ್ವಲ್ಪ ಕಾಲದೊಳಗಾಗಿ ಒಂದಕ್ಕೆ ನೂರಾಗಿ ಸಾವಿರವಾಗಿ ಬೆಳೆಯಬಲ್ಲುವೆಂದು ಕೇಳಿದ್ದ. ಕಣ್ಣಿಗೆ ಕಾಣಿಸದಷ್ಟು ಸೂಕ್ಷ್ಮವಾದ ಈ ಕ್ರಿಮಿಗಳು ಈಗ ತನ್ನ ಅಂಗದಲ್ಲಿ ಧಾರಾಳವಾಗಿ ಓಡಾಡು ತ್ತಿರುವಂತೆ ತನ್ನ ಸಂತತಿಯನ್ನು ವೃದ್ಧಿಗೊಳಿಸುತ್ತಿರುವಂತೆ ತಮ್ಮ ಆಹಾರ ಕ್ಕಾಗಿ ತಾವಿರುವ ಪ್ರದೇಶದಲ್ಲಿನ ಮಾಂಸಖಂಡವನ್ನು ಕಚ್ಚುತ್ತಿರುವಂತೆ ಅವನಿಗೆ ಬೋಧೆಯಾಯಿತು. ವ್ಯಾಧಿ ಬಲಗೊಳ್ಳುತ್ತಿತ್ತು. ಇನ್ನು ತನ್ನ ಮರ್ಯಾದೆಯನ್ನು ಬದಿಗೊತ್ತಿ ವೈದ್ಯರಲ್ಲಿಗೆ ಹೋಗದೆ ವಿಧಿಯಿಲ್ಲ.

ಆದರೆ ಉತ್ತಮರಾದ ವೈದ್ಯರು ಈ ಸಣ್ಣ ಊರಿನಲ್ಲಿ ಎಲ್ಲಿದಾರೆ? ಸಿಕ್ಕಿದವರ ಮುಂದೆ ತನ್ನ ಪಾಡನ್ನು ಹೇಳಿಕೊಂಡರೆ ತನ್ನ ಸ್ಥಿತಿ ನಗುಪಾಟ ಲಾಗುವುದಷ್ಟೇ ಹೊರತು ಗುಣವಾಗಲಾರದು. ಇದು ನಿವಾರಣೆಯಾಗಲು ತಾನು ಬೆಂಗಳೂರಿಗೇ ಹೋಗಬೇಕು. ತಾನು ಹಿಂತಿರುಗಿ ಹೋದರೆ ಇಲ್ಲಿ ಬಂದ ಕೆಲಸ?

ಏನು ಮಾಡಬೇಕೆಂದು ಸ್ವಾಮಿಗೆ ದಿಕ್ಕು ತೋರದಾಯಿತು; 'ಇತ್ತಪುಲಿ, ಅತ್ತದರಿ' ಎನ್ನುವಂತಾಯ್ತು ಅವನ ಸ್ಥಿತಿ. ಬೆಳಗ್ಗೆ ಓಡಾಡುವಂತಿದ್ದ ಅವನ ದೇಹ ಮಧ್ಯಾಹ್ನದ ವೇಳೆಗೆ ಓಡಾಟಕ್ಕೆ ತೊಂದರೆ ಕೊಡಲು ಆರಂಭಿಸಿತು; ಸಂಜೆಯ ವೇಳೆಗೆ ಸ್ವಾಮಿಯು ಹಾಸಿಗೆ ಹಿಡಿಯಬೇಕಾಯ್ತು. ಜಲವಿಸರ್ಜನೆ ಮಾಡುವುದೆಂದರೆ ಅದೊಂದು ನರಕಯಾತನೆ. ತಾನು ಬಂದ ಕೆಲಸ ಮುಂದೆ ಸಾಗದೆಂದು ನಿರ್ಧರಿಸಿ ಸ್ವಾಮಿಯು ಹಣ ಕಳಿಸುವಂತೆ ತಂದೆಗೆ ತಂತಿ ಕಳಿಸಿದ.

ಬಂದ ಮೂರೇ ದಿನಗಳಲ್ಲಿ ಪುನಃ ಹಣ ಬೇಕೆಂದು ಮಗನಿಂದ ತಂತಿ ಬಂದುದು ರಾವ್‌ಬಹದ್ದೂರರಿಗೆ ಸಂದೇಹಕ್ಕೆಡೆಕೊಟ್ಟಿತು. ಇಲ್ಲಿಂದ ಹೊರಡುವಾಗ್ಗೆ ಒಂದುಸಾವಿರ ರೂಪಾಯಿಗಳನ್ನು ಕೈಗೆ ಕೊಟ್ಟಿದ್ದರು;

ಅಷ್ಟು ಹಣ ಆಗಲೇ ಖರ್ಚಾಯಿತೆಂದರೆ ಎರಡು ಕಾರಣದಿಂದ ಆಗಿರಬಹುದು; ತಾನು ನಿರೀಕ್ಷಿಸಿದುದಕ್ಕಿಂತ ಬಹು ಬೇಗನೆ ಮಗನು ಕಾರ್ಯಸಾಧನೆ ಮಾಡಿರಬಹುದು, ಇಲ್ಲವೇ ಯಾರಾದರೂ ದುರಾತ್ಮರ ತಂತ್ರಕ್ಕೆ ಬಲಿಯಾಗಿ ಹಣವನ್ನು ಕಳೆದುಕೊಂಡಿರಬಹುದು. ಮಗನ ಸಾಮರ್ಥ್ಯವನ್ನರಿತಿದ್ದ ತಂದೆಗೆ ಈ ಎರಡನೆಯ ಕಾರಣದ ಸಂಭವ ಹೆಚ್ಚಾಗಿ ಕಂಡಿತು. ತಂತಿಯಲ್ಲಿ ಯಾವ ವಿವರವನ್ನಾಗಲಿ ಕಾರಣವನ್ನಾಗಲಿ ಕೊಡದಿದ್ದುದು ಈ ಸಂದೇಹ ವನ್ನು ಹೆಚ್ಚಿಸಿತು. ಹೇಗಾದರಾಗಲಿ ತಾನೇ ಹೋಗಿ ಒಮ್ಮೆ ನೋಡಿ ಬರುವುದು ಲೇಸೆಂದು ರಾವ್‌ಬಹದ್ದೂರರು ಕಾರಿನಲ್ಲಿ ಬಂಗಾರ ಪೇಟೆಗೆ ಹೊರಟರು.

ತಂದೆಯನ್ನು ಕಂಡು ಸ್ವಾಮಿಯ ಜೀವ ಒಡೆಯಾಯಿತು. ಅವರು ಸ್ವತಃ ಬಂದುಬಿಡುವರೆಂದು ಅವನೆಣಿಸಿರಲಿಲ್ಲ. ತನ್ನ ಅವಿವೇಕವು ಬಯ ಲಾಯಿತು. ಈಗೇನು ಮಾಡುವುದು? ಯೋಚನೆ ಮಾಡಲು ಬಹಳ ಹೊತ್ತಿಲ್ಲ. ಏನಾಗಿದೆಯೆಂದು ಅವರು ಕೇಳುವುದರೊಳಗಾಗಿ ಏನಾದರೊಂದು ಉತ್ತರ ಸಿದ್ಧವಾಗಿರಬೇಕು. ಇಂಥ ಸಮಯಗಳಲ್ಲಿ ಕೆಲವರ ಬುದ್ಧಿ ಬಹು ಚುರುಕಾಗಿ ಓಡುತ್ತದೆ. ಸ್ವಾಭಾವಿಕವಾಗಿ ಜಡವಾಗಿದ್ದ ಸ್ವಾಮಿಯ ಮೆದುಳು ಈಗ ಅವನ ಕೈ ಬಿಡಲಿಲ್ಲ; ಹೊಟ್ಟೆ ನೋವನ್ನು ಅಭಿನಯಿಸುವಂತೆ ಬೋಧೆ ಮಾಡಿತು. ತಾಳಲಾರದ ಹೊಟ್ಟೆ ನೋವಿನಿಂದ ತಾನು ಬಾಧೆಪಡುತ್ತಿದ್ದ ಕಾಲದಲ್ಲಿ ತನ್ನ ಹಣದ ಚೀಲವನ್ನು ಎಲ್ಲಿಯೋ ಕಳೆದುಕೊಂಡೆನೆಂಬ ತಿಳಿವಳಿಕೆಯೂ ಮನಸ್ಸಿನಲ್ಲಿ ಮೂಡಿತು.

ಮಗನು ಹೇಳಿದ ಕಾರಣವು ಸಮಂಜಸವಾಗಿ ತಂದೆಗೆ ತೋರಿತೋ ಇಲ್ಲವೊ ಅವನು ಅದನ್ನು ಹೆಚ್ಚಾಗಿ ಪ್ರಶ್ನಿಸಲಿಲ್ಲ. ಅನುಭವಿಯಾದ ಆತನಿಗೆ ನಿಜವಾದ ಕಾರಣ ಹೊಳೆದಿದ್ದರೂ ಆಶ್ಚರ್ಯವಲ್ಲ. ಅದನ್ನು ಸ್ಪಷ್ಟಗೊಳಿಸಿ ಮಗನನ್ನು ಖಿನ್ನನಾಗಿ ಮಾಡಬಾರದೆಂಬ ಲೌಕಿಕದಿಂದಲೋ ಏನೋ ಇನ್ನು ಹೆಚ್ಚು ಚರ್ಚೆಗೆ ಹೋಗದೆ ಅವನು ಹೇಳಿದ ಕಾರಣವನ್ನು ತಾನು ನಂಬಿದಂತೆ ತೋರಿಸಿಕೊಂಡ. ಹಿರಿಯರು ತಮ್ಮ ಹಿರಿತನವನ್ನು ಉಳಿಸಿಕೊಳ್ಳಬೇಕಾದರೆ ಒಮ್ಮೊಮ್ಮೆ ಇಂಥ ಪ್ರಸಂಗಗಳಲ್ಲಿ ಸಿಕ್ಕಬೇಕಾಗುತ್ತದೆ.

ಬೆಂಗಳೂರಿಗೆ ಮಗನನ್ನು ಕರೆತಂದು ಡಾಕ್ಟರನ್ನು ಕರೆಸಿ ಪರೀಕ್ಷೆ ಮಾಡಿಸಿದಾಗಲೂ ರಾವ್‌ಬಹದ್ದೂರರು ಇದೇ ಲೌಕಿಕವನ್ನೇ ತೋರಿಸಿದರು. ಮಗನು ಡಾಕ್ಟರ ಮುಂದೆ ತನ್ನ ಅಂತರಂಗವನ್ನು ಧಾರಾಳವಾಗಿ ಹೇಳಿ ಕೊಳ್ಳಲು ಅವಕಾಶ ಮಾಡುವುದಕ್ಕಾಗಿ ತಾವು ಯಾವುದೋ ನೆಪವಿಟ್ಟು ಕೊಂಡು ಒಳಕ್ಕೆ ಹೋದರು. ಅವರು ಹಿಂತಿರುಗಿ ಬರುವ ವೇಳೆಗೆ ಡಾಕ್ಟರ ಪರೀಕ್ಷೆ ಮುಗಿದಿತ್ತು; ಸ್ವಾಮಿಗೆ ಆಹಾರ ದೋಷದಿಂದ ಹೊಟ್ಟೆನೋವು ಬಂದಿರುವುದಾಗಿಯೂ ಕೆಲವು ಪೆನ್ಸಿಲಿನ್ ಇಂಜಕ್ಷನ್ನುಗಳನ್ನು ಕೊಟ್ಟರೆ ಗುಣವಾಗಿಬಿಡುವುದೆಂದೂ ಡಾಕ್ಟರು ಹೇಳಿದರು. ಬಹಳ ಬುದ್ಧಿವಂತಿಕೆಯಿಂದ ತಾನು ಒಂದು ದೊಡ್ಡ ಗಂಡಾಂತರದಿಂದ ಪಾರಾದೆನೆಂದು ಸ್ವಾಮಿಯು ಭಾವಿ ಸಿದ—ತನ್ನ ವ್ಯಾಧಿ ಯಾವುದೆಂದು ತನ್ನ ತಂದೆಗೆ ತಿಳಿಯಲಿಲ್ಲವೆಂದು ಅವನ ಕಲ್ಪನೆ. ಆದರೆ ಅವನು ಡಾಕ್ಟರ ಕಾಲನ್ನು ಹಿಡಿದು ಕೇಳಿಕೊಂಡುದನ್ನು ರಾವ್‌ಸಾಹೇಬರು ಒಳಗಿನ ಕೋಣೆಯಿಂದಲೇ ನೋಡಿದ್ದರು.

— ೩೦ —

ದಿನಗಳು ಕ್ಷಣಗಳಂತೆ ಉರುಳುತ್ತಿದ್ದುವು. ಮನೆ ಕೆಲಸದಲ್ಲಿ ತೊಡಗಿದ್ದ ವಸಂತಾದೇವಿಗೆ ಹೊತ್ತೇ ಸಾಲುತ್ತಿರಲಿಲ್ಲ. ಹೊಸ ಹೊಸ ತೆರದ ತಿಂಡಿಗಳನ್ನು ಮಾಡಲು ಕಲಿಯಬೇಕು; ಅವನ್ನು ಮಾಡುವ ವಿಧಾನವು ಇಂದಿರೆಗೆ ತಿಳಿಯ ದಿದ್ದರೆ ಬೇರೆ ಹೆಂಗಸರಿಂದ ಕೇಳಿ ತಿಳಿದುಕೊಳ್ಳಬೇಕು; ಹಾಗೆ ತಿಳಿದು ಕೊಂಡುದನ್ನು ಪ್ರಯೋಗಮಾಡಿ ನೋಡಬೇಕು. ತಾವು ವಾಸಿಸುತ್ತಿದ್ದ ಕೇರಿಯಲ್ಲಿ ತಮಿಳರೇ ಹೆಚ್ಚಾಗಿದ್ದರು, ಅವರಿಂದ ಇಡ್ಲಿ ವಡೆಗಳನ್ನು ಮಾಡಲು ಕಲಿತಳು. ಈ ತಮಿಳು ಜನರ ನಡುವೆ ಒಂದು ಮಾರ್ವಾಡಿ ಸಂಸಾರ. ಆ ಮಾರ್ವಾಡಿಗಿತ್ತಿಯ ಪರಿಚಯ ಮಾಡಿಕೊಂಡು ಅವರಿಂದ ಉತ್ತರ ದೇಶದ ಸಿಹಿ ತಿಂಡಿಗಳನ್ನು ಮಾಡಲು ತಿಳಿದುಕೊಂಡಳು. ಕಾಲೇಜಿನಲ್ಲಿ ತಾನು ವಿವಿಧ ಶಾಸ್ತ್ರಗಳನ್ನು ಓದುವಾಗ ಯಾವ ಉತ್ಸಾಹ ಶ್ರದ್ಧೆಗಳಿದ್ದುವೋ ಅವಕ್ಕೆ ಮಿಗಿಲಾದ ಉತ್ಸಾಹ ಶ್ರದ್ಧೆಗಳು ಇಲ್ಲಿ ಕಾಣತ್ತಿದ್ದುವು. ಆ ಶಾಸ್ತ್ರಗಳ ಅಧ್ಯಯನದ ಫಲವನ್ನು ಕಾಣುತ್ತಿದ್ದುದು ಪರೀಕ್ಷೆಯಲ್ಲಿ ಪಡೆವ ಅಂಕಗಳಲ್ಲಿ; ಇಲ್ಲಿನ ಅಧ್ಯಯನ ಫಲ ಅದಕ್ಕಿಂತ ಅತಿಕ್ಷಿಪ್ರವಾದುದು, ಅತ್ಯಂತ ರುಚಿಕರ

ವಾದುದು. ತಾನು ಇಲ್ಲಿರುವ ಒಂದು ತಿಂಗಳೊಳಗಾಗಿ ಆದಷ್ಟು ಹೆಚ್ಚು ಪದಾರ್ಥಗಳ ತಯಾರಿಯನ್ನು ತಿಳಿಯಬೇಕೆಂದು ವಸಂತಾದೇವಿ ತವಕಿಸುತ್ತಿದ್ದಳು.

ದಿನಕ್ಕೊಂದು ಬಗೆಯ ಹೊಸ ಅಡಿಗೆ ಹೊಸ ತಿಂಡಿಯನ್ನು ಕಾಣುತ್ತಿದ್ದ ನಟೇಶನಿಗೆ ತನ್ನ ಹೆಂಡತಿಯ ಜಾಣ್ಮೆಯನ್ನು ಕಂಡು ಅಚ್ಚರಿಯೂ ಹೆಮ್ಮೆಯೂ ಉಂಟಾಗಿದ್ದುವು. ಓದಿದ ಹುಡುಗಿಯರಿಗೆ ಅಡಿಗೆ ಬಾರದೆಂಬ ಭಾವನೆ ಅವನಲ್ಲಿತ್ತು; ವಸಂತಾದೇವಿ ಆ ಭಾವನೆಯನ್ನು ಸುಳ್ಳು ಮಾಡಿದ್ದಳು. ಅವಳ ವಿಷಯವನ್ನು ಕುರಿತು ಯೋಚಿಸಿದಾಗಲೆಲ್ಲ ಒಂದು ಸಮಸ್ಯೆ ಅವನನ್ನು ಬಾಧಿಸುತ್ತಿತ್ತು. ಇಂಥ ಹೆಣ್ಣು ತನ್ನನ್ನು ಏಕೆ ಮದುವೆಯಾದಳು? ಬ್ರಹ್ಮ ಸಂಘಟನೆಯೆಂಬ ಮಾತು ನಿಜ; ಯಾವುದೋ ಪೂರ್ವಪುಣ್ಯ ವಿಶೇಷದಿಂದ ಇವಳು ತನಗೆ ಹೆಂಡತಿಯಾಗಿ ಬಂದಳು; ತನಗೆ ಮರಣದಂಡನೆಯಾದುದೇ ಈ ಸಂಬಂಧಕ್ಕೆ ಮೂಲವೋ ಏನೋ; ಹಾಗಿದ್ದರೆ ದಿನವೊಂದಕ್ಕೆ ಹತ್ತುಸಲ ತನಗೆ ಮರಣದಂಡನೆಯಾದರೂ ಚಿಂತೆಯಿಲ್ಲ. ಇದಕ್ಕೇ ವಿಧಿಯೆನ್ನುವುದು. ಶೂಲವನ್ನೇರುವ ಸನ್ನಾಹದಲ್ಲಿದ್ದ ತನ್ನನ್ನು ಮದುವಣಿಗನನ್ನಾಗಿಮಾಡಿ ಇಂಥ ಅಪ್ಸರೆಯನ್ನು ಚತುರೆಯನ್ನು ತನ್ನ ಕೈಯಲ್ಲಿರಿಸಿತು.

ಹೆಂಡತಿಯ ಮೆಚ್ಚಿಕೆಯಲ್ಲಿ ಅವಳನ್ನು ಒಲಿಸುವ ಪ್ರಯತ್ನವೂ ನಡೆದಿತು. ವಾರದ ಕೂಲಿಯು ಬಂದೊಡನೆ ಅರ್ಧವನ್ನು ಮನೆಯ ಖರ್ಚಿಗೆಂದು ಕೊಟ್ಟು ಉಳಿದರ್ಧ ಹಣದಲ್ಲಿ ಒಂದು ತೆಳುವಾದ ನಕಲಿ ರೇಷ್ಮೆಯ ಸೀರೆ ಅದಕ್ಕೊಪ್ಪುವ ಕುಪ್ಪುಸದ ಬಟ್ಟೆಯನ್ನು ತಂದುಕೊಟ್ಟ. ವಸಂತಳ ಶ್ರೀಮಂತಿಕೆಯ ದೃಷ್ಟಿಯಲ್ಲಿ ಅದೊಂದು ನಾರುಮಡಿ, ವನವಾಸದಲ್ಲಿರುವವರಿಗೆ ಯೋಗ್ಯವಾದುದು. ಆದರೆ ಇಂದು ಅದೇ ವಸ್ತುವನ್ನು ಬೇರೆ ದೃಷ್ಟಿಯಿಂದ ನೋಡಲು ಅವಳು ಪ್ರಯತ್ನಿಸುತ್ತಿದ್ದಳು. ಅದನ್ನು ತಂದುಕೊಡೆಂದು ತಾನೇನೂ ನಟೇಶನನ್ನು ಕೇಳಲಿಲ್ಲ, ಆದರೂ ತಂದನೇಕೆ? ಒಂದು ವಾರವೆಲ್ಲ ದುಡಿದ ಹಣವನ್ನು ಅದಕ್ಕಾಗಿ ಸುರಿದನೇಕೆ? ಸೀರೆಯನ್ನು ನೋಡಿ ಇಂದಿರೆಯು ಹಿಗ್ಗಿದಳು; ಕೇರಿಯ ಹೆಂಗಸರು ಬಹು ಚೆನ್ನಾಗಿಗೆಯೆಂದು ಪ್ರಶಂಸೆ ಮಾಡಿದರು; ಒಬ್ಬಿಬ್ಬರು ಪಟ್ಟಣದ ಹೆಣ್ಣಿಗೆ ಒಪ್ಪುವ ಸೀರೆಯೆಂದು ಅಣಕವಾಡಿದರು; ಎಂದಮೇಲೆ ಸೀರೆ ಅವರೆಲ್ಲರಿಗೂ ಚೆನ್ನಾಗಿಯೇ ಕಂಡಿರ

ಬೇಕು. ಹೀಗೆ ಚೆನ್ನಾಗಿದೆ ಎನಿಸಿಕೊಳ್ಳುವ ವಸ್ತುವನ್ನು ತಂದುಕೊಟ್ಟಿರುವ ಮನಸ್ಸಿನಲ್ಲಿ ಯಾವ ಭಾವನೆ ಇದ್ದೀತು?

ವಸಂತಾದೇವಿಯ ಕೆನ್ನೆ ನಸುಕೆಂಪಾಯಿತು; ಅತ್ತಿತ್ತ ನೋಡಿ ಯಾರೂ ಇಲ್ಲದುದನ್ನು ಕಂಡು ಸಮಾಧಾನ ತಂದುಕೊಂಡಳು. ತನ್ನ ಮನಸ್ಸು ಕ್ರಮೇಣ ಅವನ ಕಡೆಗೆ ವಾಲುತ್ತಿದೆಯೆಂದು ಅವಳಿಗೆ ತೋರಿತು. ಹಿಂದೆಯೇ ವಿವೇಕ ಅವಳನ್ನೆಚ್ಚರಿಸಿತು; ನಟೇಶನೊಬ್ಬ ಕೂಲಿಗಾರ, ದರಿದ್ರ, ನಿರಕ್ಷರ ಕುಕ್ಷಿ, ಜೋಕೆ ಎಂದು ನೆನಪುಕೊಟ್ಟಿತು. ಕಾಣದೆ ಒಮ್ಮೆ ಎಡವಿದ್ದಾಯಿತು. ಈಗ ಕಂಡುಕಂಡೂ ಕೆಳಗೆ ಬಿದ್ದರೆ ನಾಚಿಕೆಗೇಡಾದೀತು! ತಾನೆಲ್ಲಿ, ಅವನೆಲ್ಲಿ! ಅಜಗಜಾಂತರ.

ಯೋಚನೆಯಿಂದ ಆಗಾಗ್ಗೆ ಭಾರವಾಗುತ್ತಿದ್ದ ಮನಸ್ಸು ಇಂದಿರೆಯ ಸಹವಾಸದಿಂದ ನಿಷ್ಕಪಟವಾದ ಸರಳವಾದ ಮೈತ್ರಿಯಿಂದ ಹಗುರವಾಗುತ್ತಿತ್ತು.

ಗಂಡನ ಮನೆಗೆ ಬಂದ ಮೊದಲನೆಯವಾರ ಇದ್ದ ಅಳುಕು, ಪರಕೀಯತೆ ಎರಡನೆಯ ವಾರದಲ್ಲಿ ಮರೆಯಾಗಿದ್ದಿತು. ಕೆಲಸ ಮಾಡುವುದರಲ್ಲಿ ಮಾತ ನಾಡುವುದರಲ್ಲಿ ಸ್ಥೈರ್ಯ ಬಂದಿತ್ತು, ಇದು ತನ್ನ ಮನೆ ಇದಕ್ಕೆ ಯಜಮಾನಿ ಎಂಬ ಆತ್ಮೀಯತೆ ಮೂಡುತ್ತಿತ್ತು; ತಾನಿರುವ ಒಂದು ತಿಂಗಳಿಗಾಗಿ ಇಷ್ಟೆಲ್ಲ ವಿಶ್ವಾಸ ತನಗೇಕೆಂದು ಒಮ್ಮೊಮ್ಮೆ ಯೋಚಿಸುವಳು. ಆದರೆ ಅವಳರಿಯದ ಅವಳು ನಿವಾರಿಸಲಾರದ ಯಾವುದೋ ಶಕ್ತಿಯು ಅಂಥ ಆತ್ಮೀಯತೆಯನ್ನು ಅವಳ ಮನಸಿನಲ್ಲಿ ಹುಟ್ಟಿಸಿ ಬೆಳಸುತ್ತಿತ್ತು. ಈ ಎರಡು ವಾರಗಳೂ ಅವಳು ವಿದ್ಯಾರ್ಥಿಯಾಗಿಯೇ ಇದ್ದಳು; ಗೃಹಕಾರ್ಯ ನಿರ್ವಾಹದಲ್ಲಿ ವಿರಾಮವಿಲ್ಲದೆ ಹೊಸಹೊಸ ವಿಷಯಗಳನ್ನು ಕಲಿಯುತ್ತಿದ್ದಳು. ಮೂರನೆಯ ವಾರದ ವೇಳೆಗೆ ವಸಂತಾದೇವಿಯ ವಿದ್ಯಾಭ್ಯಾಸ ತಕ್ಕಷ್ಟು ಸಮರ್ಪಕವಾಗಿ ನಡೆದಿತ್ತು; ಎಂಥ ಸಂದರ್ಭಗಳೊದಗಿದರೂ ತಾನು ಯಾರ ಸಹಾಯವೂ ಇಲ್ಲದೆ ಸಂಸಾರ ವನ್ನು ನಡೆಸಬಲ್ಲೆನೆಂಬ ನಂಬಿಕೆಯು ಅವಳಲ್ಲಿ ಉಂಟಾಗಿತ್ತು. ಈ ನಂಬಿಕೆ ಯೊಡನೆ ತನ್ನ ಸಂಸಾರ ಜೀವನದಲ್ಲಿ ಎರಡು ವಾರಗಳು ಸುಸೂತ್ರವಾಗಿ ಕಳೆದು ಮೂರನೆಯವಾರ ನಡೆಯುತ್ತಿದೆಯೆಂದೂ ಹೀಗೆಯೇ ಇನ್ನೊಂದುವಾರ ಕಳೆದರೆ ತನ್ನ ಆಸ್ತಿಯು ತನ್ನ ಕೈಗೆ ಸಿಕ್ಕಿಬಿಡುವುದೆಂದೂ ಲೆಕ್ಕ ಹಾಕಿದಾಗ ಅವಳ ಹೃದಯವು ಸಮಾಧಾನದಿಂದ ತುಂಬಿ ಹೋಗುತ್ತಿತ್ತು.

ಮನಸ್ಸು ಹರ್ಷಿತವಾಗಿದ್ದ ಈ ವಾರದಲ್ಲಿ ಕೆಲವು ಆಮೋದ ವಿನೋದ ಗಳೂ ಅವರ ಕೇರಿಯಲ್ಲಿ ನಡೆದುವು. ಅವುಗಳನ್ನು ನಡೆಸಿದ ಜನರು ವಸಂತಾ ದೇವಿಗೆ ಗಣ್ಯವಾದ ಸ್ಥಾನವನ್ನು ಕೊಟ್ಟಿದ್ದರು. ಒಂದು ರಾತ್ರಿ ಇವರ ಮನೆಯ ಮುಂವಿದ್ದ ಬಯಲಿನಲ್ಲೇ ಕೆಲವು ಹುಡುಗರು ಕೋಲಾಟದ ಪದಗಳನ್ನು ಹಾಡುತ್ತ ಕುಣಿಯುತ್ತ ಕೋಲು ಹಾಕಿದರು; ಹಾಗೆ ಹಾಡು ವಾಗ ವಸಂತಾದೇವಿಯ ಹೆಸರನ್ನು ಪದದಲ್ಲಿ ಸೇರಿಸಿ ಹರಕೆ ಹೊತ್ತಿದ್ದರು.

ಮತ್ತೊಂದು ರಾತ್ರಿ ಬಯಲು ನಾಟಕದ ಪ್ರದರ್ಶನ ನಡೆಯಿತು. ಬಯಲು ನಾಟಕವೆಂಬ ಮಾತೇ ವಸಂತಾದೇವಿಗೆ ವಿಚಿತ್ರವಾಗಿ ತೋರಿತು. ಪ್ರದರ್ಶನಕ್ಕಾಗಿ ಹಾಕಿದ್ದ ಅಟ್ಟದ ಮುಂದುಗಡೆ ಅಗಸರ ಮನೆಯ ಒಂದು ಬಟ್ಟೆಯನ್ನು ಹಾಸಿ ಅದರ ಮೇಲೆ ವಸಂತಾದೇವಿಯನ್ನು ಕುಳ್ಳಿರಿಸಿದ್ದರು; ಗಂಡಸರಕಡೆ ನಟೇಶನು ಕುಳಿತಿದ್ದ. ಇವರ ಹಿಂದೆಮುಂದೆ ಸುತ್ತಮುತ್ತ ಜನರು ತುಂಬಿದ್ದರು. ಪರದೆಯೊಂದು ರಂಗಸ್ಥಳವನ್ನು ಪ್ರೇಕ್ಷಕರಿಂದ ಬೇರೆ ಮಾಡಿತ್ತು; ಆದರೆ ಆ ಪರದೆಯನ್ನೋರೆಮಾಡಿಕೊಂಡು ಪದೇ ಪದೇ ಅವರಿವರು ಓಡಾಡುತ್ತಲೇ ಇದ್ದರು. ರಂಗಸ್ಥಳದ ಅತ್ತಿತ್ತ ಎರಡು ಪೆಟ್ರೋಮ್ಯಾಕ್ಸ್ ದೀಪಗಳು ಆಧುನಿಕತೆಯ ಬಣ್ಣವನ್ನು ಪ್ರದರ್ಶನಕ್ಕೆ ಕೊಟ್ಟಿದ್ದುವು. ನಾಟಕ ಸುಮಾರು ಹನ್ನೊಂದು ಗಂಟೆಯ ವೇಳೆಗೆ ಆರಂಭವಾಯಿತು. ರಂಗಸ್ಥಳದ ಒಂದು ಪಾರ್ಶ್ವದಲ್ಲಿ ವಾದ್ಯಗಾರರು, ಸಂಗೀತಗಾರರು, ಹಿಮ್ಮೇಳದವರು ಇವರ ಒಂದು ಗುಂಪೇ ನಿಂತಿತ್ತು: ಮೊದಲು ಗಣಪತಿ ಪ್ರಾರ್ಥನೆಯಾಯಿತು.

ನಿಟಲಾ ನೇತ್ರನ ಸುತನೆ,<br>
ನಿಗಮಾಗಮ ವೇದಿತನೆ,<br>
ಸ್ಫಟಿಕ ಸನ್ನಿಭ ಕರ್ನಕುಂಡಲ ಧರನೇ ॥ ಗಣವರನೇ ॥

ಎಂದು ಸಂಗೀತಗಾರನು ತಾಳ ಹಾಕುತ್ತ ಹಾಡಿದ; ಅವನು ನಿಲ್ಲಿಸಿದ 'ಗಣ ವರನೇ' ಎಂಬ ಪದವನ್ನು ಮತ್ತೆ ಹಿಡಿದು ಹಿಮ್ಮೇಳದವರು ರಾಗವಾಗಿ ಹಾಡ ತೊಡಗಿದರು. ರಾಗ ಮುಗಿದ ಮೇಲೆ ಮತ್ತೆ ಸಂಗೀತಗಾರನು

ಗಣವರನೆ ನೀನು ಲಾಲಿಸೊ<br>
ನೀನು ಲಾಲಿಸೊ, ವಿಘ್ನರಾಜಾ ॥ ಕೊಡುಮತಿಯಾ ॥

ಎಂದು ಹಾಡಿ ತಧಿತೋ ಝುಣ ಎಂದು ಮುಕ್ತಾಯಕೊಟ್ಟು ಮತ್ತೆ ಇನ್ನೊಂದು ನುಡಿಯನ್ನೆತ್ತಿಕೊಂಡ.

ವಸಂತಾದೇವಿ ಕಾಲೇಜಿನಲ್ಲಿ ಗ್ರೀಕ್ ನಾಟಕಗಳನ್ನು ಕುರಿತು ಓದಿದ್ದಳು. ರೋಮ್ ಚಕ್ರಾಧಿಪತ್ಯವು ಅತಿ ಉನ್ನತ ಸ್ಥಿತಿಯಲ್ಲಿದ್ದಾಗ ನಾಟಕ ಕಲೆಗೆ ಅಲ್ಲಿ ವಿಶೇಷ ಪ್ರಾಮುಖ್ಯತೆ ದೊರೆತಿತ್ತು. ಇಲ್ಲಿ ಇವಳು ಕಾಣುತ್ತಿದ್ದ ಹಳ್ಳಿಯ ಬಯಲುನಾಟಕ ತಾನು ಓದಿದ್ದ ಗ್ರೀಕ್ ನಾಟಕಗಳ ಮಾದರಿಯಂತೆ ಕಂಡಿತು. ಅಲ್ಲಿ ತಾನು ಕಂಡಿದ್ದ 'ಕೋರಸ್' ಸಮೂಹದ ಸ್ಥಾನದಲ್ಲಿ ಇಲ್ಲಿನ ಹಿಮ್ಮೇಳ ದವರು ಇದ್ದರು. ಒಂದು ರೀತಿಯಲ್ಲಿ ಹಿಮ್ಮೇಳದವರ ಪ್ರಾಮುಖ್ಯತೆ ಬಹಳ ವಾದುದು, ಬಹುಮುಖವಾದುದು. ಅವರು ಸಂಗೀತಗಾರನಿಗೆ ಸಹಾಯಕ ರಾಗಿರಬೇಕು ಲಯವರಿತು ತಾಳ ಹಾಕುತ್ತಿರಬೇಕು, ಹೊಸ ಹೊಸ ಪಾತ್ರ ಗಳು ರಂಗಸ್ಥಳದ ಮೇಲೆ ಬಂದಾಗ ಅವರನ್ನು ಮಾತನಾಡಿಸಿ ಅವರು ಯಾರೆಂಬ ಪರಿಚಯವನ್ನು ಪ್ರೇಕ್ಷಕರಿಗೆ ಮಾಡಿಸಿ ಅವರವರ ಅಂತಸ್ತಿ ಗನುಸಾರವಾಗಿ ಪರಾಕು ಹೇಳಬೇಕು. ಪಾತ್ರಗಳು ಸಂತೋಷವನ್ನೋ ದುಃಖವನ್ನೋ ಸೂಚಿಸುವಾಗ ಸಂಗೀತಗಾರನು ಹೇಳುವ ಹಾಡಿಗನುಗುಣ ವಾಗಿ ಅದರ ಭಾವಕ್ಕೆ ಪೋಷಕವಾಗಿ ಮಾತಾಡಬೇಕು ; ಹೀಗೆ ನಾನಾ ರೀತಿ ಅವರಿಂದ ನಾಟಕಕ್ಕೆ ನಾಟಕವನ್ನು ನೋಡುವ ಜನರಿಗೆ ಆವಶ್ಯಕತೆಯಿತ್ತು.

ಬಯಲು ನಾಟಕದಲ್ಲಿ ವಸಂತಾದೇವಿಗೆ ಕಂಡುಬಂದ ಮತ್ತೊಂದು ವಿಶೇಷವೆಂದರೆ ಅದರ ಪ್ರದರ್ಶನದ ಪದ್ಧತಿ. ಗಣಪತಿಯ ವೇಷ ಶಾರದೆಯ ವೇಷ ಮೊದಲುಗೊಂಡು ಪ್ರತಿಯೊಂದು ಪಾತ್ರವೂ ರಂಗಸ್ಥಳವನ್ನು ಪ್ರವೇಶಿಸಿದೊಡನೆಯೇ ಅವರವರ ಶಕ್ತ್ಯನುಸಾರ ಕುಣಿಯಬೇಕು. ನಾಟ ಕವು ನಾಟ್ಯದಿಂದ ರೂಪುಗೊಂಡಿರಬೇಕೆಂದೂ ಆ ಸಂಪ್ರದಾಯವೇ ಬಯಲು ನಾಟಕದಲ್ಲಿರುವುದೆಂದೂ ಪಾತ್ರಗಳ ಮಾತುಗಾರಿಕೆಯಲ್ಲಿ ಅಭಿ ನಯಗಳಲ್ಲಿ ಸಹ ಈ ನಾಟ್ಯ ಮುದ್ರೆಗಳು ಕಾಣುವುವೆಂದೂ ವಸಂತಾದೇವಿ ಗನಿಸಿತು. ನಾಟ್ಯ ಪ್ರಧಾನವಾದುದರಿಂದ ಸಂಗೀತ ಪಾತ್ರಧಾರಿಗಳ ಬಾಯಿಂದ ಬರಲಾರದೆ ಸಂಗೀತಗಾರನ ಸ್ವತ್ತಾಯಿತು ; ಪಾತ್ರಧಾರಿಗಳು ಈಗಿನ ಸಿನಿಮಾ ತಾರೆಗಳಂತೆ ಕೇವಲ ಬಾಯಾಡಿಸುವ ವ್ಯಕ್ತಿಗಳಾದರು.

ಪಾತ್ರಗಳ ಭಾಷೆ, ವೇಷ, ಅಭಿನಯಗಳು ಒರಟಾಗಿದ್ದುದು ನಿಜ; ಆದರೆ ಅವುಗಳ ಹಿಂದೆ ಬಹು ಪ್ರಾಚೀನವಾದ ಸಂಸ್ಕೃತಿಯೊಂದಿದೆಯೆಂಬ ಅನುಭವವು ವಸಂತಾದೇವಿಗಾಯಿತು. ನಟೇಶನೊಡನೆ ತಾನು ಈ ಮೂರು ವಾರಗಳು ನಡೆಸಿದ ಜೀವನವು ಎಷ್ಟು ಆಡಂಬರ ರಹಿತವಾದುದಾಗಿ ಸುಲಭವಾಗಿ ಕಂಡಿತೋ ಇಲ್ಲಿನ ಜನರ ಆಮೋದ ವಿನೋದಗಳು ಸಹ ಅಷ್ಟೇ ಸುಲಭವಾಗಿದ್ದುವು.

ಏನಾದರೇನು ಅವು ಅಲ್ಲಿಯ ಜನರಿಗೆ ಸರಿ; ಅವರ ಅಂತಸ್ತಿಗೆ, ಸ್ಥಿತಿಗೆ, ಬುದ್ಧಿ ಶಕ್ತಿಗೆ ತಕ್ಕ ಸೌಕರ್ಯಗಳನ್ನವರು ಮಾಡಿಕೊಂಡಿದ್ದಾರೆ. ಶ್ರೀಮಂತರಾದ, ವಿದ್ಯಾವಂತರಾದ, ನಾಗರಿಕರಾದ ತನ್ನಂಥವರು ಇಷ್ಟವಿದ್ದರೆ ಉತ್ತೇಜನ ಕೊಡಬಹುದು, ಮೆಚ್ಚಬಹುದು, ಸಹಾಯಮಾಡಬಹುದು.

— ೩೧ —

ವಸಂತಾದೇವಿಯು ದಿನಗಳನ್ನೆಣಿಸುತ್ತಿದ್ದಳು. ಇನ್ನೆಂಟು ದಿನ, ಎಂಟೇ ದಿನ ತನಗೆ ಈ ವನವಾಸ; ಅಲ್ಲಿಂದಾಚೆಗೆ ಬೇಕಿದ್ದರೆ ಒಂದೆರಡು ದಿನ ಇರಬಹುದು, ಇಲ್ಲವೆ ಹೊರಟುಬಿಡಬಹುದು. ತಾನು ಅಲ್ಲಿ ಒಂದು ತಿಂಗಳ ಪೂರ್ತಿ ಇದ್ದ ದಾಖಲೆಯನ್ನು ಒದಗಿಸಲು ವೆಂಕಟಾಚಲಯ್ಯನು ಇದ್ದೇ ಇದಾನೆ.

ಬಿಡುಗಡೆಯ ನಿರೀಕ್ಷೆಯಲ್ಲಿ ಅವಳು ಮುಂದಿನ ಆಗುಹೋಗುಗಳನ್ನು ಗುಣಾಕಾರ ಹಾಕತೊಡಗಿದಳು. ತನ್ನ ಮೊಟ್ಟಮೊದಲನೆಯ ಕೆಲಸ ಆಸ್ತಿಯನ್ನು ಟ್ರಸ್ಟಿಗಳಿಂದ ತಪ್ಪಿಸಿ ತನ್ನ ಕೈಗೆ ತೆಗೆದುಕೊಳ್ಳುವುದು. ಆ ಕೆಲಸದಲ್ಲಿ ಅವರು ಏನೇನು ಆತಂಕಗಳನ್ನು ತಂದೊಡ್ಡಬಹುದು, ಅವನ್ನು ನಿವಾರಿಸುವ ಬಗೆ ಹೇಗೆ ಎಂಬ ಯೋಚನೆಯು ಸದಾ ಅವಳ ತಲೆಯಲ್ಲಿ ಕೆಲಸಮಾಡತೊಡಗಿತ್ತು. ಆಸ್ತಿ ಕೈಗೆ ಬಂದಮೇಲೆ ತನ್ನ ಮದುವೆಯನ್ನು—ಅಸಹಜವಾದ ಈ ಸಂಬಂಧವನ್ನು—ಕೊನೆಗಾಣಿಸಬೇಕು; ಗಂಡತನದಿಂದ ನಟೇಶನನ್ನು ದೂರಮಾಡಿದರೂ ಅವನ ಜೀವನಕ್ಕೆ ಇಂದಿರೆಯ ಮದುವೆಗೆ ಏನಾದರೂ ಏರ್ಪಾಡು ಮಾಡುವುದು ತನ್ನ ಧರ್ಮ; ತನ್ನನ್ನು ಈ ಒಂದು ತಿಂಗಳಕಾಲ ಬಹಳ ವಿಶ್ವಾಸದಿಂದ ಅವರು ನೋಡಿಕೊಂಡಿದಾರೆ; ನಟೇಶ ತನ,

ವಿಷಯದಲ್ಲಿ ಬಹಳ ಗೌರವದಿಂದ ನಡೆದುಕೊಂಡಿದ್ದಾನೆ; ಇದಕ್ಕೆಲ್ಲ ತಕ್ಕ ಪ್ರತ್ಯುಪಕಾರ ಮಾಡುವುದು ತನ್ನ ಕರ್ತವ್ಯ.

ಹೀಗೆಲ್ಲ ಯೋಚಿಸುತ್ತ ವಸಂತಾದೇವಿಯು ಉಲ್ಲಾಸದಿಂದ ಬೆಳಗ್ಗೆ ಕೆಲವು ಸಾಮಾನು ತರುವುದಕ್ಕೆಂದು ಅಂಗಡಿ ಬೀದಿಗೆ ಹೋದಳು. ಮೂರು ವಾರಗಳು ಅದೇ ಬೀದಿಯಲ್ಲಿ ಪ್ರತಿದಿನವೂ ಒಮ್ಮೆಯಾದರೂ ಅವಳನ್ನು ನೋಡಿದ್ದರೂ ಸಹ ದಣಿಯದೆ ಜನರು ಅವಳ ಕಡೆಗೇ ನೋಡುತ್ತಿದ್ದರು. ಆದರೆ ಆ ನೋಟದಿಂದ ಅವಳಿಗೆ ಮೊದಲಿನ ಆ ಅಸಮಾಧಾನವಾಗುತ್ತಿರಲಿಲ್ಲ; ಬದಲಾಗಿ ತನ್ನ ರೂಪ ಅವರ ದೃಷ್ಟಿಯನ್ನಿತ್ತ ಸೆಳೆಯುತ್ತಿದೆಯೆಂಬ ಆತ್ಮಾಭಿಮಾನ ಉಕ್ಕಿ ಮುಗುಳುನಗೆಯಲ್ಲಿ ಹೊರಸೂಸುತ್ತಿತ್ತು.

ಆ ದಿನ ವ್ಯಾಪಾರಕ್ಕೆ ಬಂದವಳು ಹಣ್ಣಿನ ಅಂಗಡಿಯ ಮುಂದೆ ನಿಂತು ಕಿತ್ತಲೆಹಣ್ಣಿನ ಬೆಲೆ ಕೇಳುತ್ತಿದ್ದಳು; ಹಿಂದಿನಿಂದ 'ಅತ್ತೆ, ಅತ್ತೆ' ಎಂದು ಮಗುವು ಹೇಳಿದಂತೆ ಕೇಳಿಸಿತು; ಹಿಂತಿರುಗಿ ನೋಡಿದಳು, ಬೀದಿಯ ಆಚೆಯ ಪಕ್ಕದಲ್ಲಿದ್ದ ಅಂಗಡಿಯ ಬಳಿ ಮೀನಾಕ್ಷಿಯ ಮಗು ತನ್ನ ತಾಯಿಗೆ ಇವಳನ್ನು ತೋರಿಸುತ್ತಿತ್ತು. ಮೊದಲು ದಿನ ತಾನು ಕರೆದರೆ ಬರದೆ ಮುಖ ತಿರುಗಿಸಿಕೊಂಡ ಮಗು ಈಗ ತಾನು ನೋಡದೆಯೇ ತನ್ನನ್ನು 'ಅತ್ತೆ' ಎಂದು ಕರೆಯುವಷ್ಟು ಸಲಿಗೆಯಾಗಿತ್ತು. ಮಗುವಿನ ಮುದ್ದು ದನಿಯನ್ನು ನಗು ಮುಖವನ್ನು ಕಂಡು ಸಂತಸಗೊಂಡ ವಸಂತಾದೇವಿ ಒಂದು ಕಿತ್ತಲೆ ಹಣ್ಣನ್ನು ಅದಕ್ಕೆ ತೋರಿಸುತ್ತಾ 'ಬಾ ಪುಟ್ಟ, ಹಣ್ಣು ಕೊಡುತೀನಿ ಬಾಮ್ಮ' ಎಂದು ಕರೆದಳು.

ಹಣ್ಣಿನಾಸೆಗೆ ಮಗು ತನ್ನ ತಾಯಿಯ ಕೈಯನ್ನು ಬಿಟ್ಟು ಒಂದೇ ಓಟದಲ್ಲಿ ಅತ್ತೆಯ ಕಡೆಗೆ ಓಡಿಬಂತು. ವಸಂತಾದೇವಿಯು 'ಓಡಬೇಡ, ಅಲ್ಲೇ ನಿಲ್ಲು, ಅಲ್ಲೇ ನಿಲ್ಲು' ಎಂದು ಕೂಗಿಕೊಂಡಳು. ಮೀನಾಕ್ಷಿ 'ಅಯ್ಯೋ' ಎಂದು ಆರ್ತ ಧ್ವನಿಯಿಂದ ಕಿರಿಚಿಕೊಂಡಳು. ಅಂಗಡಿಗಳ ಬಳಿಯಿದ್ದ ಜನರು 'ಹೋ, ಹೋ' ಎಂದು ಕೂಗಿದರು; ಇದಾವ ಶಬ್ದದಿಂದಲೂ ಹಿಂದೆಗೆಯದೆ ಮಗುವು ಬೀದಿಯನ್ನು ದಾಟುತ್ತಲೇ ಇತ್ತು. ಮೇಲಿಂದ ವೇಗವಾಗಿ

ಬರುತ್ತಿದ್ದ ಒಂದು ಲಾರಿಯು ಈ ಕೂಗಾಟ ಚೀರಾಟಗಳಿಂದಲೋ ಎಂಬಂತೆ ಅತ್ತಿತ್ತ ಅರೆಕ್ಷಣ ತೂಗಾಡಿ ಭಯಂಕರವಾಗಿ ಶಬ್ದಮಾಡುತ್ತ ಮಗುವನ್ನು ಹತ್ತು ಗಜ ದೂರಕ್ಕೆ ಪುಟಚೆಂಡಿನಂತೆ ಎಸೆದು ತನ್ನ ಕರ್ತವ್ಯ ಮುಗಿಯಿ ತೆಂಬಂತೆ ನಿಂತುಬಿಟ್ಟಿತು.

ಮೀನಾಕ್ಷಿ ನಿಟ್ಟಿಲ್ಲದವಳಂತೆ ಓಡಿಬಂದು ಮಗುವನ್ನು ಎತ್ತಿಕೊಂಡಳು. ಮಗುವಿಗೆ ಪ್ರಜ್ಞೆ ತಪ್ಪಿತ್ತು; ಅಂಗಾಂಗವೆಲ್ಲವೂ ರಕ್ತಮಯವಾಗಿತ್ತು. ಬೀದಿ ಯಲ್ಲಿದ್ದ ಜನ–ಗಂಡಸರು ಹೆಂಗಸರು–ಅವರನ್ನು ಮುತ್ತಿಕೊಂಡರು. 'ಲಾರಿ ಯನ್ನು ಬಿಡಬೇಡಿ, ಅವನನ್ನು ಹಿಡಿದುಕೊಳ್ಳಿ', 'ಮೊದಲು ಲಾರಿ ನಂಬರು ಗುರುತು ಹಾಕಿಕೊಳ್ಳಿ', 'ಪೋಲೀಸಿಗೆ ಆ ಬದ್ಮಾಷನನ್ನ ಹಿಡಿದುಕೊಡಿ, ಅವ ನಿಗೆ ತಕ್ಕ ಬುದ್ಧಿ ಕಲಿಸಬೇಕು', 'ಅವನ ಮುಖ ಏನು ನೋಡುತೀರೋ, ಹಾಕಿರೋ ನಾಲ್ಕು ಒದೆ', 'ಅನ್ಯಾಯವಾಗಿ ಮಗುವಿನ ಪ್ರಾಣ ತೆಗೆದುಬಿಟ್ಟ ನಲ್ಲಾ, ಚಂಡಾಲ', 'ಈ ಜನಗಳಿಗೆ ಕೈಯಲ್ಲಿ ಮೋಟಾರು ಚಕ್ರ ಬಂದು ಬಿಟ್ಟರೆ ಪ್ರಪಂಚವೇ ಕಣ್ಣಿಗೆ ಕಾಣುವುದಿಲ್ಲ. ಇಂಥವರನ್ನು ಗಲ್ಲಿಗೆ ಹಾಕ ಬೇಕು' ಹೀಗೆ ಒಬ್ಬೊಬ್ಬರೂ ತಮತಮಗೆ ತೋರಿದಂತೆ ತಮ್ಮ ಕೋಪವನ್ನು ತೀರಿಸಿಕೊಳ್ಳುತ್ತಿದ್ದರು.

ಪ್ರಪಂಚವೇ ಶೂನ್ಯವಾದಂತೆ ಮೀನಾಕ್ಷಿಗೆ ತೋರುತ್ತಿತ್ತು. ಹಸುಳೆ ಯನ್ನು ತೊಡೆಯಮೇಲೆ ಮಲಗಿಸಿಕೊಂಡು ರಾಗರಾಗವಾಗಿ ಅಳುತ್ತ ಎದೆ ಚಚ್ಚಿಕೊಳ್ಳುತ್ತಿದ್ದಳು. ಗಂಡಸರ ಕೋಪ ಲಾರಿ ನಡೆಸುವವನ ಮೇಲೆ ಬಿದ್ದಂತೆ ಹೆಂಗಸರ ಕೋಪ ವಸಂತಾದೇವಿಯ ಮೇಲೆ ಬಿದ್ದಿತ್ತು. ತಮ್ಮದೇ ಆದ ಸ್ವಚ್ಛ ಭಾಷೆಯಲ್ಲಿ ಅವಳಿಗೆ ಸಹಸ್ರನಾಮಗಳಾಗಲು ಆರಂಭವಾಯಿತು. ಮಗುವಿಗೆ ಮೃತ್ಯು ಸ್ವರೂಪಳಾಗಿ ಅವಳು ಅಲ್ಲಿಗೆ ಬಂದಿದ್ದಳು; ಅವಳು ತಮ್ಮ ಕೇರಿಗೆ ಬಂದ ದಿನವೇ ತಿಳಿದಿತ್ತು ಅವಳು ಯಾರನ್ನಾದರೂ ಆಹುತಿ ತೆಗೆದು ಕೊಂಡೇ ತೀರುತ್ತಾಳೆಂದು; ಅವಳ ಕಣ್ಣು ಮಾರಿಗಣ್ಣು ಅದಕ್ಕೆ ಸಿಕ್ಕಿದ ಮಗು ಇಂದು ಮೃತಿ ಹೊಂದಿತು, ಇನ್ನುಮುಂದೆ ಯಾರ ಸರದಿಯೋ ಏನೋ ಇತ್ಯಾದಿ, ಇತ್ಯಾದಿ.

. ರೋದನವೊಂದುಕಡೆ, ಬೈಗಳ ಸುರಿಮಳೆಯೊಂದುಕಡೆ, ಕೋಪ ತಾಪ ಗಳ ವಾಕ್ಪ್ರದರ್ಶನವೊಂದುಕಡೆ ಇದು ನಡೆಯುತ್ತಿದ್ದಾಗ ಯಾರೋ ವಿವೇಕಿ

ಗಳಾದ ಒಬ್ಬಿಬ್ಬರು ಓಡಿಹೋಗಿ ಡಾಕ್ಟರಿಗೆ ಸುದ್ದಿ ಮುಟ್ಟಿಸಿದರು. ಮೀನಾಕ್ಷಿಯನ್ನು ಸಮಾಧಾನಮಾಡಲು ಹೋದ ವಸಂತಾದೇವಿಗೆ ಮಾತುಗಳು ಮರೆತು ಹೋಗಿದ್ದುವು; ಮಗುವಿನ ಮೈಯ ರಕ್ತವನ್ನು ಒರೆಸಲೆಂದು ಪ್ರಯತ್ನಿಸಿದಳು; 'ನನ್ನ ಮಗುವನ್ನು ಮುಟ್ಟಬೇಡ ರಾಕ್ಷಸಿ' ಎಂದು ಮೀನಾಕ್ಷಿ ಆರ್ಭಟಿಸಿದಳು. ತನ್ನಿಂದ ಮಗುವಿಗೆ ಈ ವಿಪತ್ತು ಒದಗಿತೆಂದು ಮರುಗುತ್ತಿದ್ದ ವಸಂತಾದೇವಿಯು ಆ ರುದ್ರ ದೃಶ್ಯವನ್ನು ನೋಡಲಾರದೆ, ಅವರ ಬಿರು ನುಡಿಗಳನ್ನು ಕೇಳಲಾರದೆ, ಅಲ್ಲಿಂದ ಬೇರೆಡೆಗೂ ಹೋಗಲಾರದೆ ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ತೊಳಲುತ್ತಿದ್ದಳು.

ಹತ್ತು ನಿಮಿಷಗಳೊಳಗಾಗಿ ಡಾಕ್ಟರು ಬಂದರು. ಅವರ ಮುಖವನ್ನು ಕಾಣುತ್ತಲೇ ಮೀನಾಕ್ಷಿಯ ದುಃಖ ಮರುಕಳಿಸಿ ಮೇಲುಕ್ಕಿತು. ಹೃದಯ ಭೇದಿಯಾದ ಆರ್ತತೆಯಿಂದ ಅವರಲ್ಲಿ ಮೊರೆಯಿಡುತ್ತ ತನ್ನ ಕಂದನನ್ನು ಉಳಿಸಿರೆಂದು ಪ್ರಾರ್ಥಿಸಿದಳು. ಅನುಭವಿಯಾದ ಡಾಕ್ಟರು ತಾಯಮನಸಿನ ಉಮ್ಮಳವನ್ನರಿತು ಅವಳನ್ನು ಸಂತೈಸುತ್ತ ಗಾಳಿ ಬರುವಂತೆ ಸುತ್ತ ನೆರೆದಿದ್ದ ಜನರನ್ನು ದೂರ ಸರಿಸಿ ಮಗುವಿನ ಪರೀಕ್ಷೆಯಲ್ಲಿ ತೊಡಗಿದರು; ಗದ್ದಲ ಮಾಡಿದರೆ ಪ್ರಯೋಜನವಿಲ್ಲವೆಂದು ಗದರಿಸಿದ ಡಾಕ್ಟರ ಮಾತಿಗೆ ಮನ್ನಣೆ ಕೊಟ್ಟೋ ಅಥವಾ ಮಗುವಿನ ಸ್ಥಿತಿಯನ್ನು ಕುರಿತು ಅವರೇನು ಹೇಳುವರೋ ತಿಳಿಯಬೇಕೆಂಬ ಕುತೂಹಲದಿಂದಲೋ ಜನರು ನಿಶ್ಶಬ್ದವಾಗಿದ್ದರು. ಮಗುವನ್ನು ಸಂಪೂರ್ಣವಾಗಿ ಪರೀಕ್ಷೆಮಾಡಿ ಡಾಕ್ಟರು ನಿರಾಶೆಯನ್ನು ಸೂಚಿಸಿ ತಾಯ ದುಃಖವನ್ನು ಹೆಚ್ಚಿಸಲಾರದೆ, ಆದರೆ ಇರುವ ಸಂಗತಿಯನ್ನು ಮುಚ್ಚಿಟ್ಟು ಮಗುವು ಉಳಿದುಕೊಳ್ಳಬಹುದಾದ ಸಂಭವವನ್ನು ಕಳೆಯಲಾರದೆ ಹೇಳಿದರು

'ಪೆಟ್ಟು ಬಹಳ ಹೆಚ್ಚಾಗಿ ಬಿದ್ದಿದೆ; ರಕ್ತವೂ ತಕ್ಕಮಟ್ಟಿಗೆ ಹರಿದಿದೆ; ಅದರಿಂದ ಮಗು ಮೂರ್ಛೆ ಹೋಗಿದೆ.'

ಕುತೂಹಲದಿಂದ ಕೇಳುತ್ತಿದ್ದ ತಾಯಿಯು

'ಏನಾದರೂ ಇಂಜಕ್ಷನ್ ಕೊಟ್ಟು ಎಚ್ಚರಮಾಡಿಸಿ ಡಾಕ್ಟರೆ. ಎಷ್ಟು ಖರ್ಚಾದರೂ ನಾನು ಕೊಡುತ್ತೇನೆ' ಎಂದಳು.

'ಖರ್ಚಿನ ಮಾತಿರಲಿ ಅಮ್ಮಾ. ಮಗು ಆರೋಗ್ಯವಾಗುವುದನ್ನು ಮೊದಲು ನೋಡೋಣ. ಇಂಜಕ್ಷನ್ ಕೊಟ್ಟು ಇದನ್ನು ಎಚ್ಚರಪಡಿಸುವುದಷ್ಟೇ ಸಾಲದಮ್ಮ; ಎಚ್ಚರವಾದಾಗ ರಕ್ತಸ್ರಾವ ಹೆಚ್ಚಬಹುದು, ಇನ್ನೂ ಏನು ಬೇಕಾದರೂ ಆಗಬಹುದು.'

'ಹಾಗಾದರೆ ಏನು ಮಾಡಬೇಕು ಡಾಕ್ಟರೆ?'

'ಏನೂ ದಿಗಲುಪಡಬೇಡಮ್ಮ, ದೇವರ ಮೇಲೆ ಭಾರ ಹಾಕು. ನಮ್ಮ ಕೈಲೇನಿದೆ? ಇಲ್ಲಿ ಯಾವುದೂ ಟ್ಯಾಕ್ಸಿ ಸಿಕ್ಕುವ ಹಾಗಿಲ್ಲವೆ?'

'ಏಕೆ ಡಾಕ್ಟರೆ?'

'ಬೆಂಗಳೂರಿಂದ ದೊಡ್ಡ ಡಾಕ್ಟರನ್ನು ಕರೆತರಬೇಕು. ಇದು ನನ್ನ ಕೈಗೆ ಹಬ್ಬುವ ಹಾಗೆ ಕಾಣುವುದಿಲ್ಲ. ಹೇಗಾದರೂ ಆಗಲಿ ಯಾರಿಂದಲೇ ಆಗಲಿ ಮಗುವನ್ನು ಉಳಿಸುವುದು ಮುಖ್ಯ ಅಲ್ಲವೆ? ನಿಮ್ಮ ಗಂಡಸರು ಯಾರೂ ಇಲ್ಲಿ ಇಲ್ಲವೆ ತಾಯಿ?'

'ಗಣಿಯಲ್ಲಿ ಕೆಲಸಕ್ಕೆ ಹೋಗಿದಾರೆ. ಈಗಲೇ ಹೇಳಿ ಕಳುಹಿಸುತ್ತೇನೆ ಡಾಕ್ಟರೆ.'

'ಅದರಿಂದ ಏನೂ ಪ್ರಯೋಜನವಿಲ್ಲಮ್ಮ; ಅವರು ಬಂದು ಏನು ಮಾಡುತ್ತಾರೆ? ಟ್ಯಾಕ್ಸಿ ಇದ್ದರೆ ತರಹೇಳಿ, ಯಾರಾದರೂ ಗಂಡಸರು ಈಗಲೇ ಬೆಂಗಳೂರಿಗೆ ಹೋಗಬೇಕು; ತಡಮಾಡುವಹಾಗಿಲ್ಲ. ಹೆಚ್ಚು ಹೆಚ್ಚೆಂದರೆ ಇನ್ನು ಎರಡು ಗಂಟೆಯೊಳಗಾಗಿ ದೊಡ್ಡ ಡಾಕ್ಟರು ಬಂದರೆ ಮಗುವಿನ ಪ್ರಾಣಕ್ಕೆ ಏನೂ ಭಯವಿಲ್ಲ. ತಡಮಾಡಿದರೆ ಕೈ ಮೀರುತ್ತದೆ.'

ಎರಡು ಗಂಟೆಯೊಳಗಾಗಿ! ಐವತ್ತನಾಲ್ಕು ಮೈಲಿ ಹೋಗಿ ಡಾಕ್ಟರನ್ನು ಅಷ್ಟುಬೇಗ ಕರೆತರುವುದು ಯಾರಿಂದ ಸಾಧ್ಯ! ಕೂಲಿಗಾರರ ಕೇರಿಯಲ್ಲಿ ಟ್ಯಾಕ್ಸಿಯೆಲ್ಲಿ ಬಂತು; ಅಥವಾ ಅದು ದೊರಕಿದರೂ ನೂರೆಂಟು ಮೈಲಿ ದೂರ ಅಷ್ಟು ಬೇಗ ಹೋಗಿ ಬರುವುದು ಸಾಧ್ಯವೆ?

ತನ್ನ ಮಗು ಉಳಿಯುವ ಸಂಭವವಿಲ್ಲವೆಂದು ಮೀನಾಕ್ಷಿಗೆ ಅರಿವಾಗಿ ಅಷ್ಟುಹೊತ್ತೂ ತಡೆದಿದ್ದ ಕಣ್ಣೀರಿನ ಕಟ್ಟೆಯೊಡೆಯಿತು. ಅವಳ ಅಳುವನ್ನು ಕೇಳಿ ಕಲ್ಲು ಸಹ ಕರಗುವಂತಿತ್ತು. ಸುತ್ತ ನೆರೆದಿದ್ದ ಜನರ ಮುಖವು ನಿರಾಶೆಯಿಂದ ಜೋಲುಬಿದ್ದಿತು.

ವಸಂತಾದೇವಿಯ ಮನಸ್ಸು ಮಗುವಿನ ಕಡೆ, ಕಣ್ಣು ಗಡಿಯಾರದ ಕಡೆ ಇದ್ದುವು. ಕಾರು ನಡೆಸುತ್ತಿದ್ದ ವೇಗವನ್ನು ಕಂಡು ಎಲ್ಲಾದರೂ ಅಪಘಾತ ವಾಗುವುದು ಖಂಡಿತವೆಂದು ಡಾಕ್ಟರು ಪದೇ ಪದೇ ನಿಧಾನವಾಗಿ ಹೋಗೆಂದು ಕೂಗಿಕೊಳ್ಳುತ್ತಿದ್ದರು. ಏನೇ ಆದರೂ ಮಗುವು ಬಿದ್ದಿದ್ದ ಸ್ಥಳ ಕಣ್ಣಿಗೆ ಕಾಣುವವರೆಗೆ ಕಾರಿನ ವೇಗ ಕಡಮೆಯಾಗಲಿಲ್ಲ.

ಕಾರು ನಿಂತೊಡನೆ ಡಾಕ್ಟರು ದೊಡ್ಡದಾಗಿ ಒಂದು ನಿಶ್ವಾಸ ಬಿಟ್ಟು ಹಣೆಯ ಮೇಲೆ ಕೂಡಿದ್ದ ಬೆವರನ್ನು ಕೈವಸ್ತ್ರದಿಂದ ಒರೆಸಿಕೊಂಡರು. ವಸಂತಾದೇವಿಯು ಮೊದಲು ಇಳಿದು ಹಿಂದಿನ ಬಾಗಿಲನ್ನು ತೆಗೆದು ಅವರ ಚರ್ಮದ ಕೈಚೀಲವನ್ನು ತೆಗೆದುಕೊಂಡಳು. ಇನ್ನು ಕೊಂಚ ತಡಮಾಡಿ ದ್ದರೆ ಅವರನ್ನೂ ಕೆಳಕ್ಕೆ ಎಳೆಯುತ್ತಿದ್ದಳೋ ಏನೋ; ಅಷ್ಟಕ್ಕೆ ಅವಕಾಶ ಕೊಡದೆ ಡಾಕ್ಟರು ಇಳಿದು ಬಂದರು. ಗಟ್ಟಿಯಾಗಿ ಅಳುತ್ತಿದ್ದ ಮೀನಾಕ್ಷಿಯ ಅಳುವಿನ ಶಬ್ದ ನಿಂತಿತು; ಆದರೆ ಕಣ್ಣಲ್ಲಿ ಹರಿಯುತ್ತಿದ್ದ ನೀರು ಹೃದಯದಲ್ಲಿ ಹೊಮ್ಮುತ್ತಿದ್ದ ಉದ್ವೇಗ ಕಡಮೆಯಾಗಿರಲಿಲ್ಲ. ಮೂಕರಂತೆ ನೋಡುತ್ತ ನಿಂತಿದ್ದ ಜನ ದಾರಿಬಿಟ್ಟರು. ಡಾಕ್ಟರು-ದೊಡ್ಡ ಡಾಕ್ಟರು-ಮಗುವಿನ ಸಮೀಪಕ್ಕೆ ಬರುತ್ತಲೇ ಅದುವರೆಗೆ ಅಲ್ಲೇ ಇದ್ದ ಸ್ಥಳೀಯ ಡಾಕ್ಟರು ಅವರಿಗೆ ನಮಸ್ಕರಿಸಿ ನಡೆದಿರುವ ಸಂಗತಿಯನ್ನು ಸಂಕ್ಷೇಪವಾಗಿ ವಿವರಿಸಿದರು. ದೊಡ್ಡ ಡಾಕ್ಟರು ಕುಳಿತು ಮಗುವನ್ನು ಪರೀಕ್ಷಿಸತೊಡಗಿದರು. ಮೀನಾಕ್ಷಿ ಅಳು ತ್ತಲೇ ತನ್ನ ಕಂದನನ್ನು ಹೇಗಾದರೂ ಮಾಡಿ ಉಳಿಸಿರೆಂದು ಅವರ ಕಾಲನ್ನು ಮುಟ್ಟಿ ಕೇಳಿಕೊಂಡಳು. ಹತ್ತಿರವೇ ನಿಂತಿದ್ದ ವಸಂತಾದೇವಿಯು ಮೌನ ವಾಗಿ ದೇವರಲ್ಲಿ ಮೊರೆಯಿಡುತ್ತಿದ್ದಳು.

ಪರೀಕ್ಷೆ ನಡೆಸಿ ಡಾಕ್ಟರು 'ಮಗುವಿನ ಜೀವಕ್ಕೆ ಏನೂ ಭಯವಿಲ್ಲ, ಹೆದರಬೇಡಿ. ಕಾಲಕ್ಕೆ ಸರಿಯಾಗಿ ನನ್ನನ್ನು ಕರೆತಂದುದು ಒಳ್ಳೆಯ ದಾಯಿತು; ಇನ್ನು ಹದಿನೈದು ನಿಮಿಷ ತಡವಾಗಿದ್ದರೆ ಮಗು ಉಳಿಯುವ ಭರವಸೆಯಿರಲಿಲ್ಲ' ಎಂದು ತಮ್ಮ ಚೀಲದಿಂದ ಒಂದು ಔಷಧಿಯನ್ನು ತೆಗೆದು ಇಂಜಕ್ಷನ್ ತಯಾರುಮಾಡುವಂತೆ ಚಿಕ್ಕ ಡಾಕ್ಟರಿಗೆ ಹೇಳಿದರು.

ತನ್ನ ಮಗು ಬದುಕುತ್ತದೆಂದು ನುಡಿದ ಡಾಕ್ಟರನ್ನು ಹರಸುತ್ತ ಮೀನಾಕ್ಷಿಯು 'ನೀವು ಸಾವಿರ ವರ್ಷ ಬದುಕಿರಿ ಸ್ವಾಮಿ; ನನ್ನ ಕಂದಮ್ಮನ ಜೀವ ಇವತ್ತು ನಿಮ್ಮಿಂದ ಉಳಿಯಿತು' ಎಂದಳು.

'ಮಗುವಿನ ಜೀವ ಉಳಿಸಿದ ಪುಣ್ಯ ಕಾರನ್ನು ನಡೆಸಿದ ಆಕೆಯದು. ಅಬ್ಬಾ! ಈಗ ನೆನೆಸಿಕೊಂಡರೆ ಎದೆ ಝುಲ್ಲೆನ್ನುತ್ತದೆ; ಅದೆಷ್ಟು ವೇಗವಾಗಿ ಕಾರು ನಡೆಸಿದಳು, ಏನು ಕಥೆ! ಕಾರಿನಲ್ಲಿದ್ದಷ್ಟು ಹೊತ್ತೂ ನಾನೇನೋ ಜೀವದ ಆಸೆಯನ್ನೇ ಬಿಟ್ಟುಬಿಟ್ಟಿದ್ದೆ. ಆಕೆ ಅಷ್ಟು ವೇಗವಾಗಿ ಬರದೆ ಇದ್ದರೆ ನಾನಲ್ಲ ನನ್ನಂಥ ಹತ್ತು ಜನ ಡಾಕ್ಟರಿದ್ದರೂ ಏನೂ ಮಾಡುವುದಕ್ಕಾಗುತ್ತಿರಲಿಲ್ಲ.'

ದೊಡ್ಡ ಡಾಕ್ಟರ ಬಾಯಿಂದ ಹೊರಟ ಹೊಗಳಿಕೆಯ ಮಾತನ್ನು ಕೇಳಿ ಎಲ್ಲರೂ ವಸಂತಾದೇವಿಯ ಕಡೆಗೆ ತಿರುಗಿದರು; ಆದರೆ ಅವಳು ಆಗಲೇ ಹೊರಟುಹೋಗಿದ್ದಳು. ಮಗು ಉಳಿಯುವುದೆಂಬ ಭರವಸೆಯ ಮಾತು ಕೇಳುತ್ತಲೇ ಮೆಲ್ಲನೆ ನುಸುಳಿಕೊಂಡು ಹೋಗಿ ಅವಳು ತನ್ನ ಕಾರನ್ನು ಸೇರಿದ್ದಳು.

— ೩೨ —

ಬೆಳಗ್ಗೆ ಅಪಘಾತವಾದಾಗಿನಿಂದ ವಸಂತಾದೇವಿಯ ಮನಸ್ಸು ಬಹು ಯಾತನೆಯನ್ನು ಅನುಭವಿಸಿತ್ತು; ಅದರ ಮೇಲೆ ವೇಗವಾಗಿ ಕಾರನ್ನು ಎರಡು ಗಂಟೆಯ ಕಾಲ ನಡೆಸಿದ ಶ್ರಮ ಮತ್ತು ವೇಳೆಯಲ್ಲಿ ಮೀರುವುದೋ ಎಂದು ಹೆದರಿ ತನ್ನ ಶಕ್ತಿಯನ್ನೆಲ್ಲ ಒಂದೇ ನಿಮಿತ್ತದಕಡೆಗೆ ಕೇಂದ್ರೀಕರಿಸಿದುದರಿಂದ ನರಗಳ ಮೇಲುಂಟಾದ ಒತ್ತಡ ಇವುಗಳಿಂದ ಅವಳ ದೇಹ ಹುಣ್ಣು ಹುಣ್ಣಾಗಿತ್ತು. ಕೈಕೊಂಡ ಕೆಲಸ ಸಫಲವಾಯಿತೋ ಇಲ್ಲವೋ ತಿಳಿಯಬೇಕೆಂಬ ಕುತೂಹಲ ಎಡೆಯಲ್ಲಿ ನಿಂತಿರುವಷ್ಟು ಶಕ್ತಿಯನ್ನು ಅವಳಿಗೆ ಕೊಟ್ಟಿತು. ಮಗುವಿನ ಜೀವಕ್ಕೆ ಭಯವಿಲ್ಲವೆಂದು ಡಾಕ್ಟರು ಹೇಳುತ್ತಲೇ ಆ ಶಕ್ತಿ ಮರೆಯಾಗಿ ವಸಂತಾದೇವಿಯ ದೇಹ ವಿಶ್ರಾಂತಿಯನ್ನು ಬಯಸಿತು; ಕಾಲುಗಳು ಕುಸಿದು ಬೀಳತೊಡಗಿದುವು; ದೃಷ್ಟಿ ಮಂಕಾಗಲಾರಂಭಿಸಿತು. ಇನ್ನು ಹೆಚ್ಚು ಹೊತ್ತು ತಾನು ಅಲ್ಲಿರುವುದು ಸರಿಯಲ್ಲವೆಂದು ಅವಳು ತನ್ನ ಕಾರಿನ ಬಳಿಗೆ ಬಂದುಬಿಟ್ಟಳು.

ಕಾರಿನಲ್ಲಿ ಕುಳಿತೊಡನೆ ಅಭ್ಯಾಸಬಲದಿಂದ ಅದನ್ನು ಬಿಡತೊಡಗಿದಳು. ಅಪ್ರಯತ್ನವಾಗಿ ಅದು ನಟೇಶನ ಮನೆಯ ಮುಂದೆ ಬಂದು ನಿಂತಿತು.

ಕೊಟ್ಟಿಗೆಯೊಳಕ್ಕೆ ಕಾರನ್ನು ಬಿಡಲು ಅಲ್ಲಿ ತುಂಡು ತುಂಡಾಗಿ ಮುರಿದು ಬಿದ್ದಿದ್ದ ಬಾಗಿಲು ಆತಂಕವಿದ್ದುದರಿಂದ ಕಾರನ್ನು ಹೊರ ಅಂಗಳದಲ್ಲೇ ಬಿಟ್ಟು ವಸಂತಾದೇವಿಯು ಅದರಿಂದಿಳಿದು ತೂರಾಡುತ್ತ ಮನೆಯ ಕಡೆ ನಡೆದಳು. ಅತ್ತಿತ್ತ ನೋಡಬೇಕೆಂಬ ಇಚ್ಛೆಯಿಲ್ಲ, ಕಾರನ್ನು ಬಿಸಿಲಿನಲ್ಲಿ ಬಿಟ್ಟೆದೇನೆಂದಾಗಲಿ ಬಾಗಿಲುಗಳನ್ನು ಭದ್ರಪಡಿಸಿಲ್ಲವೆಂದಾಗಲಿ ಯೋಚನೆಯಿಲ್ಲ, ಯಾವುದೂ ಬೇಡದಷ್ಟು ಆಯಾಸ; ನಿಂತಲ್ಲಿಯೇ ನೆಲಕ್ಕುರುಳಬೇಕೆನ್ನುವಷ್ಟು ಆಯಾಸ; ಬಲವಂತದಿಂದ ಕಾಲುಗಳನ್ನೆಳೆದು ಹಾಕುತ್ತಿದ್ದಳು; ತೆರೆದಿದ್ದ ಕಣ್ಣುಗಳು ಮುಚ್ಚಿದ್ದಂತೆ ಜಡವಾಗಿದ್ದುವು.

ವಸಂತಾದೇವಿಯು ಮನೆಯ ಮೆಟ್ಟಲಿನ ಮೇಲೆ ಕಾಲಿಟ್ಟಳು. 'ನಿಲ್ಲು ಅಲ್ಲಿ; ಒಳಗೆ ಹೋಗಬೇಡ' ಎಂಬ ಘರ್ಜನೆ ಕೇಳಿಸಿತು. ಆ ಘರ್ಜನೆಯನ್ನೂ ಲೆಕ್ಕಿಸುವ ಸ್ಥಿತಿಯಲ್ಲಿ ಆವಳ ಮನಸ್ಸಿರಲಿಲ್ಲ; ಅದರಿಂದ ಅದನ್ನು ಕೇಳದವಳಂತೆ ಮತ್ತೊಂದು ಹೆಜ್ಜೆ ಮುಂದಿಟ್ಟಳು.

'ಯಾರಿಗೆ ಹೇಳುತ್ತಿರುವುದು ? ಒಳಗೆ ಹೋಗಬೇಡ' ಎಂದು ಪುನಃ ಅಪ್ಪಣೆಯಾಯಿತು.

ನೊಂದ ಹೆಣ್ಣು ಆರ್ತದೃಷ್ಟಿಯಿಂದ ಅತ್ತಕಡೆ ನೋಡಿತು; ತನ್ನ ಗಂಡ ನಟೇಶನು ರುದ್ರಾವತಾರವನ್ನು ತಾಳಿ ಕಂಬಕ್ಕೆ ಒರಗಿಕೊಂಡು ಕುಳಿತಿದ್ದಾನೆ. ಮುಂದೆ ಹೆಜ್ಜೆಯಿಡಲಾರದೆ ಅವಳು ಅಲ್ಲಿಯೇ ನಿಂತಳು.

'ಒಪ್ಪಂದ ಒಡೆದುಹೋಯಿತು, ನಿನ್ನ ಮನೆಗೆ ನೀನು ಹಿಂತಿರುಗಿ ಹೋಗಬಹುದು.'

ವಸಂತಾದೇವಿ ಏನೋ ಹೇಳುವುದಕ್ಕೆಂದು ಪ್ರಯತ್ನಿಸಿದಳು. ದೇಹದ ಆಯಾಸದೊಂದಿಗೆ ಹೃದಯಮೇಲೆ ದೊಡ್ಡಪೆಟ್ಟು ಬಿದ್ದಿತ್ತು; ಹೀಗೆ ಆಗಬಹುದೆಂದು ಮೊದಲೇ ನಿರೀಕ್ಷಿಸಿದ್ದರೂ ಅದು ವಾಸ್ತವವಾಗಿ ಸಂಭವಿಸಿದಾಗ ಅದರ ಶಕ್ತಿ ತಾನು ಊಹಿಸಿದುದಕ್ಕಿಂತ ಬಲುಪಾಲು ಹೆಚ್ಚಾಗಿರುವಂತೆ ಕಂಡಿತು. ಮಾತಾಡಲು ನಡೆಸಿದ ಅವಳ ಪ್ರಯತ್ನ ಅಸ್ಪಷ್ಟವಾದ ಒಂದೆರಡು ಮಾತು

ಗಳಲ್ಲಿ ಕೊನೆಗಂಡಿತು. ಅವಳ ವಿವರಣೆಯ ಕಡೆಗೆ ಲಕ್ಷ್ಯಕೊಡದೆ ನಟೇಶನು ಮತ್ತೆ ಮಾತನಾಡಿದ

'ಎಂದಿದ್ದರೂ ಇದು ಹೀಗೇ ಆಗುವುದೆಂದು ನಾನು ಬಲ್ಲೆ; ಅದರಿಂದಲೇ ಮೊದಲ ದಿನವೇ ಈ ನಿಬಂಧನೆಯನ್ನು ಹಾಕಿದುದು. ಆ ದಿನ ನಿನ್ನ ಕಣ್ಣೀರಿಂದ ಮೋಸಹೋದೆ, ಇಲ್ಲವಾದರೆ ನಿನ್ನನ್ನು ಮನೆಯೊಳಕ್ಕೆ ಸೇರಿಸುತ್ತಿರಲಿಲ್ಲ; ಸರಿಯವರ ಮುಂದೆ ಅಪಹಾಸ್ಯಕ್ಕೆ ಗುರಿಯಾಗುತ್ತಿರಲಿಲ್ಲ. ಚಿಂತೆಯಿಲ್ಲ; ತಪ್ಪು ನನ್ನದು. ನೀನಿನ್ನು ನಿನ್ನ ಶ್ರೀಮಂತಿಕೆಯ ವಿಹಾರಕ್ಕೆ ಹೋಗಬಹುದು; ಈ ಬಡಕೂಲಿಯವನ ಮನೆಯಲ್ಲಿ ಸ್ಥಳವಿಲ್ಲ. ಹುಂ, ಹೊರಡು.'

ವಸಂತಳು ಮತ್ತೆ ಮಾತನಾಡಲು ಪ್ರಯತ್ನಿಸಿದಳು. ಮೊದಲು ತುಂಬಿ ಬರುತ್ತಿದ್ದ ದುಃಖದ ಜೊತೆಗೆ ಈಗ ಕೋಪ ತಿರಸ್ಕಾರಗಳು ಸೇರಿಕೊಂಡು ಗಂಟಲನ್ನು ಒತ್ತಿ ಹಿಡಿದಿದ್ದುವು. ತಾನಿರುವ ಸ್ಥಿತಿಯ ಕಡೆಗೆ ಸ್ವಲ್ಪವೂ ಲಕ್ಷ್ಯಕೊಡದೆ ಪಟಪಟನೆ ಎಷ್ಟು ಮಾತುಗಳನ್ನಾಡುತ್ತಿದ್ದಾನೆ! ತಾನು ಮಾಡಿರುವ ಯಾವ ತಪ್ಪಿಗಾಗಿ ಈ ಶಿಕ್ಷೆ? ಎಷ್ಟಾದರೂ ಅನಾಗರಿಕ, ವಿದ್ಯಾವಿಹೀನ; ಹೆಂಗಸಿನ ಮನಸ್ಸು ಇವನಿಗೆ ಹೇಗೆ ತಿಳಿಯಬೇಕು? ಈಗ ತಾನೇನು ಮಾಡಬೇಕು; ತಪ್ಪಾಯಿತೆಂದು ಪುನಃ ಅವನ ಕಾಲನ್ನು ಕಟ್ಟುವುದೆ? ವಸಂತಾದೇವಿಯ ಸ್ವಾಭಿಮಾನ ಇಲ್ಲಿ ಕೆರಳಿತು; ಬಾಗಿಲನ್ನೊಡೆದು ಒಳಗೆ ಹೋಗುವಾಗ ಮನಸ್ಸು ಮಾಡಿದ್ದ ನಿರ್ಧಾರ ಬಲಗೊಂಡಿತು. ನಿರಪರಾಧಿಯಾದ ಒಬ್ಬ ಅಬಲೆಯ ಮೇಲೆ ವಿನಾಕಾರಣ ಈ ಗಂಡು ನಡೆಸುತ್ತಿರುವ ದಬ್ಬಾಳಿಕೆಗೆ ತಾನು ಮಣಿಯಬಾರದೆಂದು ಮನಸು ಪ್ರೇರೇಪಿಸಿತು. ತನ್ನ ಮೇಲೆ ಭರವಸೆಯನ್ನಿಡದೆ ತಾತನು ಇಂಥ ಉಯಿಲನ್ನು ಬರೆದನಲ್ಲಾ ಎಂದು ಪ್ರತಿಭಟಿಸಿ ಅಂದು ನಟೇಶನನ್ನು ಮದುವೆಯಾದ ವಸಂತಾ ಇಂದು ಪುನಃ ಅಂಥದೇ ಪ್ರಸಂಗದಲ್ಲಿ ಸಿಕ್ಕಿದ್ದಳು. ತಾನು ಹೆಣ್ಣಾದುದರಿಂದ ಈ ಜನರು ತನ್ನ ಮೇಲೆ ಇಷ್ಟು ಅನ್ಯಾಯ ಮಾಡುತ್ತಿದ್ದಾರೆಂದು ಪುನಃ ಅವಳ ಹೃದಯದಲ್ಲಿ ಚುಚ್ಚತೊಡಗಿತು.

ವಸಂತಾದೇವಿಯು ಸುಮ್ಮನೆ ನಿಂತಿದ್ದುದನ್ನು ಕಂಡು ನಟೇಶನು ಮತ್ತೆ ಹೇಳಿದ

'ನಾನು ಹೇಳಿದುದು ಕೇಳಲಿಲ್ಲವೆ? ಇನ್ನೂ ಏಕೆ ನಿಂತಿದ್ದೀ?'

ಎಷ್ಟುಸಲ ಹೇಳಿಸಿಕೊಳ್ಳುವುದು? 'ಹೊರಡು, ಹೊರಡು, ಹೊರಡು.' ಸ್ವಾಭಿಮಾನದ ನಿಧಿಯಾದ ಅವಳಿಗೆ ಆ ಮೂರು ಅಕ್ಷರಗಳು ತ್ರಿಶೂಲದಂತೆ ಹೃದಯವನ್ನಿರಿಯುತ್ತಿದ್ದುವು. ಮರುಮಾತನ್ನಾಡದೆ, ಕತ್ತೆತ್ತಿ ಅತ್ತಿತ್ತ ನೋಡದೆ ಹಿಂತಿರುಗಿ ತನ್ನ ಕಾರಿನ ಬಳಿಗೆ ಬಂದಳು.

ಅಣ್ಣ ಅತ್ತಿಗೆಯರ ವಿರಸವನ್ನು ನೋಡುತ್ತ ಇಂದಿರೆ ಬಾಗಿಲ ಒಳಭಾಗ ಭಾಗದಲ್ಲಿ ನಿಂತು, ಕಣ್ಣೀರು ಸುರಿಸುತ್ತಿದ್ದಳು. ಹೋಗುತ್ತಿದ್ದ ಅತ್ತಿಗೆ ಯನ್ನು ಬೇಡವೆಂದು ಹೇಳುವಷ್ಟು ಧೈರ್ಯ ಅವಳಿಗಿರಲಿಲ್ಲ; ಅಣ್ಣನ ಆಜ್ಞೆಯ ಮುಂದೆ ತಾನೇನು ಮಾಡಲಾದೀತು! ನೀರು ತುಂಬಿದ್ದ ಕಣ್ಣುಗಳ ನ್ನೊರಸಿಕೊಳ್ಳುತ್ತ ನೀರವವಾಗಿ ಅತ್ತಿಗೆಯ ಕಡೆ ನೋಡುತ್ತಿದ್ದಳು.

ಕಾರು ಕೇರಿಯನ್ನು ಬಿಟ್ಟುಹೊರಟಿತು.

ತಲೆಯ ಮೇಲೆ ಕೈಯನ್ನಿಟ್ಟು ಕುಳಿತಿದ್ದ ನಟೇಶನು ಕಾರು ಕಣ್ಮರೆ ಯಾಗುತ್ತಲೇ ದೊಡ್ಡದಾಗಿ ಉಸಿರುಬಿಟ್ಟ—ಜೀವನ ನಾಟಕದ ಒಂದು ಅಂಕ ಮುಗಿಯಿತೆಂಬಂತೆ.

ಕಾರುಹೋದ ದಿಕ್ಕನ್ನು ಶೂನ್ಯ ದೃಷ್ಟಿಯಿಂದ ನೋಡುತ್ತ ನಟೇಶನು ಕುಳಿತಿದ್ದ; ಕಾರಿನೊಂದಿಗೆ ತನ್ನ ಜೀವನದ ಸುಖವೂ ದೂರದೂರ ಹೋಗು ತ್ತಿರುವಂತೆ ಅವನಿಗೆ ಕಂಡಿತು. ತಾನು ಮಾಡಿದುದು ಸರಿಯೆ ಎಂಬ ಪ್ರಶ್ನೆ ಅವನ ಬರಿಯ ತಲೆಯಲ್ಲಿ ಕ್ಷಣಕ್ಕೊಮ್ಮೆ ಕಾಣಿಸಿಕೊಳ್ಳತೊಡಗಿತು. ಒಂದು ಸಣ್ಣ ತಪ್ಪಿಗಾಗಿ ತಾನು ಅವಳನ್ನು ಅಟ್ಟಿದ್ದಾಯಿತು; ಏಕೆ ಏನು ಎಂದು ಕೇಳಲಿಲ್ಲ; ಅವಳು ಏನೋ ಹೇಳಲು ಪ್ರಯತ್ನಿಸಿದಳು, ಅದೇನೆಂದು ತಿಳಿದು ಕೊಳ್ಳುವ ತಾಳ್ಮೆಯೂ ತನಗೆ ಬರಲಿಲ್ಲ. ತನ್ನೊಡನಿದ್ದ ಮೂರು ವಾರಗಳಲ್ಲಿ ಒಮ್ಮೆಯಾದರೂ ನನಗೆ ಅಸಮಾಧಾನವಾಗುವಂತೆ ನಡೆದುಕೊಳ್ಳಲಿಲ್ಲ; ಯಾವ ಕಾರಣದಿಂದ ಈಗ ಕಾರನ್ನು ತೆಗೆದುಕೊಂಡು ಹೋಗಿದ್ದಳೋ ತಿಳಿದು ಕೊಳ್ಳದೆ ಅವಳ ಮೇಲೆ ಅಷ್ಟು ಆಗ್ರಹ ಮಾಡಿದುದು ತಪ್ಪು. ಆದರೆ ಈಗ ಮಾಡುವುದೇನು? ತನಗೆ ಇಂಥ ಮೊಂಡುತನ ಈ ದಿನ ಏಕೆ ಬಂತು? ವಿಧಿ ತನ್ನ ಆಟವನ್ನು ಆಡಿಸಿಬಿಟ್ಟಿತು; ಅಂದು ಆಕೆ ನನ್ನನ್ನು ತನ್ನ ಮನೆಯಿಂದ

ಹೊರಕ್ಕೆ ಹಾಕಿದಳು, ಈ ದಿನ ನಾನು ಅವಳನ್ನು ಆಚೆಗೆ ಅಟ್ಟಿದೆ; ಮುಯ್ಯಿಗೆ ಮುಯ್ಯಿ ತೀರಿತು.

ಗಣಿಯಿಂದ ಬಂದವನು ಇನ್ನೂ ಊಟ ಮಾಡಿರಲಿಲ್ಲ; ಊಟಕ್ಕೆ ಎಬ್ಬಿಸಲೆ ಬೇಡವೆ ಎಂದು ಇಂದಿರೆ ಯೋಚಿಸುತ್ತಿದ್ದಳು; ಅವಳಿಗಂತೂ ಊಟ ಬೇಡವಾಗಿತ್ತು.

ವಸಂತಾದೇವಿಯು ಹೊರಟುಹೋದ ಹತ್ತು ನಿಮಿಷಗಳಲ್ಲಿ ಆ ಕೇರಿಯ ಏಳೆಂಟುಮಂದಿ ಹೆಂಗಸರು ಮೀನಾಕ್ಷಿಯನ್ನು ಮುಂದಿಟ್ಟುಕೊಂಡು ನಟೇಶನ ಮನೆಗೆ ಬಂದರು; ಮೀನಾಕ್ಷಿಯ ಕೈಯಲ್ಲಿ ಒಂದು ಹೂವಿನ ಹಾರವಿತ್ತು.

ಮೀನಾಕ್ಷಿ ಉತ್ಸಾಹದಿಂದ

'ವಸಂತಾದೇವಿ ಎಲ್ಲಿ?' ಎಂದು ಕೇಳಿದಳು.

'ಏಕೆ?'

'ನೋಡಬೇಕಾಗಿದೆ.'

'ಆಕೆ ಇಲ್ಲಿಲ್ಲ.'

'ಆ! ಆಗಲೇ ಬಂದಳಲ್ಲ! ಮನೆಗೆ ಬರಲಿಲ್ಲವೆ?'

'ಬಂದುದೂ ಆಯಿತು, ಬೆಂಗಳೂರಿಗೆ ಹೋದುದೂ ಆಯಿತು.'

'ಪುನಃ ಬರುವುದು ಯಾವಾಗ?'

'ಪುನಃ ಬರುವುದಿಲ್ಲ.'

ಬಂದಿದ್ದ ಹೆಂಗಸರ ಮುಖಗಳು ಜೋಲುಬಿದ್ದುವು; ಮೀನಾಕ್ಷಿಗೆ ಬಲು ವ್ಯಥೆಯಾಯಿತು. ತಾನು ಆಡಿದ ಕಟುವಾದ ಮಾತುಗಳನ್ನು ಮನಸ್ಸಿಗೆ ತೆಗೆದುಕೊಳ್ಳದೆ ತನ್ನ ದೇಹಾಭಿಮಾನವನ್ನು ಸಹ ಬಿಟ್ಟು ಬೆಂಗಳೂರಿಗೆ ಹೋಗಿ ಡಾಕ್ಟರನ್ನು ಕರೆತಂದ ಉಪಕಾರಕ್ಕಾಗಿ ಆಕೆಯಲ್ಲಿ ಕ್ಷಮಾಯಾಚನೆ ಮಾಡುವ ಅವಕಾಶ ಸಹ ತಪ್ಪಿಹೋಯಿತು. ಅಣ್ಣತಂಗಿಯರು ಇದ್ದ ರೀತಿಯಲ್ಲಿ ಏನೋ ಪ್ರಸಂಗ ನಡೆದಿದೆಯೆಂಬ ಸಂಶಯ ಮೀನಾಕ್ಷಿಗೆ ಬಂದಿತ್ತು; ಈಗ ವಸಂತಾದೇವಿಯು ಹೊರಟುಹೋದಳೆಂದು ತಿಳಿದ ಮೇಲೆ ಅದಕ್ಕೆ ನಟೇಶನೇ ಹೊಣೆಯೆಂದು ಅವಳು ನಿರ್ಧರಿಸಿಬಿಟ್ಟಳು. ತನಗುಂಟಾದ ನಿರಾಶೆಯು ಕೋಪಕ್ಕೆ ತಿರುಗಿತು; ಆ ಕೋಪವು ಶಬ್ದರೂಪವನ್ನು ತಾಳಿ ಬಾಯಿಂದ ನಿರರ್ಗಳವಾಗಿ ಹೊರಡಲಾರಂಭಿಸಿತು.

'ಅಂಥ ಹೆಂಗಸು ಇನ್ನು ನಮ್ಮ ಕೇರೀಗೆ ಬರೋದು ಎಂದರೇನು! ಏನೋ ದಾರಿತಪ್ಪಿ ಬಂದಿದ್ದಳು; ಪೂರ್ವಜನ್ಮದಲ್ಲಿ ಏನು ಪುಣ್ಯ ಮಾಡಿದ್ದೆಯೋ ಎರಡು ದಿನ ನಿನ್ನ ಮನೆಯಲ್ಲಿ ಸಂಸಾರ ಮಾಡಿದಳು. ಇಂಥ ರಾಕ್ಷಸನ ಕೈಲಿ ಅವಳು ಬಾಳುಮಾಡೋದು ಎಂದರೇನು! ರಾಕ್ಷಸರಿಗೂ ದೇವತೆಗಳಿಗೂ ಎಲ್ಲಾದರೂ ಹೊಂದುವುದುಂಟೆ? ಅವಳು ದೇವತೆ, ಮಹಾ ತಾಯಿ, ನಮ್ಮಮ್ಮ, ಇಲ್ಲದಿದ್ದರೆ ಈವತ್ತು ನನ್ನ ಕಂದನ ಗತಿ ಆಗಿಹೋಗಿ ಬಿಟ್ಟಿತ್ತು. ನನ್ನ ಮಗುವಿನಂಥ ಹನ್ನೆರಡು ಗಂಡು ಮಕ್ಕಳನ್ನು ಹಡೆದು ಆ ಪುಣ್ಯಾತಗಿತ್ತಿ ತಣ್ಣಗೆ ನೂರು ವರ್ಷ ಬದುಕಿರಲಿ.'

ಈ ಮಾತು ಕೇಳಿ ಆಗಿನ ವ್ಯಸನದಲ್ಲೂ ನಗುಬಂದ ಒಬ್ಬಾಕೆ 'ಗಂಡನೇ ಮನೆಬಿಟ್ಟು ಆಚೆಗೆ ಕಳಿಸಿದಮೇಲೆ ಇನ್ನು ಹನ್ನೆರಡು ಗಂಡುಮಕ್ಕಳನ್ನು ಎಲ್ಲಿಂದ ತಂದಾಳು ಮೀನಾಕ್ಷೀ' ಎಂದಳು.

'ಇನ್ನೇನಿದೇ ಇಂಥ ಮೂದೇವಿ ಗಂಡನ್ನ ಕಟ್ಟಿಕೊಂಡಮೇಲೇ. ರತಿಯಂಥ ಹೆಣ್ಣು ಈ ಸಿಂಗಳೀಕನಿಗೆ ಎಲ್ಲಾದರೂ ದಕ್ಕುವುದುಂಟೆ!........' ಇತ್ಯಾದಿ ಇತ್ಯಾದಿ.

ಮೀನಾಕ್ಷಿ ಆಡುತ್ತಿದ್ದ ಮಾತುಗಳನ್ನು ಕೇಳಿ ನಟೇಶನಿಗೆ ಕೋಪ ಬರುತ್ತಿತ್ತು; ಆದರೂ ಅವನು ತುಟಿ ಎರಡು ಮಾಡದೆ ತಲೆ ತಗ್ಗಿಸಿ ಕುಳಿತು ಎಲ್ಲವನ್ನೂ ಕೇಳುತ್ತಿದ್ದ. ಅವಳ ಬೈಗುಳು ಅವನಿಗೆ ಹಿತವಾಗಿರುವಂತೆ ಕಾಣುತ್ತಿತ್ತು; ಕಾರಣ—ಆ ಬೈಗುಳಲ್ಲಿ ವಸಂತಾದೇವಿಯ ಹೊಗಳಿಕೆಯಿತ್ತು; ತಾನು ಮಾಡಿದ ಅನ್ಯಾಯಕ್ಕಾಗಿ ತನ್ನ ಮನಸ್ಸಿನಲ್ಲುಂಟಾದ ದುಗುಡವು ಆ ಬೈಗುಳಿಂದ ಸಮಾಧಾನ ಸ್ಥಿತಿಗೆ ಬರುತ್ತಿತ್ತು.

ಮಾತು ಬೆಳೆಯಬೇಕಾದರೆ, ಜಗಳವಾಗಬೇಕಾದರೆ ಎರಡು ಪಕ್ಷಗಳಿರಬೇಕು; ಸಾಧ್ಯವಾದರೆ ಅವು ಸಮಪಕ್ಷಗಳಾಗಿರಬೇಕು. ಇಲ್ಲಿ ಎರಡನೆಯ ಪಕ್ಷವೇ ಇರಲಿಲ್ಲ. ಅದರಿಂದ ಮೀನಾಕ್ಷಿಯ ಭರ್ತ್ಸನೆ ಬೇಗ ಮುಗಿಯಿತು. ಅವನ್ನು ಮುಗಿಸುವುದಕ್ಕೆ ಮುಂಚೆ ಆ ದಿನ ನಡೆದ ಸಂಗತಿಯನ್ನೆಲ್ಲ ವಿವರವಾಗಿ ವರ್ಣಿಸಿ ವಸಂತಾದೇವಿಯ ಉಪಕಾರ ಸ್ಮರಣೆಮಾಡಿ

'ಅಂಥ ಭಾಗ್ಯಲಕ್ಷ್ಮಿಯನ್ನು ನಾವಿನ್ನು ಕಾಣಲಾರೆವು; ಅಂಥ ಹೆಂಡತಿಯು ನಿನಗೆ ಜನ್ಮಜನ್ಮಾಂತರಕ್ಕೂ ದೊರೆಯಲಾರಳು. ಆಕೆಯ ಚಿತ್ರವು

ಮನೆಯಲ್ಲಿದ್ದರೆ ಈ ಹಾರವನ್ನು ಅದಕ್ಕೆ ಹಾಕಿ ಇನ್ನುಮುಂದಾದರೂ ಒಳ್ಳೆಯ ಬುದ್ಧಿ ಬರುವಂತೆ ಮಾಡೆಂದು ಅದಕ್ಕೆ ಹರಸಿಕೊ'

ಎನ್ನುತ್ತ ತನ್ನ ಕೈಯಲ್ಲಿದ್ದ ಹಾರವನ್ನು ಅಲ್ಲಿಯೇ ಅವನ ಮುಂದೆ ಇಟ್ಟು ಜೊತೆಗೆ ಬಂದವರೊಡನೆ ಹಿಂತಿರುಗಿದಳು.

ಕಾರನ್ನು ಈಚೆಗೆ ತೆಗೆದಕಾರಣ ಈಗ ನಟೇಶನಿಗೆ ಗೊತ್ತಾಯಿತು. ಮಗುವಿನ ಪ್ರಾಣವನ್ನುಳಿಸುವುದಕ್ಕಾಗಿ ತನ್ನ ಬಾಳ್ವೆಯನ್ನು ಬಲಿಗೊಟ್ಟಳು ದೇವಿ. ಸಾಮಾನ್ಯರಿಂದ ಸಾಧ್ಯವಲ್ಲದ ಸಾಹಸವನ್ನು ತೋರಿ ಮಗುವನ್ನುಳಿಸಿ ಬಂದ ಕೋಮಲೆಯನ್ನು ತಾನು ಬಹು ಕಟುವಾಗಿ ಮಾತನಾಡಿದೆ. ವಿಶ್ರಾಂತಿಯನ್ನು ಬಯಸಿಬಂದಿದ್ದ ಅವಳ ದೇಹವು ಹೃದಯವು ತನ್ನ ಮಾತುಗಳಿಂದ ಎಷ್ಟು ನೊಂದವೋ! ಅಯ್ಯೋ, ತನ್ನಂಥ ಕಡುಪಾಪಿಯು ಇನ್ನುಂಟೆ? ಮೀನಾಕ್ಷಿ ಆಡಿದ ಒಂದೊಂದು ಮಾತೂ ಸರಿ; ಆಕೆಯು ಮನುಷ್ಯಳಲ್ಲ; ತನ್ನ ಜೀವನವನ್ನು ಮಿಂಚಿನಂತೆ ಒಮ್ಮೆ ಬೆಳಗಿ ಕಣ್ಮರೆಯಾದ ದಿವ್ಯ ಜ್ಯೋತಿ.

ನಟೇಶನನ್ನು ಎಚ್ಚರಿಸುವಂತೆ ಗಣೆಯ ಶಿಳ್ಳು ಹೊತ್ತಾಯಿತೆಂದು ಕೂಗಿತು. ಅದನ್ನು ಕೇಳಿ ಅರೆಮನಸ್ಸಿನಿಂದ ಅವನು ಮೇಲಕ್ಕೆದ್ದ. ಮೀನಾಕ್ಷಿ ಬಿಟ್ಟುಹೋದ ಹಾರ ಅಲ್ಲೆ ಇತ್ತು. ನಿಂತವನು ಒಂದು ಕ್ಷಣಕಾಲ ಅದನ್ನು ದಿಟ್ಟಿಸುತ್ತಿದ್ದ. ವಸಂತಾದೇವಿಗೆಂದು ತಂದ ಹಾರವದು; ದೇವಿಯ ಪೂಜೆಗಾಗಿ ತಂದ ವಸ್ತುವಿನಲ್ಲಿನ ಪವಿತ್ರತೆ ಅದರಲ್ಲಿ ಕಾಣುತ್ತಿತ್ತು. ಪಾಪಿಯಾದ ತನ್ನ ಕೈಯಿಂದ ಅದನ್ನು ಮುಟ್ಟಬಾರದೋ ಎಂಬಂತೆ ತನ್ನ ತಂಗಿಯನ್ನುದ್ದೇಶಿಸಿ

'ಆ ಹಾರ ತೆಗೆದುಕೋ ಇಂದಿರಾ. ನಿನ್ನ ಅತ್ತಿಗೆಯ ಚಿತ್ರದ ಮುಂದೆ ಅದನ್ನಿರಿಸಿ ನಿನ್ನ ಅಣ್ಣನನ್ನು ಕ್ಷಮಿಸೆಂದು ಕೇಳಿಕೊ' ಎಂದ.

ಇಂದಿರೆಯು ಅಳುತ್ತ ಹಾರವನ್ನು ಕೈಗೆ ತೆಗೆದುಕೊಂಡು

'ಎರಡು ತುತ್ತು ಊಟಮಾಡಿ ಹೋಗಣ್ಣ' ಎಂದಳು.

'ಬೇಡ ತಂಗಿ; ಹೊಟ್ಟೆ ತುಂಬಿದೆ' ಎನ್ನುತ್ತ ನಟೇಶ ತನ್ನ ಕೆಲಸಕ್ಕಾಗಿ ಹೊರಟುಹೋದ.

ಹಾರವನ್ನು ಎರಡು ಕೈಗಳಲ್ಲೂ ಹಿಡಿದುಕೊಂಡು ಇಂದಿರೆಯು ಒಳಕ್ಕೆ ಹೋಗಿ ವಸಂತಾದೇವಿಯ ಭಾವಚಿತ್ರಕ್ಕೆ ಅದನ್ನು ಹಾಕಿ ಕೈ ಮುಗಿದಳು. 'ವಿಶ್ವಪ್ರೇಮ' ಪತ್ರಿಕೆಯಲ್ಲಿ ಬಂದಿದ್ದ ಆಕೆಯ ಚಿತ್ರವನ್ನು ಕತ್ತರಿಸಿ ಒಂದು ರಟ್ಟಿಗೆ ಅಂಟಿಸಿ ಅದನ್ನು ಗೋಡೆಗೆ ನೇತುಹಾಕಿದ್ದಳು; ಅದು ಈಗ ಉಪ ಯೋಗಕ್ಕೆ ಬಂತು.

ಅತ್ತಿಗೆಯು ಹೋದ ವ್ಯಸನದಲ್ಲಿ ಇಂದಿರೆಗೂ ಊಟ ಬೇಕಾಗಲಿಲ್ಲ.

— ೩೩ —

ಸೂರ್ಯನು ಮೂರುಸಲ ಮುಳುಗಿ ಮೂರುಸಲ ಹುಟ್ಟಿದ. ಅವ ನೊಡನೆ ವಿಶ್ವದಲ್ಲಿನ ಜೀವಕೋಟಿಗಳು ಮಲಗಿ ಎದ್ದು ತಮ್ಮ ತಮ್ಮ ಕೆಲಸ ಗಳಲ್ಲಿ ತೊಡಗಿದ್ದುವು. ನಟೇಶನಿಗೆ ಮಾತ್ರ ರಾತ್ರಿ ಹಗಲುಗಳೆರಡೂ ಒಂದೆ. ಆಗಿದ್ದುವು; ನಿದ್ದೆಯಲ್ಲಿ ಎಚ್ಚರ, ಎಚ್ಚರವಿರುವಾಗ ಏನೂ ತೋರದ ಮತ್ತು ಈ ಮೂರು ದಿನಗಳು ಮುವ್ವತ್ತು ಸಾವಿರ ದಿನಗಳಾಗಿರಬಾರದೇಕೆ!

ಬತ್ತಿದ್ದ ಕೆರೆಗೆ ಪ್ರವಾಹದ ನೀರು ಬಂದು ತುಂಬಿ ಕೆಲಕಾಲ ಕೋಡಿ ಹರಿದು ಒಮ್ಮಿಂದೊಮ್ಮೆಗೇ ಕೆರೆಯೊಡೆದು ಹೋದಂತೆ ಆಗಿತ್ತು ಅವನ ಜೀವನ. ಒಂದು ಜೀವಮಾನದಲ್ಲಿ ನಡೆಯಬಹುದಾದಷ್ಟು ಘಟನೆಗಳು ಒಂದೆ ತಿಂಗಳಲ್ಲಿ ನಡೆದುಹೋಗಿದ್ದುವು. ಕಾರಾಗೃಹವಾಸ, ಮರಣದಂಡನೆ, ವಿವಾಹ–ಅದೂ ತಾನು ಸ್ವಪ್ನದಲ್ಲಿ ಸಹ ಕಾಣಲಾಗದಂಥ ರತಿಯೊಡನೆ–ಮನೆಯನ್ನು ಬೆಳಗಿ ಸಿದ ಆ ಗೃಹಲಕ್ಷ್ಮಿಯೊಡನೆ ಸ್ವರ್ಗ ಸುಖವನ್ನು ಅಣಕಿಸುವಂತೆ ನಡೆಸಿದ ಸಂಸಾರ, ಜೊತೆಯವರಲ್ಲಿ ಕೇರಿಯವರಲ್ಲಿ ಗಣಿಯ ಅಧಿಕಾರಿಗಳಲ್ಲಿ ತನಗೆ ದೊರೆತ ಗೌರವ, ಕಡೆಗೊಂದು ವಿಷಗಳಿಗೆಯಲ್ಲಿ ತನ್ನ ಬುದ್ಧಿಗೆ ಮಂಕು ಕವಿದು ತಾನು ತೋರಿಸಿದ ಗಂಡುತನದ ದರ್ಪ, ಕುಟೀರವನ್ನೇ ಅರಮನೆ ಯೆಂದು ಭಾವಿಸಿ ಒಡತನದ ಬಾಳ್ವೆಯೇ ಸಿರಿವಂತಿಕೆಯ ಸರ್ವಸ್ವವೆಂದು ತಿಳಿದು ತನ್ನ ನೆರಳನ್ನು ಬಯಸಿಬಂದ ಭಾಗ್ಯದೇವತೆಯ ನಿರ್ಗಮನ–ಎಲ್ಲವೂ ಮಿಂಚಿನ ವೇಗದಿಂದ ನಡೆದುಹೋಗಿ ಗಭೀರವಾದ ಶೂನ್ಯತೆಯನ್ನು ಮಾತ್ರ ಉಳಿಸಿದ್ದುವು.

'ಎನಗೆ ಮನಮಿಂದು ಶೂನ್ಯಂ

ಮನೆ ಶೂನ್ಯಂ ಬೀಡು ಶೂನ್ಯಂ ಸಕಲಾ
ವನಿ ಶೂನ್ಯವಾಯ್ತು'

ಎಂದು ಹಲುಬಿದ ದುರ್ಯೋಧನನ ಸ್ಥಿತಿ ತನಗಾಯ್ತು. ಇನ್ನು ಪ್ರಪಂಚದಲ್ಲಿ ಉಳಿದಿರುವುದೇನು ? ಇಂದಿರೆ....ಇಂದಿರೆ....ಎಳೆತನದಲ್ಲಿ ತಬ್ಬಲಿಯಾಗಿ ತಾನೊಬ್ಬನೇ ದಿಕ್ಕಾಗಿರುವ ಆ ಹುಡುಗಿಯ ಪಾಡು ?

ವಸಂತಾದೇವಿಯು ಶ್ರೀಮಂತಳಾಗಿರದೆ ಒಬ್ಬ ಸಾಮಾನ್ಯ ಹೆಣ್ಣಾಗಿರಬಾರದಾಗಿತ್ತೆ ! ಅವಳ ಐಶ್ವರ್ಯವು ಎಂದಿಗೂ ನಟೇಶನನ್ನು ಆಕರ್ಷಿಸಲಿಲ್ಲ; ತಮ್ಮ ದಾಂಪತ್ಯ ಜೀವನಕ್ಕೆ ಅದರಿಂದ ಎಂದಿದ್ದರೂ ಮುಪ್ಪೆಂದು ಅವನಿಗೆಸಿಸಿತ್ತು. ಕಡೆಗೆ ಆದುದೂ ಹಾಗೆಯೇ. ಅವಳ ಕಾರು ಇರದಿದ್ದರೆ ಅವಳಿಗೆ ತನ್ನ ಮಾತನ್ನು ಮೀರುವ ಚಪಲ ಬರುತ್ತಿರಲಿಲ್ಲ.

ವಸಂತಾದೇವಿಯು ಅನುಪಮಸುಂದರಿ ನಿಜ; ಆದರೆ ನಟೇಶನ ಮನವನ್ನೊಲಿಸಿದ್ದುದು ಆ ಸೌಂದರ್ಯವಲ್ಲ. ಅದೂ ತನಗೆ ಎಂದಾದರೊಂದುದಿನ ವಿಪತ್ತನ್ನು ತರಬಹುದು.

ಇವೆರಡಕ್ಕಿಂತ ಹೆಚ್ಚಾಗಿ ಅವಳ ಗುಣವನ್ನು ಅವನು ಮೆಚ್ಚಿದ್ದ. ಕಠಿಣವಾದ ತನ್ನ ಮನಸ್ಸನ್ನು ಸಹ ಮೃದುಗೊಳಿಸುವ ಶಕ್ತಿ ಅವಳ ನಡತೆಯಲ್ಲಿತ್ತು; ತನ್ನ ಕೋಪವನ್ನೆಲ್ಲ ಕರಗಿಸುವ ಕಾವು ಅವಳ ಕಣ್ಣಿನ ನೋಟದಲ್ಲಿತ್ತು. ಮನೆಯೊಳಗೆ ಬರಬೇಡವೆಂದು ತಾನು ಹೇಳಿದಾಗ ಅವಳು ಎರಡು ಗಳಿಗೆ ನಿಂತಿದ್ದು ತನ್ನ ಈ ಶಕ್ತಿಯನ್ನೇಕೆ ಉಪಯೋಗಮಾಡಲಿಲ್ಲ ! ತನ್ನನ್ನೇಕೆ ಪರಾಜಯಗೊಳಿಸಲಿಲ್ಲ ! ಆ ಸೋಲು ತನಗೆಷ್ಟು ಸುಖವಾಗಿರುತ್ತಿತ್ತು !

ಹೆಂಡತಿಯು ಹೊರಟುಹೋದ ವ್ಯಸನವೊಂದುಕಡೆ ಬಾಧಿಸುತ್ತಿದ್ದರೆ ತನ್ನ ದುರ್ದೆಶೆಯನ್ನು ಕಂಡು ಕನಿಕರಿಸುವ ಹಿತೈಷಿಗಳ ಮರುಕ ಆ ವ್ಯಥೆಯನ್ನು ಮರೆಯಗೊಡದೆ ಪ್ರಜ್ವಲಗೊಳಿಸುತ್ತಿತ್ತು. ವೆಂಕಟಾಚಲಯ್ಯನು ಬಂದಾಗಲಂತೂ ನಟೇಶನು ತನ್ನ ದುಃಖವನ್ನು ತಡೆಯಲಾರದೆ ಹೋದ. ತನ್ನ ದುರದೃಷ್ಟಕ್ಕೆ ಆ ಸ್ನೇಹಿತನೂ ಅಂದು ಬೆಳಗ್ಗೆ ಬಂಗಾರಪೇಟೆಗೆ ಹೋಗಿರಬೇಕೆ ! ಅವನು ಅಲ್ಲಿಂದ ಹಿಂತಿರುಗುವ ವೇಳೆಗೆ ಇಷ್ಟೆಲ್ಲಾ ಅನಾಹುತ ಇಲ್ಲಿ ನಡೆದಿತ್ತು.

ವೆಂಕಟಾಚಲಯ್ಯನ ಸಮಸ್ಯೆ ಪೂರ್ಣವಾಗದೆ ಹಾಗೆಯೇ ಉಳಿದು ಹೋಯಿತು ; ನಟೇಶನನ್ನು ವಸಂತಾದೇವಿಯು ಮದುವೆಯಾದುದೇಕೆಂದು ತಿಳಿಯುವುದರೊಳಗಾಗಿಯೇ ಅವರವರ ಸಂಬಂಧ ಕಡಿದುಹೋಗುವ ಸ್ಥಿತಿಗೆ ಬಂತು — ಮಗುವಿನ ಜಾತಕ ಬರೆಸುವುದರೊಳಗೇ ಅದಕ್ಕೆ ಬಾಲಗ್ರಹ ಸೋಕಿತು. ನಟೇಶನನ್ನು ಔಪಚಾರಿಕವಾಗಿ ಸಮಾಧಾನ ಮಾಡುತ್ತಿರುವಾಗ ಅವನ ಮನಸ್ಸು ಮುಂದಿನ ತನ್ನ ಕರ್ತವ್ಯವನ್ನು ಕುರಿತು ಯೋಚಿಸುತ್ತಿತ್ತು. ತಾನು ಆ ಸ್ಥಳದಲ್ಲಿ ಇದ್ದು ಇನ್ನು ಮಾಡುವುದೇನು ? ಆದರೆ, ಯಜಮಾನರ ಅಪ್ಪಣೆಯಿಲ್ಲದೆ ಅಲ್ಲಿಂದ ಕದಲಬಾರದು. ಅದರಿಂದ ಆ ದಿನವೇ ಇಲ್ಲಿ ನಡೆದ ಸಂಗತಿಯನ್ನೆಲ್ಲ ವರದಿಮಾಡಿ ಮುಂದೆ ತಾನು ಏನುಮಾಡಬೇಕೆಂಬ ಬಗ್ಗೆ ಸಂಪಾದಕರ ಇಚ್ಛೆಯನ್ನು ಕೇಳಿದ್ದ.

ಹೆಂಡತಿಯು ಹೋದ ಈ ಮೂರು ದಿನಗಳಲ್ಲಿ ಬಹುಭಾಗವನ್ನು ನಟೇಶನು ಗಣಿಯಲ್ಲೇ ಕಳೆದಿದ್ದ ; ಅಥವಾ ಹೊರಗೆ ಅಲೆಯುತ್ತಿದ್ದ. ಅವನ ಜೀವನದಲ್ಲಿ ನಡೆದ ಈ ದುರ್ಘಟನೆಯು ಅವನ ಮೇಲ್ಪಟ್ಟ ಅಧಿಕಾರಿಗಳಿಗೆ ತಿಳಿದಿತ್ತು. ಅವನ ಉತ್ಕರ್ಷೆಯನ್ನು ನೋಡಿ ಅಸೂಯೆಪಟ್ಟಿದ್ದವರು, ಅವನ ಅದೃಷ್ಟ ಉತ್ತಮಗೊಂಡುದನ್ನು ಕಂಡು ಸಂತೋಷಪಟ್ಟಿದ್ದವರು, ಇತರರ ಆಗುಹೋಗುಗಳಲ್ಲಿ ಸ್ವಭಾವತಃ ಉದಾಸೀನರಾಗಿದ್ದವರು ಎಲ್ಲರೂ ಅವನಿಗಾಗಿ ಮರುಗಿದರು. ಅವನ ಮೇಲಧಿಕಾರಿಯು ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಅವನಿಗೆ ಕೆಲವು ದಿನಗಳ ರಜಕೊಡಲು ಸಿದ್ಧನಾಗಿದ್ದ. ಆದರೆ ನಟೇಶನಿಗೆ ರಜಬೇಕಿರಲಿಲ್ಲ. ಅವನು ಬಯಸುತ್ತಿದ್ದುದು ಕೆಲಸ. ತನ್ನನ್ನೇ ತಾನು ಮರೆಯಬಲ್ಲಷ್ಟು ಕೆಲಸ.

ಬಲು ಕಷ್ಟದಿಂದ ಮೂರನೆಯ ದಿನ ಕಳೆಯುತ್ತಿತ್ತು. ಭೂಗರ್ಭದಲ್ಲಿ ಎಂಟು ಸಾವಿರ ಅಡಿಗಳ ಕೆಳಗೆ ನಟೇಶನು ಕಲ್ಲನ್ನು ಒಡೆಯುತ್ತಿದ್ದ. ಪ್ರಶಾಂತವಾದ ಆವರಣ. ದೈವಯೋಗದಿಂದ ಅವನು ಏಕಾಂಗಿಯಾಗಿದ್ದ ; ಭೂಮ್ಯಾಂತರ್ಗತವಾದ ಚಿಕ್ಕ ಗುಹೆಯೊಂದರಲ್ಲಿ ಅಂದು ಅವನ ಕೆಲಸವಿತ್ತು. ಮೂರು ದಿನಗಳಿಂದ ಅವನಲ್ಲಿ ಉಂಟಾಗಿದ್ದ ಬದಲಾವಣೆಯನ್ನು ಅವನ ಮೇಲಿನ ಅಧಿಕಾರಿಗಳು ಗಮನಿಸಿದ್ದರು; ಅವನಿಗೆ ಇಚ್ಛೆಯಿದ್ದರೆ ಕೆಲವು ದಿನ ರಜ ಕೊಡುವುದಾಗಿಯೂ ತಿಳಿಸಿದರು, ಆದರೆ ನಟೇಶನಿಗೆ ರಜ ಬೇಕಿರಲಿಲ್ಲ. ಅವನ

ಮಾನಸಿಕ ಸ್ಥಿತಿಯನ್ನರಿತು ಅವನಿಗೆ ಹೆಚ್ಚು ಶ್ರಮವಾಗದಿರಲೆಂದೋ ಏನೋ ಈ ಶಾಂತವಾದ ಸ್ಥಳದಲ್ಲಿ ಅವನನ್ನು ಕೆಲಸಕ್ಕೆ ನೇಮಿಸಿದ್ದರು.

ಬಂಗಾರವು ಸೇರಿದ್ದ ಅಥವಾ ಸೇರಿರಬಹುದಾದ ಕಲ್ಲನ್ನು ಒಡೆಯುತ್ತ ನಟೇಶನು ಬಾಹ್ಯ ಪ್ರಪಂಚವನ್ನು ಮರೆಯಲು ಯತ್ನಿಸುತ್ತಿದ್ದ. ಒಂದು ಹೊರತು ಉಳಿದೆಲ್ಲ ಮರೆಯುತ್ತಿತ್ತು—ಅದು ವಸಂತಾದೇವಿಯ ಮುಖ. ತಾನು ಅವಳ ವಿಷಯದಲ್ಲಿ ಬಹಳ ನಿಷ್ಠುರವಾಗಿ ನಡೆದುಕೊಂಡೆನೆಂಬ ಪಶ್ಚಾತ್ತಾಪ ಅವನಲ್ಲಿ ಕುದಿಯುತ್ತಿತ್ತು. ಅವಳ ತಪ್ಪೇನು? ಅವಳ ಹಿರಿಯರು ಲಕ್ಷಾಂತರ ರೂಪಾಯಿ ಗಳಿಸಿಟ್ಟುಹೋದುದು ಅವಳ ತಪ್ಪೆ? ಜ್ಞಾನಾರ್ಜನೆಗಾಗಿ ವಿದ್ಯಾವತಿಯಾದುದು ಅವಳ ತಪ್ಪೆ? ತನ್ನಲ್ಲಿ ಆವೆರಡು ಗುಣಗಳೂ ತನ್ನ ದೌರ್ಭಾಗ್ಯದಿಂದ ಇರದೆಹೋದ ಮಾತ್ರಕ್ಕೇ ಅವಳನ್ನೇಕೆ ತಾನು ಹಿಂಸೆ ಪಡಿಸಬೇಕಿತ್ತು?

ಯಾವುದೋ ಪುಣ್ಯವಿಶೇಷದಿಂದ ನಾಲ್ಕುದಿನ ನನ್ನ ಎಲ್ಲ ಹಿಂಸೆಯನ್ನೂ ತಡೆದುಕೊಂಡು ನನ್ನ ಮನೆಯನ್ನು ಬೆಳಗಿದಳು; ಇನ್ನು ಬಾರಳು. ಬಂದರೆ! ....ಬಂದರೆ!

ವಸಂತಾದೇವಿಯು ಮತ್ತೆ ಬರುವಳೆಂದು ದೂರದ ಆಸೆ ಹೇಳುತ್ತಿತ್ತು. ಅವಳು ಬರುವುದು ಅಸಂಭವವೆಂದು ವಿವೇಕ ಎಚ್ಚರಿಸುತ್ತಿತ್ತು. ಒಂದುವೇಳೆ ಬಂದರೆ?

ಅವಳು ಬಂದರೆ ತನ್ನ ನಡತೆಗಾಗಿ ಕ್ಷಮಾಪಣೆ ಕೇಳಿಬಿಡುತ್ತೇನೆ; ತಪ್ಪು ನನ್ನದು. ದುಡುಕಿ ಮಾತಾಡಿ ಅವಳ ಮನಸ್ಸನ್ನು ನೋಯಿಸಿದ ಅಪರಾಧ ನನ್ನದು. ತಪ್ಪನ್ನು ಒಪ್ಪಿಕೊಳ್ಳುವುದರಲ್ಲಿ ಅವಮಾನವೇನಿಲ್ಲ; ಅವಳನ್ನು ಮುಟ್ಟುವುದು ತಪ್ಪಾಗದಿದ್ದರೆ ಅವಳ ಕಾಲನ್ನು ಹಿಡಿದು ಕೇಳಿಕೊಳ್ಳುತ್ತೇನೆ.

ಛೆ! ಛೆ! ಕಾಲು ಹಿಡಿಯುವುದೆ? ಅವಳಿಗಾಗಿ ನನ್ನ ಮನಸ್ಸು ಇಷ್ಟು ಕೆಳಕ್ಕೆ ಇಳಿಯಿತೆ? ಇಲ್ಲ, ಕೆಳಕ್ಕಿಳಿಯಲಿಲ್ಲ; ಮಾಡಿದ ತಪ್ಪನ್ನು ಒಪ್ಪಿಕೊಳ್ಳುವ ಔದಾರ್ಯ ತೋರಿ ಅದು ಉನ್ನತ ಸ್ಥಾನ ಪಡೆಯಿತು. ಮಾಡಿದ ತಪ್ಪಿಗಾಗಿ ಕ್ಷಮೆ ಕೇಳುವುದು; ಅವಳು ಇಷ್ಟು ದಿನವೂ ತೋರಿಸಿದ ಆದರಕ್ಕಾಗಿ ಏನು ಬೆಲೆ? ಅದೇನೋ ಪ್ರೀತಿ, ಪ್ರೇಮ ಎನ್ನುತ್ತಾರೆ. ಅದನ್ನು

ನಾನರಿಯೆ; ಆದರೆ ಅವಳಿಗಾಗಿ ಏನುಬೇಕಾದರೂ ಮಾಡಬಲ್ಲೆನೆಂಬ ಉತ್ಸಾಹ ವಿದೆ. ಏನಿದ್ದು ಏನು ಪ್ರಯೋಜನ!

ಗಣಿಯ ಕೆಲಸ ನನಗೆ ಹಿತಕರವಾಗಿದೆ. ಸದಾ ಇಲ್ಲಿಯೇ ಇರೆಂದು ಅಧಿಕಾರಿಗಳು ಹೇಳಬಾರದೆ! ಮೇಲೆ ಹೋಗಿ ನಾನು ಮಾಡುವುದಾದರೂ ಏನು? ಏತಕ್ಕಾಗಿ, ಯಾರಿಗಾಗಿ ನಾನು ಮೇಲೆ ಹೋಗಬೇಕು? ಯಾರಿಗಾಗಿ ಜೀವಿಸಿರಬೇಕು?

ಜೀವಿಸಿರುವುದೆ? ಗಣಿಗಳಲ್ಲಿ ದಿನವೂ ಅಪಘಾತಗಳಾಗುತ್ತಲೇ ಇರುತ್ತವೆ. ತಾನಿರುವ ಈ ಸ್ಥಳದಲ್ಲೂ ಅಂಥದೊಂದು ಅಪಘಾತವಾಗಬಾರದೆ? ಇದೇ ಸ್ಥಳವೇ ತನ್ನ ಸಮಾಧಿಯಾಗಬಾರದೆ? ಭೂಮಿಯಿಂದ ಎಂಟು ಸಾವಿರ ಅಡಿಗಳ ಕೆಳಗೆ ತನ್ನ ಸಮಾಧಿ!

ನಟೇಶನ ತಲೆಯಲ್ಲಿ ಹುಚ್ಚುಹುಚ್ಚಾಗಿ ಯೋಚನೆಗಳು ಬರುತ್ತಿದ್ದುವು. ಯೋಚನೆಗಳನ್ನು ತಡೆಗಟ್ಟುವುದಕ್ಕಾಗಿ ಅವನು ಗುದ್ದಲಿಯನ್ನು ಹಿಡಿದು ಅಗೆಯುವನು; ಮೇಕುಗಳನ್ನು ಕಲ್ಲಿನಲ್ಲಿಟ್ಟು ಚಮ್ಮಟಿಕೆಯಿಂದ ಹೊಡೆಯುವನು; ಏನು ಮಾಡಿದರೂ ಸುತ್ತಿಸುತ್ತಿ ಯೋಚನೆಗಳು ಬರುತ್ತಲೇ ಇದ್ದುವು.

ಹೀಗೆ ಕೆಲಸ-ಯೋಚನೆ, ಯೋಚನೆ-ಕೆಲಸಗಳ ನಡುವೆ ತೊಳಲುತ್ತಿದ್ದ ನಟೇಶನಿಗೆ ಯಾರೋ ಮೇಲಿಂದ ಇಳಿದು ಬರುತ್ತಿರುವಂತೆ ಕೇಳಿಸಿತು—ವಿದ್ಯುಚ್ಛಕ್ತಿಯಿಂದ ಕೆಳಗಿಳಿಯುವ 'ಲಿಫ್ಟಿ'ನ ಶಬ್ದ. ಶಬ್ದ ಎರಡು ನಿಮಿಷ ನಿಂತು ಮತ್ತೆ ಅದು ಮೇಲಕ್ಕೆ ಚಲಿಸುತ್ತಿರುವಂತೆ ಕೇಳಿಸಿತು. ಬಂದವರು ಯಾರನ್ನೋ ಇಳಿಸಿ ಅದು ಮೇಲಕ್ಕೆ ಹೋಗುತ್ತಿರುವಂತಿತ್ತು. ಎಂದರೆ, ಬಂದವರು ಯಾರು? ಅಧಿಕಾರಿಗಳು ಬಂದಿದ್ದರೆ ಅದು ತಕ್ಷಣ ಮೇಲಕ್ಕೆ ಹೋಗುತ್ತಿರಲಿಲ್ಲ; ಅವರು ಹಿಂತಿರುಗುವುದಕ್ಕಾಗಿ ಕಾಯುತ್ತಿತ್ತು.

ನಟೇಶನು ಕುತೂಹಲದಿಂದ ಗುಹೆಯ ಬಾಗಿಲಕಡೆ ನೋಡುತ್ತಿದ್ದ. ಉರಿಯುತ್ತಿದ್ದ ವಿದ್ಯುಚ್ಛಕ್ತಿಯ ಬೆಳಕಿನಲ್ಲಿ ಅವನು ಕಂಡುದು ಯಾರನ್ನು?

ಯಾರನ್ನು ನೋಡುವುದು ಈ ಜನ್ಮದಲ್ಲಿ ಇನ್ನು ಸಾಧ್ಯವಿಲ್ಲವೆಂದು ನಿರಾಶೆಪಡುತ್ತಿದ್ದನೋ ಅವಳು—ತನ್ನ ವಸಂತಾ—ಬರುತ್ತಿದ್ದಾಳೆ. ಅವಳ ಹಿಂದೆ ಒಬ್ಬ ಗಂಡಸು. ಅವನನ್ನೆಲ್ಲಿಯೋ ನೋಡಿದಹಾಗಿದೆ; ನೆನಪಾಗವಲ್ಲದು.

ವಸಂತಳ ಮುಖವನ್ನು ನೋಡಿದ ಕ್ಷಣದಲ್ಲಿ ನಟೇಶನ ಹೃದಯ ಹೊಡೆದುಕೊಳ್ಳತೊಡಗಿತು. ತನ್ನಂತೆಯೇ ಅವಳೂ ಸಹ ತನ್ನನ್ನು ಬಿಟ್ಟಿರಲಾರದೆ ಇಲ್ಲಿಗೆ ಬಂದಿರಬಹುದೆ ಎಂಬ ಆಸೆ.

ಆದರೆ ಜೊತೆಗೆ ಇನ್ನೊಬ್ಬ ಗಂಡಸನ್ನೇಕೆ ಕರೆದುತಂದಿದ್ದಾಳೆ? ಮನೆಗೆ ಬರದೆ ಇಲ್ಲಿಗೇಕೆ ಬಂದಿದ್ದಾಳೆ?

ಗಣಿಯೊಳಗೆ ಒಬ್ಬಳೇ ಇಳಿಯಲು ಹೆದರಿ ಜೊತೆಗೆ ಗಂಡಸನ್ನು ಕರೆದು ತಂದಿರಬಹುದೆ? ಅಷ್ಟು ಹೆದರಿಕೊಂಡಾದರೂ ಇಲ್ಲಿಗೆ ಬಂದು ಇಲ್ಲೇ ತನ್ನನ್ನು ನೋಡುವಂಥ ಅವಸರವಾದ ಕೆಲಸವೇನು?

ನಟೇಶನ ತಲೆಯಲ್ಲಿ ಈ ಪ್ರಶ್ನೆಗಳ ಮಾಲೆ ಸುಳಿಯುತ್ತಿದ್ದ ಹಾಗೇ ವಸಂತಾದೇವಿಯು ಅವನಕಡೆ ಕೈತೋರಿಸುತ್ತ 'ಅದೋ, ಅಲ್ಲಿದಾನೆ ಸ್ವಾಮಿ' ಎಂದಳು.

ಬರಲೆ, ಬೇಡವೆ ಎನ್ನುವಷ್ಟು ಸಂದೇಹದ ಹೆಜ್ಜೆಗಳನ್ನಿಡುತ್ತ ವಸಂತಾದೇವಿಯು ನಟೇಶನ ಕಡೆಗೆ ಬಂದಳು; ನಿಂತಕಡೆಯಿಂದಲೇ ನಟೇಶನು ಅವಳನ್ನು ದಿಟ್ಟಿಸಿ ನೋಡುತ್ತಿದ್ದ. ಎರಡು ಗಳಿಗೆ ಇಬ್ಬರೂ ಮೌನವಾಗಿದ್ದರು. ಏನು ಮಾತಾಡುವುದು, ಹೇಗೆ ಆಡುವುದು? ಮೊದಲಿನ ನಟೇಶನಾಗಿದ್ದರೆ 'ಇಲ್ಲಿಗೇಕೆ ಬಂದೆ?' ಎಂದು ಕೇಳುತ್ತಿದ್ದ. ಕಳೆದ ಮೂರು ವಾರಗಳಲ್ಲಿ ಕಾಡಾನೆ ಪಳಗಿದೆ; ಕಳೆದ ಮೂರು ದಿನಗಳಲ್ಲಿ ಅದು ಅತಿಯಾಗಿ ಸೊರಗಿದೆ; ಏನು ಮಾತಾಡಿದರೆ ಹೇಗೋ ಎಂದು ನಟೇಶ ಸುಮ್ಮನಿದ್ದ. ಹೆಂಡತಿಯ ಮುಖವನ್ನು ಮತ್ತೆ ಕಂಡುದೇ ಅವನಿಗೆ ಸಾಕಾಗಿತ್ತು.

ವಸಂತಳಾದರೂ ಮಾತಿಗಾಗಿ ತನ್ನ ಜ್ಞಾನಕೋಶವನ್ನು ಹುಡುಕುತ್ತಿದ್ದಳು. ದೊಡ್ಡ ದೊಡ್ಡ ಸಭೆಗಳಲ್ಲಿ ನಿರರ್ಗಳವಾಗಿ ಭಾಷಣ ಮಾಡಬಲ್ಲ ಚದುರೆ ತನ್ನವನಾದ ತನ್ನ ಜೀವನದ ಸಾರಥಿಯಾದ ಪತಿಯ ಮುಂದೆ ಮಾತನ್ನೆತ್ತಲು ಯೋಚನೆ ಮಾಡಬೇಕಾಗಿತ್ತು. ವಿಷಯದ ಗುರುತ್ವ ಹಾಗಿತ್ತು. ಯೋಚನೆ ಬಗೆಹರಿಯದೆ ಅದನ್ನು ಬೇರೆಯವರ ಮೇಲೆ ಹಾಕುವ ಜಾಣ್ಮೆಯಿಂದ ಸ್ವಾಮಿಯತ್ತ ತಿರುಗಿ

'ನಾವು ಬಂದಿರುವ ಕೆಲಸವೇನೆಂದು ಹೇಳಿ, ಸ್ವಾಮಿ' ಎಂದಳು.

ಸ್ವಾಮಿಯು ನೆಕ್‌ಟೈಯನ್ನು ಸಡಲಿಸುತ್ತ ಗಂಟಲನ್ನು ಸರಿಮಾಡಿ ಕೊಂಡು ನ್ಯಾಯಾಸ್ಥಾನದಲ್ಲಿ ಮೊಟ್ಟಮೊದಲನೆಯಸಲ ವಾದವನ್ನಾರಂಭಿಸಲು ಹೊರಟ ಲಾಯರಂತೆ ವಿನಾಕಾರಣ ಉಗುಳು ನುಂಗುತ್ತ

'ಅದೇ ಅದೇ ನಾವು ಇಲ್ಲಿಗೆಬಂದ ಕೆಲಸತಾನೆ?' ಎಂದು ಕೇಳಿದ.

'ಹೌದು.'

ತಾನುಬಂದ ಕೆಲಸವನ್ನು ತಿಳಿಸುವುದಕ್ಕೆ ಮೂರನೆಯವನ ಮಧ್ಯಸ್ಥಿಕೆ! ಗಾಳಿ ಅನುಕೂಲವಾಗಿ ಬೀಸುತ್ತಿಲ್ಲವೆಂದು ನಟೇಶನಿಗೆ ತೋರಿತು.

ಸ್ವಾಮಿಯು ಇದ್ದುದರಲ್ಲಿ ಸ್ವಲ್ಪ ಧೈರ್ಯ ತಂದುಕೊಂಡು ನಟೇಶನನ್ನು ಇಂಗ್ಲಿಷಿನಲ್ಲಿ ಮಾತನಾಡಿಸಿದ.

'I hope you are Mr. Natesh.'

'ಅವರಿಗೆ ಇಂಗ್ಲಿಷ್ ಬರುವುದಿಲ್ಲ; ಕನ್ನಡದಲ್ಲಿ ಮಾತನಾಡಿ ಸ್ವಾಮಿ.' ಎಂದು ವಸಂತಾದೇವಿ ತಿದ್ದಿದಳು.

'ಓ! I am sorry. ನಿಮ್ಮ ಹೆಸರು ನಟೇಶ್ ಎಂತಲೆ?'

ಪ್ರಶ್ನೆ ನಟೇಶನ ರಕ್ತವನ್ನು ಕಾಯಿಸತೊಡಗಿತು.

'ಯಾರೆಂದು ತಿಳಿದು ಇಲ್ಲಿಗೆ ಬಂದಿರಿ? ದಾರಿ ತಪ್ಪಿತೆ? ಬೇರೆ ಎಲ್ಲಿ ಗಾದರೂ ಹೋಗಬೇಕಾಗಿತ್ತೆ?'

'ಇಲ್ಲ.....ನಿಮ್ಮ ಹತ್ತಿರಕ್ಕೇ ಬಂದೆವು.'

'ಹಾಗಿದ್ದರೆ ಈ ನಿಮ್ಮ ನಾಗರಿಕತೆಯ ನಾಟಕವನ್ನು ಬಿಟ್ಟು, ಬಂದ ಕೆಲಸವೇನೆಂದು ಹೇಳಿ.'

ಸ್ವಾಮಿಗೆ ಮತ್ತೆ ಗಂಟಲು ಹಿಡಿದುಕೊಂಡಿತು. ಪ್ರಯತ್ನದಿಂದ

'ಈಕೆ....ಈಕೆ....' ಎಂದ.

'ಏನು ಈಕೆ?'

'ನಿಮಗೆ....?'

................

'ನಿಮಗೆ....ಅಲ್ಲ, ನಿಮ್ಮನ್ನು ಮದುವೆಯಾದುದು ಯಾವುದೋ ತಪ್ಪಿ ನಿಂದ.'

'ಅದರ ಸುದ್ದಿ ನಿಮಗೇಕೆ?'

ಅವರು ನನ್ನ ಪರವಾಗಿ ಮಾತನಾಡುತ್ತಾರೆ' ಎಂದು ವಸಂತಾದೇವಿ ಸ್ವಲ್ಪ ಗತ್ತಿನಿಂದಲೇ ಹೇಳಿದಳು.

ನಟೇಶನು ಅವಳ ಕಡೆಗೆ ಒಂದು ಕ್ಷಣ ನೋಡಿ

'ಮಹಾರಾಣಿಯವರು ತಮ್ಮ ಸಂಸಾರಕ್ಕೆ ಸಂಬಂಧಿಸಿದ ಮಾತಿನಲ್ಲಿ ಲಾಯರನ್ನು ತಂದಹಾಗಿದೆ' ಎಂದು ಕಟುವಾಗಿ ನುಡಿದ.

'ಅವರು ಲಾಯರಲ್ಲ.'

'ಮತ್ತೆ ಯಾರೆಂದು ನಾನು ತಿಳಿಯಲಿ ?'

'ಅದನ್ನು ನೀವು ತಿಳಿಯಬೇಕಾಗಿಲ್ಲ.'

'ಯಾರೆಂದು ತಿಳಿಯದವರ ಪ್ರಶ್ನೆಗೆ ನಾನು ಉತ್ತರ ಕೊಡಬೇಕಾಗಿಯೂ ಇಲ್ಲ.'

'ನಾನು ಹೇಳುತ್ತೇನೆ' ಎಂದು ಸ್ವಾಮಿ ಮಧ್ಯೆ ಮಾತನಾಡಿದ.

'ಲಾಯರಾಗಿ ನಾನಿಲ್ಲಿ ಬಂದಿಲ್ಲ. ನಾನು ವಸಂತಾದೇವಿಯವರ ಬಾಲ್ಯ ಸ್ನೇಹಿತ; ಅಲ್ಲದೆ....'

'ಅಲ್ಲದೆ ಏನು ?'

ಸ್ವಾಮಿಯು ವಸಂತಾದೇವಿಯ ಕಡೆ ತಿರುಗಿ

'ಹೇಳಲೆ ?' ಎಂದು ಕೇಳಿದ.

'ಹೇಳಿ; ಭಯವೇನು ?' ಎಂದು ಉತ್ತರ ಬಂತು.

'ಅಲ್ಲದೆ, ನಾನು ಈಕೆಯ ಕೈಹಿಡಿಯುವಾತ.'

ಈ ಮಾತು ಕೇಳಿ ನಟೇಶನಿಗೆ ಕೋಪ ಬಂತು, ನಗು ಬಂತು. ಕೋಪವನ್ನು ನುಂಗಿಕೊಂಡು ನಗುವನ್ನು ಮುಂದುಮಾಡಿದ.

'ಏಕೆ ನಗುತ್ತೀರಿ ?'

'ನಿಮ್ಮ ಅವಿವೇಕಕ್ಕೆ. ವಸಂತಾದೇವಿಗೆ ಆಗಲೇ ಮದುವೆಯಾಗಿದೆ.'

'ಅದು ನನಗೂ ತಿಳಿದಿದೆ. ಆ ಮದುವೆಯಿಂದ ನೀವು ಈಕೆಯನ್ನು ಬಿಡುಗಡೆ ಮಾಡಬೇಕು.'

'ಎಂದರೆ ?'

'ಈಕೆಯು ನಿಮಗೆ ಬೇಕಿಲ್ಲವೆಂದು ಬರೆದು ಕೊಡಬೇಕು.'

'ನಾನೇಕೆ ಬರೆದುಕೊಡಲಿ ? ಸುಳ್ಳನ್ನು ನಾನು ಬರೆದು ಕೊಡಲಾರೆ.'

'ಸುಳ್ಳೋ ನಿಜವೋ; ನೀವು ಆ ರೀತಿ ಬರೆದು ಕೊಡಲೇಬೇಕು.'

'ಏಕೆ ?'

'ಅದು ವಸಂತಾದೇವಿಯ ಅಪೇಕ್ಷೆ.'

'ಆ ಅಪೇಕ್ಷೆಯನ್ನು ಪೂರೈಸುವುದಕ್ಕೆ ಹೋಗಿಯೇ ಇಷ್ಟೆಲ್ಲ ಆಗಿರುವುದು. ಅಪೇಕ್ಷೆಯೆಂದು ಮದುವೆಯಾದುದಾಯಿತು, ಅಪೇಕ್ಷೆಯೆಂದು ನಂಬಿ ಮನೆಯಲ್ಲಿಟ್ಟುಕೊಂಡುದಾಯಿತು, ಈಗ ಇದೊಂದು ಹೊಸ ಅಪೇಕ್ಷೆ ಹುಟ್ಟಿದೆ. ಎರಡುಸಲಕ್ಕೆ ಸಾಕಾದಷ್ಟು ಬುದ್ಧಿ ಬಂದಿದೆ; ಇನ್ನೊಂದುಸಲವೂ ಎಡವಿ ಬೀಳುವುದಿಲ್ಲ.'

ವಸಂತಾದೇವಿಯ ಮುಖ ಬಾಡಿತು; ತಾನು ನಿರೀಕ್ಷಿಸಿದಂತೆ ಇವನು ಮೊಂಡುತನ ಮಾಡುತ್ತಿದಾನೆ. ತನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡದಿದ್ದರೆ ಮುಂದೆ ತನ್ನ ಗತಿ? ತನ್ನ ತಾತನು ಬಿಟ್ಟುಹೋದ ಆಸ್ತಿಯ ಗತಿ? ಸ್ವಾಭಿಮಾನ ಅವನಿಗೆ ಮಣಿಯಬೇಡವೆನ್ನುತ್ತಿತ್ತು; ಸನ್ನಿವೇಶ ಅವನ ಕಾಲನ್ನು ಕಟ್ಟದೆ ವಿಧಿಯಿಲ್ಲವೆನ್ನುತ್ತಿತ್ತು.

ಸ್ವಾಮಿಯು ಸ್ವಲ್ಪ ದರ್ಪವನ್ನು ತೋರಿಸಿ ನೋಡಿದ.

'ನಾನು ಯಾರೆಂದು ಬಹುಶಃ ನಿಮಗೆ ತಿಳಿಯದು; ಒಳ್ಳೆಯ ಮಾತಿನಲ್ಲಿ ನಾನು ಹೇಳಿದಂತೆ ಬರೆದುಕೊಡಿ; ಇಲ್ಲವಾದರೆ ತೊಂದರೆ ಪಡಬೇಕಾದೀತು.'

ನಟೇಶನು ತಿರಸ್ಕಾರದಿಂದ ಉತ್ತರಕೊಟ್ಟ.

'ಬೆದರಿಸುತ್ತೀರೋ! ಪಾಪ! ಹೆಂಗಸಿನ ರಕ್ಷಣೆಯಲ್ಲಿ ನೀವೀಗ ಇಲ್ಲದಿದ್ದರೆ ಈ ನಿಮ್ಮ ಬೆದರಿಕೆಗೆ ಉತ್ತರ ಸರಿಯಾಗಿ ಸಿಕ್ಕುತ್ತಿತ್ತು, ಹೊರಡಿ ಆಚೆ. ಹುಂ.'

ವಿರಸದಿಂದ ಕೆಲಸವಾಗುವುದಿಲ್ಲವೆಂದರಿತ ವಸಂತ ತಾನೇ ಮಾತನಾಡಿ ನೋಡಿದಳು.

'ಕೋಪಿಸಬೇಡಿ ನಟೇಶ್. ನನಗಾಗಿ ನೀವು ಎಷ್ಟೋ ತೊಂದರೆಗಳನ್ನನುಭವಿಸಿದೀರಿ; ಇದೊಂದು ಮಾತನ್ನು ನಡೆಸಿಕೊಡಿ.'

'ಏಕೆ ?.... ಏಕೆ ?.... ಏಕೆ ?'

'ಅದಕ್ಕೆ ಏನೆಂದು ಉತ್ತರ ಹೇಳಲಿ ?'

ಸ್ವಾಮಿಯು ಮತ್ತೆ ಮಾತನಾಡಿದ.

'ಅಷ್ಟು ನಿಮಗೆ ತಿಳಿಯುವುದಿಲ್ಲವೆ ನಟೇಶ್. ನಿಮ್ಮ ಸಂಬಂಧ ಇವರಿಗೆ ಬೇಕಿಲ್ಲ. ಕಾರಣ, ನೀವು ಅವರನ್ನು ಪ್ರೀತಿಸುತ್ತಿಲ್ಲ; ಪ್ರೀತಿ ಎಂದರೆ ಏನೆಂಬುದೇ ನಿಮಗೆ ತಿಳಿಯದು.'

'ಹಾಗೋ! ಹಾಗಾದರೆ ನೀವು ಈಕೆಯನ್ನು ಪ್ರೀತಿಸುತ್ತೀರೋ?'

'ಓಹೋ, ಖಂಡಿತವಾಗಿ.'

'ಅದಕ್ಕೆ ಗುರುತೇನು?'

'ಏನು ಗುರುತು ಬೇಕು? ಬೆಟ್ಟದಿಂದ ಧುಮುಕಲೆ, ಸಮುದ್ರದಲ್ಲಿ ಮುಳುಗಲೆ, ಕಾಳಸರ್ಪದ ಹುತ್ತದಲ್ಲಿ ಕೈಯಿಡಲೆ, ಸಿಂಹ ಶಾರ್ದೂಲಗಳ ಮುಂದೆ ಹೋಗಿ ನಿಲ್ಲಲೆ?'

'ಭಲಾ, ಭಲಾ! ಬಹಳ ಸಾಹಸವಂತರಾಗಿಬಿಟ್ಟಿರಿ—ಮಾತಿನಲ್ಲಿ.'

ವಸಂತಳಿಗೆ ಸಂತೋಷದಿಂದ ಮೈ ಉಬ್ಬುತ್ತಿತ್ತು; ಕೆನ್ನೆಗಳು ಕೆಂಪೇರುತ್ತಿದ್ದುವು.

'ಮಾತಿನಲ್ಲೇಕೆ, ಈಕೆ ಬೇಕೆಂದು ಕೇಳಿದುದನ್ನು ತಕ್ಷಣವೇ ನಡೆಸಿಕೊಡುವುದೇ ನನ್ನ ಪ್ರೀತಿಗೆ ಸಾಕ್ಷಿ. ಈಕೆಗಾಗಿ ನನ್ನ ಜೀವವನ್ನು ಬೇಕಾದರೂ ಕೊಡುತ್ತೇನೆ. ತಿಳಿಯಿತೆ?'

ಈಗ ತಾನೇನು ಮಾಡಬೇಕೆಂದು ನಟೇಶನಿಗೆ ಯೋಚನೆಗಿಟ್ಟುಕೊಂಡಿತು. ಅವಳು ತನ್ನೊಂದಿಗೆ ಪುನಃ ಸಂಸಾರ ಮಾಡುವಳೆಂಬ ಮಾತು ಕನಸಿನ ಗಂಟಾಯಿತು. ಅದೇನೋ ಬಿಡುಗಡೆ ಎನ್ನುತ್ತಿದ್ದಾರೆ. ಅದೇನು ಮದುವೆಯೋ ಅದೇನು ಬಿಡುಗಡೆಯೋ ದೇವರೇ ಬಲ್ಲ. ಶ್ರೀಮಂತರ ನಡವಳಿಕೆಯೇ ಒಂದು ವಿಚಿತ್ರವಾಗಿದೆ. ಅವಳ ಶ್ರೇಯಸ್ಸನ್ನು ಕುರಿತು ತನಗೇನು ಎಂದು ಸುಮ್ಮನಿರಲೆ, ಅಥವಾ ತನಗೆ ಒಲಿಯದ ಜೀವ ಎಲ್ಲಾದರೂ ಸುಖವಾಗಿರಲಿ ಎಂದು ಅದಕ್ಕೆ ಹಿತವಾಗುವಂತೆ ನಡೆದುಕೊಳ್ಳಲೆ? ತನ್ನ ಜಗತ್ತಂತೂ ಇಲ್ಲಿಗೆ ಶೂನ್ಯವಾಯಿತು; ತನ್ನಿಂದ ಇತರರ—ಅಥವಾ ಅವಳ ಸುಖಕ್ಕೆ ಅಡ್ಡವೇಕೆ ಬರಬೇಕು?

ಹೀಗೆಂದು ವಿಚಾರ ನಡೆದು

'ಈಕೆಯನ್ನು ನೀವು ಸುಖವಾಗಿ ನೋಡಿಕೊಳ್ಳುವಿರಾ ಸ್ವಾಮಿ?' ಎಂದ.

ಮಾತಿನಲ್ಲಿ ನಡುಕವಿತ್ತು; ಯಾತನೆಯ ದನಿಯಿತ್ತು.

'ಸುಖವಾಗಿ! ಈಕೆಯ ಕಾಲಿಗೆ ನನ್ನ ಕಣ್ಣನ್ನು ಹಾಸುತ್ತೇನೆ.'

'ಸಂತೋಷ. ನನ್ನಿಂದ ಅವಳ ಸುಖಕ್ಕೆ ಅಡ್ಡಿಯಾಗದಿರಲಿ. ಅದೇನು ಬರೆಯಬೇಕೋ ಬರೆಯಿರಿ, ರುಜು ಹಾಕುತ್ತೇನೆ.'

ವಸಂತಾದೇವಿ ತನ್ನ ಕಿವಿಯನ್ನೇ ತಾನು ನಂಬಲಾರದೆ ಹೋದಳು. ಎಷ್ಟು ಉದಾರವಾದ ಗುಣ ಇವನದು! ತನ್ನನ್ನು ಇವನು ನಿಜವಾಗಿ ಪ್ರೀತಿಸುತ್ತಿರಬಹುದೆ? ಇಲ್ಲವಾದರೆ ತನ್ನ ಹೃದಯವನ್ನು ಕೊರೆಯುವಂಥ ಈ ದನಿಯೇಕೆ ಅವನಿಂದ ಬರುತ್ತಿದೆ?

ನಟೇಶನು ಏನನ್ನೋ ಜ್ಞಾಪಿಸಿಕೊಂಡವನಂತೆ ಸ್ವಾಮಿಯನ್ನು ಕುರಿತು ಹೇಳಿದ.

'ನಿಮಗೆ ಇನ್ನೊಂದು ಮಾತನ್ನು ಹೇಳಬೇಕಾಗಿದೆ; ಹೆಂಗಸು ಇರುವಾಗ ಈ ಮಾತು ಹೇಳಬಹುದೋ ಇಲ್ಲವೋ ತಿಳಿಯದು. ಆದರೂ, ಈಕೆಯನ್ನು ಮದುವೆಯಾಗಲು ಬಯಸುವ ನೀವು ತಿಳಿದಿರಬೇಕಾದ ಮಾತು ಅದು, ಅದರಿಂದ ಹೇಳುತ್ತಿದೇನೆ. ಈಕೆ ಮೂರು ವಾರ ನನ್ನ ಮನೆಯಲ್ಲಿದ್ದಳೆಂದು ನೀವು ಶಂಕೆ ಪಡಬೇಕಾಗಿಲ್ಲ; ಈಕೆಯ ಶೀಲಕ್ಕೆ ಭಂಗ ಬಂದಿಲ್ಲ; ಕನ್ಯೆಯಾಗಿ ಬಂದವಳು ಕನ್ಯೆಯಾಗಿಯೇ ಉಳಿದಿದಾಳೆ.'

ನಟೇಶನ ಕಾಲನ್ನು ಹಿಡಿದು ನಮಸ್ಕರಿಸೋಣವೆನ್ನುವಷ್ಟು ಸಂತೋಷ ವಸಂತಳಿಗಾಯಿತು. ಅವನ ಒಳ್ಳೆಯತನಕ್ಕೆ ತಕ್ಕ ವಿದ್ಯೆ ಐಶ್ವರ್ಯಗಳೂ ಇದ್ದಿದ್ದರೆ!

ಸ್ವಾಮಿಯೂ ಆ ಮಾತನ್ನು ಕೇಳಿ ಒಂದು ಗಳಿಗೆ ಅವಾಕ್ಕಾದ.

ನಟೇಶನು ರುಜುಹಾಕಲು ಒಪ್ಪಿಗೆ ಕೊಟ್ಟ ಆಕಸ್ಮಿಕ ಸಂತೋಷದಿಂದ ಸ್ತಬ್ಧವಾಗಿದ್ದ ಪರಿಸ್ಥಿತಿಯು ತಿಳಿತಮೇಲೆ ಸ್ವಾಮಿಯು ತನ್ನ ಕೈಚೀಲದಿಂದ ಒಂದು ಕಾಗದವನ್ನು ತೆಗೆದ—ತಿಳಿದ ಲಾಯರಿಂದ ಬರೆಸಿ ಟೈಪ್ ಮಾಡಿಸಿದ್ದ ಒಪ್ಪಿಗೆಯ ಕಾಗದ. ಅದನ್ನು ನಟೇಶನ ಕೈಗೆ ಕೊಟ್ಟು

'ಬೇಕಾದರೆ ಓದಿಕೊಳ್ಳಿ' ಎಂದ.

'ಓದಬೇಕಾಗಿಲ್ಲ. ಪೇನಾ ಕೊಡಿ, ರುಜು ಮಾಡುತ್ತೇನೆ. ಎಲ್ಲಿ ಮಾಡಬೇಕು ? '

ಬಹು ಕಷ್ಟದಿಂದ ಹೇಳಿದ ಇಷ್ಟು ಮಾತುಗಳು ಮುಗಿಯುತ್ತಲೇ ನಟೇಶನು ದೊಡ್ಡದಾಗಿ ಒಂದು ನಿಟ್ಟುಸಿರುಬಿಟ್ಟ. ನಿಟ್ಟುಸಿರು ಚಂಡಮಾರುತವಾಯಿತೆಂದು ಕಾಣುತ್ತದೆ. ನೊಂದ ಹೃದಯದಿಂದ ಬಂದ ಆ ಉಸಿರು ಪ್ರಕೃತಿದೇವಿಯನ್ನು ಕೆರಳಿಸಿರಬೇಕು. ನೂರಾರು ಸಿಡಿಲುಗಳು ಒಮ್ಮೆಲೇ ಹೊಡೆದಂತೆ ಭೂಗರ್ಭದಲ್ಲಿ ಶಬ್ದವಾಯಿತು. ಛಟ್, ಛಟಲ್, ಛಟಲೆಂದು ನಿರಂತರವಾಗಿ ಭೋರ್ಗರೆಯತೊಡಗಿತು. ಅನಿರೀಕ್ಷಿತವಾಗಿ ಇಂಥ ಭಯಂಕರ ಶಬ್ದವನ್ನು ಕೇಳಿ ಸ್ವಾಮಿಯೂ ಕಂಗೆಟ್ಟು ಕಿವಿ ಮುಚ್ಚಿದ; ವಸಂತಾದೇವಿಯು ಚೀತ್ಕರಿಸಿದಳು; ನಟೇಶನು ಕುತೂಹಲದಿಂದ ಶಬ್ದ ಎಲ್ಲಿಂದ ಬರುತ್ತಿದೆಯೆಂಬುದನ್ನು ತಿಳಿಯುವ ಪ್ರಯತ್ನದಲ್ಲಿದ್ದ.

ಶಬ್ದವಾದ ಒಂದೆರಡು ನಿಮಿಷಗಳಲ್ಲೇ ಅಪಾಯ ಸೂಚನೆಯ ಸೈರೆನ್ನುಗಳು ಶಿಳ್ಳು ಹಾಕತೊಡಗಿದುವು. ಗಣಿಯ ಯಾವುಗೋ ಭಾಗದಲ್ಲಿ ಅಪಘಾತವಾಗಿದೆಯೆಂದೂ ಕೆಲಸಗಾರರೆಲ್ಲರೂ ತಕ್ಷಣ ಮೇಲಕ್ಕೆ ಹೊರಟುಬರಬೇಕೆಂದೂ ಅದರ ಸಂಕೇತ. ಕಿವಿಗಳು ಕೋರೈಸುವಂತೆ ಅವು ಆರ್ತಸ್ವರದಿಂದ ಕೂಗಿಕೊಳ್ಳುತ್ತಿರುವುದು ಸ್ವಾಮಿ ವಸಂತಾದೇವಿಯರಿಗೆ ಇನ್ನಷ್ಟು ಎದೆಗೆಡಿಸಿತು. ಕೈಕಾಲುಗಳು ಗಡಗಡನೆ ನಡುಗುತ್ತಿರಲು ವಸಂತಾದೇವಿಯು

'ಏನಾಯಿತು ನಟೇಶ್; ಏನು ಈ ಶಬ್ದ. ಹೇಳಿ, ಹೇಳಿ! ' ಎಂದು ಅಂಗಲಾಚಿದಳು.

ಮಾತನಾಡಲು ಆಗ ವೇಳೆಯಿರಲಿಲ್ಲ, ಸೈರೆನ್ನುಗಳ ಶಬ್ದ ಕೇಳಿದೊಡನೆ ತಾವು ಅಲ್ಲಿಂದಾಚೆ ಹೊರಟುಬಿಡಬೇಕು. ಆದರಿಂದ ನಟೇಶನು ನಾಲ್ಕೇ ಹೆಜ್ಜೆಗೆ ಅವರಿದ್ದ ಗುಹೆಯ ಬಾಗಿಲ ಬಳಿ ಬಂದು ಮೇಲಕ್ಕೆ ತಮ್ಮನ್ನು ಕರೆದೊಯ್ಯುವ ದಾರಿಯಕಡೆ ನೋಡಿದ. ಅತ್ತಲಿಂದ ಕಲ್ಲು ಮಣ್ಣು ಕೆಳಕ್ಕೆ ಸುರಿಯುತ್ತಿತ್ತು. ತಾವು ಮೇಲಕ್ಕೆ ಹೋಗಬಹುದಾದ ದಾರಿ ಮುಚ್ಚಿ ಹೋಗಿತ್ತು.

ಮುಂದೆ ದಾರಿ!

ಒಂದು ಗಳಿಗೆ ನಟೇಶನು ಅಪ್ರತಿಭನಾದ. ತನ್ನ ಜೀವಮಾನದಲ್ಲಿ ಎಂದೂ ನಡೆಯದ ಮಹತ್ತರವಾದ ಘಟನೆಯನ್ನು ಈಗ ಎದುರಿಸಬೇಕಾಗಿದೆ. ಬಹುಶಃ ತನ್ನ ಅಂತ್ಯಕಾಲ ಸಮೀಪಿಸಿದಂತೆ ಕಾಣುತ್ತಿದೆ.

ದೈವಲೀಲೆ ವಿಚಿತ್ರವಾದುದು. ತನ್ನೊಂದಿಗೆ ಇನ್ನೆರಡು ಜೀವಗಳೂ ಇಲ್ಲಿ ಸಿಕ್ಕಿಕೊಂಡುವು. ತನ್ನಿಂದ ಬಿಡುಗಡೆ ಹೊಂದಲು ಬಂದ ವಸಂತಾ ದೇವಿ, ಅವಳ ಕೈಹಿಡಿದು ಸುಖಪಡಬೇಕೆಂದು ಬಂದ ಸ್ವಾಮಿ, ಇಬ್ಬರೂ ಇಲ್ಲಿ ಸಮಾಧಿಯಾಗುವ ಹಾಗಾದರು. ಜೀವಂತವಾಗಿ ಸಮಾಧಿ, ಭೂಮಿಯಿಂದ ಎಂಟು ಸಾವಿರ ಅಡಿಗಳ ಕೆಳಗೆ.

ವಾಸ್ತವಿಕತೆಯ ಅರಿವು ಕ್ಷಣಿಕವಾಗಿ ತೋರಿದ ಭಯವನ್ನು ಮರೆಸಿತು. ದೊಡ್ಡದೊಂದು ಸಮಸ್ಯೆಯನ್ನು ದೇವರು ಪರಿಹರಿಸಿದ; ಶೂನ್ಯವಾದ ಈ ಜಗತ್ತಿನಿಂದ ತನ್ನನ್ನು ಬಹುಬೇಗ ಪಾರುಮಾಡಿದ.

ನಟೇಶನು ಸಂತೋಷಾತಿರೇಕಗೊಂಡವನಂತೆ ನಗುತ್ತ ಅವರಿಬ್ಬರಿದ್ದೆಡೆಗೆ ಬಂದ. ಭಯಗೊಂಡಿದ್ದ ಅವರು ಆ ಭಯದ ಕಾರಣ ತಿಳಿಯದೆ ಇದ್ದುದರ ಜೊತೆಗೆ ನಟೇಶ ಹೀಗೆ ಹುಚ್ಚನಂತೆ ನಗುತ್ತಿರುವುದನ್ನು ಕಂಡು ಭೂಮಿಗಿಳಿದು ಹೋದರು.

'ಏನಾಯಿತು ನಟೇಶ್, ಏನಾಯಿತು' ಎಂದು ಸ್ವಾಮಿ ಕೇಳಿದ.

'ನೀವು ನಗುವುದು ನೋಡಿದರೆ ನನ್ನ ಎದೆ ಒಡೆಯುತ್ತಿದೆ. ಏನಾಯಿತೆಂದು ಹೇಳಿ ನಟೇಶ್.' ಎಂದು ವಸಂತ ಬೇಡಿಕೊಂಡಳು.

'ಏನಾಯಿತೆಂದು ಹೇಳಿದರೆ ಭಯಪಡುವುದಿಲ್ಲತಾನೆ ? '

'ಈಗ ಪಡುತ್ತಿರುವ ಭಯವೇ ಸಾಲದೆ ? ತಿಳಿಯದೆ ಭಯಪಡುತ್ತಿರುವುದಕ್ಕಿಂತ ತಿಳಿದು ಭಯವನ್ನಣಗಿಸೋಣ.'

'ನೀವು ಬಿಡುಗಡೆಯನ್ನು ಬಯಸಿ ಬಂದಿರಿ. ದೇವರು ನಿಮ್ಮನ್ನು ನಿಮ್ಮ ಜೊತೆಗೆ ನನ್ನನ್ನೂ ಬಿಡುಗಡೆ ಮಾಡಿದ.'

'ಎಂದರೆ ? '

'ಎಂದರೆ, ನಾವು ಮೂವರೂ ಇಲ್ಲಿ ಸಮಾಧಿಯಾಗಿದ್ದೇವೆ. ಅಲ್ಲಿ ಉರಿಯುತ್ತಿರುವ ದೀಪವನ್ನು ನೋಡಿ.'

ಅಲ್ಲಿರುವ ಒಳ್ಳೆಯ ಗಾಳಿ ಎಷ್ಟೆಂಬುದನ್ನು ಸೂಚಿಸುವ ಡೇವೀಸ್ ಸೇಫ್ಟಿ ಲ್ಯಾಂಪಿನ ಕಡೆಗೆ ನಟೇಶ ತೋರಿಸಿದ.

'ನಮ್ಮ ಜೀವಗಳು ಇಲ್ಲಿ ಎಷ್ಟುಕಾಲ ಇರುತ್ತದೆಂಬುದನ್ನು ಅದು ತೋರಿಸುತ್ತದೆ.'

'ಮೊದಲೇ ಭಯಗೊಂಡಿದೇವೆ. ನಿಮ್ಮದಮ್ಮಯ್ಯ, ಮತ್ತಷ್ಟು ಹೆದರಿಸಬೇಡಿ. ಏನಾಯಿತೆಂದು ಸರಿಯಾಗಿ ಹೇಳಿ.'

'ಹೇಳುವುದಿನ್ನೇನು ? ಗಣಿಯ ಮೇಲಿನ ಪದರದಲ್ಲಿ ಅಪಘಾತವಾಗಿದೆ. ನಾವು ಹೊರಗೆ ಹೋಗುವ ದಾರಿ ಮುಚ್ಚಿಹೋಗಿದೆ. ಇಲ್ಲಿಂದ ನಾವು ಮೇಲಕ್ಕೆ ಹೋಗುವಹಾಗಿಲ್ಲ.'

'ಹಾಗಿದ್ದರೆ ನಮ್ಮಗತಿ' ಎಂದು ಇಬ್ಬರೂ ಒಮ್ಮೆಲೇ ಕೇಳಿದರು.

'ಗತಿ ಮುಗಿಯಿತು.'

'ಗಣಿಯವರು ದಾರಿ ಬಿಡಿಸುವವರೆಗೂ ನಾವು ಇಲ್ಲೇ ಇರಬೇಕೆ?' ಎಂದು ಸ್ವಾಮಿ ಕೇಳಿದ.

'ನಾವು ಎಂದರೆ ನಮ್ಮ ದೇಹಗಳು. ನಮ್ಮ ಜೀವ ಅದಕ್ಕಿಂತ ಎಷ್ಟೋ ಮುಂದಾಗಿ ಹೊರಟುಹೋಗಿರುತ್ತದೆ.'

'ಮುಂದಾಗಿ ಎಂದರೆ, ಇನ್ನೂ ಎಷ್ಟುಕಾಲ?'

'ಇನ್ನು ಇಪ್ಪತ್ತು ನಿಮಿಷ ಜೀವಿಸಿರಬಹುದು.'

ಮೃತ್ಯುವು ಹೆಗಲ ಮೇಲೆ ಬಂದು ಕುಳಿತಿರುವಂತೆ ವಸಂತಾದೇವಿಗೆ ತೋರಿತು. ದೂರ ಇದ್ದವಳು ಹೆದರಿಕೊಂಡಂತೆ ನಟೇಶನ ಹತ್ತಿರಕ್ಕೆ ಬಂದು ಕೈಜೋಡಿಸಿ

'ನಿಮಗೆ ಕೈಮುಗಿಯುತ್ತೇನೆ; ಇಲ್ಲಿಂದ ಪಾರಾಗುವುದಕ್ಕೆ ಏನಾದರೂ ಉಪಾಯಮಾಡಿ. ಮನಸ್ಸು ಮಾಡಿದರೆ ನೀವು ದಾರಿಯನ್ನು ಹುಡುಕಬಲ್ಲಿರಿ. ದಾರಿ ಹುಡುಕಿ, ಹುಡುಕಿ, ಹುಡುಕಿ.'

ಹೆಣ್ಣುಜೀವ ಅಂಗಲಾಚುತ್ತಿದೆ, ಅದರ ಮಾತು ಕೇಳು ಎಂದು ಮನಸು ಹೇಳುತ್ತಿತ್ತು; ದಾರಿ ಹುಡುಕಿ ಆಗುವುದೇನು, ಜೀವಿತದ ಆಸೆ ಇನ್ನೇಕೆ ಎಂದು ಅವಿವೇಕ ಹಿಂದಕ್ಕೆಳೆಯುತಿತ್ತು.

ವಿಧಿ ಎಂಥ ಸನ್ನಿವೇಶವನ್ನು ತಂದೊಡ್ಡಿತು? ವಿದ್ಯಾಮದ, ಐಶ್ವರ್ಯ ಮದದಿಂದ ಬೀಗುತ್ತಿದ್ದ ಎರಡು ಶ್ರೀಮಂತ ಜೀವಗಳು ನಿರುಪಾಯರಾಗಿ ನಿಸ್ಸಹಾಯರಾಗಿ ಒಬ್ಬ ಕೂಲಿಯವನ ಕಾಲು ಕಟ್ಟಬೇಕಾಯಿತು. ಅಂಥ ದೊಡ್ಡವರೆಂದು ಹೆಮ್ಮೆ ಪಡುತ್ತಿದ್ದವರಿಗೆ ನೆರವಾಗುವ ಅವಕಾಶವನ್ನು ವಿಧಿ ತನಗಾಗಿ ಕಲ್ಪಿಸಿತು. ಅದೇ ನಟೇಶನಿಗೊಂದು ಹೆಮ್ಮೆ.

ನಟೇಶನು ಸುಮ್ಮನಿರುವುದನ್ನು ಕಂಡು

'ನನಗೆ ಸುಖವಾಗಲೆಂದು ಹಾರೈಸಿದವರು ನೀವೇ ಅಲ್ಲವೆ ನಟೇಶ್, ಉಸಿರುಕಟ್ಟಿ ನಾನಿಲ್ಲಿ ಸಾಯುವುದು ನಿಮಗೆ ಸಂತೋಷವೆ? ಹೆಣ್ಣಿನ ಮೇಲೆ ಗಂಡು ಛಲ ಸಾಧಿಸುವ ರೀತಿ ಇದೇನೆ?' ಎಂದಳು.

ಅಲಗಿಗಿಂತ ಹರಿತವಾದ ಹೆಣ್ಣಿನ ನಾಲಗೆಯು ನಟೇಶನ ಗಂಡುತನವನ್ನು ಅಣಕಿಸಿತು. ನಿದ್ರೆ ಮಾಡುತ್ತಿದ್ದ ಮೆದುಳು ಚಾಟಿಯಿಂದ ಹೊಡೆದಂತೆ ಎಚ್ಚರಗೊಂಡಿತು. ನೆಲದ ಮೇಲೆ ಬಿದ್ದಿದ್ದ ಸುತ್ತಿಗೆಯೊಂದನ್ನು ತೆಗೆದುಕೊಂಡು ಗುಹೆಯ ಗೋಡೆಗಳನ್ನು ಅಲ್ಲಲ್ಲಿ ಸುತ್ತಿಗೆಯಿಂದ ಹೊಡೆಯುತ್ತ ಶಬ್ದ ಕೇಳತೊಡಗಿದ. ಸುಮಾರು ಐದು ನಿಮಿಷ ಪರೀಕ್ಷೆ ನಡೆಸಿದ ಮೇಲೆ ಮನಸ್ಸಿಗೆ ಏನೋ ಸಮಾಧಾನವಾದಂತಾಯಿತು.

ನಟೇಶನು ಮಾಡುತ್ತಿದ್ದ ಪರೀಕ್ಷೆಯನ್ನು ಇಬ್ಬರೂ ಸದ್ದಿಲ್ಲದೆ ನೋಡುತ್ತಿದ್ದರು. ಇಬ್ಬರೂ ಜೀವವನ್ನು ಕೈಯಲ್ಲಿ ಹಿಡಿದು ಕ್ಷಣಕ್ಕೊಮ್ಮೆ ಲ್ಯಾಂಪಿನ ಕಡೆ ನೋಡುತ್ತಿದ್ದರು. ಅದರಲ್ಲಿ ಉರಿಯುತ್ತಿದ್ದ ದೀಪದ ಜ್ವಾಲೆಯು ಬರುಬರುತ್ತ ಕಡಮೆಯಾಗುತ್ತಿತ್ತು.

ಸಮಾಧಾನಗೊಂಡ ನಟೇಶನು ಶಬ್ದ ಬಂದ ಆ ಭಾಗದಲ್ಲಿ ಒಂದು ರಂಧ್ರವನ್ನು ಕೊರೆದು ಅದರಲ್ಲಿ ಸಿಡಿಮದ್ದನ್ನಿಟ್ಟು ಬತ್ತಿಯನ್ನು ಸೇರಿಸಿ ಸ್ವಾಮಿ ಮತ್ತು ವಸಂತಾದೇವಿಯವರಿದ್ದೆಡೆಗೆ ಬಂದು ಅಲ್ಲಿ ತಾನೇ ಅಂದು ಕೆಡವಿದ್ದ ಬಂಡೆಯ ಮೇಲೆ ಕುಳಿತುಕೊಂಡ. ಏನಾಯಿತೋ ತಿಳಿಯಬೇಕೆಂಬ ಕುತೂಹಲದಿಂದ ವಸಂತಾದೇವಿ ಮಾತನಾಡಿದಳು.

'ಏನು ಯೋಚನೆ ಮಾಡಿದಿರಿ, ನಮಗೂ ಹೇಳಬಾರದೆ? ವೇಳೆ ಕಳೆಯುತ್ತ ಬಂತಲ್ಲ!'

'ಹೌದು ಇನ್ನು ಹೆಚ್ಚು ಹೆಚ್ಚೆಂದರೆ ಹತ್ತು ನಿಮಿಷ ಇರಬಹುದು.'

'ಹಾಗಿದ್ದರೆ ತಡವೇಕೆ ?'

'ಅದಕ್ಕೆ ಕಾರಣವಿದೆ. ಪ್ರಕೃತಿದೇವಿಯ ಕೋಪದಿಂದ ಬಿಡುಗಡೆಯಾಗುವುದು ನಿಮ್ಮ ಮದುವೆಯ ಬಿಡುಗಡೆಯಷ್ಟು ಸುಲಭವಲ್ಲ. ಅದಕ್ಕೆ ತಕ್ಕ ಶಾಂತಿಯಾಗಬೇಕು.'

'ಏನು ಶಾಂತಿಬೇಕು ?'

'ಒಂದು ಜೀವ. ನಾವು ಮೂವರಲ್ಲಿ ಒಬ್ಬರು ಆಹುತಿಯಾದರೆ ಉಳಿದ ಇಬ್ಬರು ಇಲ್ಲಿಂದ ಪಾರಾಗಬಹುದು.'

'ಇದೇನು ಸಮಸ್ಯೆ, ಬಿಡಿಸಿ ಹೇಳಿ. ಪ್ರಾಣಹೋಗುವ ವೇಳೆಯಲ್ಲೂ ವಿನೋದವೆ ?'

'ವಿನೋದವಲ್ಲ ದೇವಿ, ವಾಸ್ತವ. ಅಲ್ಲಿ ನೋಡಿ. ಆ ಗೋಡೆಯಲ್ಲಿ ಸಿಡಿಮದ್ದನ್ನು ಇಟ್ಟಿದೇನೆ. ಸಿಡಿಮದ್ದಿಗೆ ಬೆಂಕಿ ಕಾಣಿಸಿದೊಡನೆ ಆ ಗೋಡೆ ಬೆಂಕಿ ಇಟ್ಟವನ ಮೇಲೆ ಬೀಳುತ್ತದೆ; ಅವನು ಉಳಿಯುವ ಸಂಭವವಿಲ್ಲ. ಆದರೆ ಆ ಗೋಡೆ ಉರುಳಿದರೆ ಅದರಾಚೆಯಿಂದ ಉಳಿದ ಇಬ್ಬರೂ ಪಾರಾಗಬಹುದು. ಈಗ ಸಿಡಿಮದ್ದಿಗೆ ಬೆಂಕಿ ಇಡುವರಾರೆಂಬುದೇ ಇತ್ಯರ್ಥವಾಗಬೇಕಾದ ವಿಚಾರ.'

ಸ್ವಾಮಿ, ವಸಂತಾದೇವಿಯವರು ಒಬ್ಬರ ಮುಖವನೊಬ್ಬರು ನೋಡಿಕೊಂಡರು. ನಟೇಶನು ಮತ್ತೆ ಹೇಳಿದ

'ನಾವು ಮೂವರಲ್ಲಿ ವಸಂತಾದೇವಿ ಹೆಂಗಸು. ಆಕೆಯಿಂದ ಈ ಕೆಲಸ ಮಾಡಿಸುವುದು ಸಾಧುವಲ್ಲ. ನಾವಿಬ್ಬರು ಗಂಡಸರು ಇದೇವೆ.'

ನಟೇಶನು ಸೂಚಕವಾಗಿ ಸುಮ್ಮನಾದ. ಸ್ವಾಮಿಯು ಸಂದೇಹ ಪರಿಹಾರಕ್ಕಾಗಿ ಕೇಳಿದ

'ಆ ಗೋಡೆ ಬಿದ್ದು ಸಾಯುವುದು ಖಂಡಿತವೆ ?'

'ಹದಿನೈದಾಣೆ ಭಾಗ ಖಂಡಿತ. ಇನ್ನು ಒಂದಾಣೆ ಭಾಗದಲ್ಲಿ ಉಳಿದರೆ ಅದೊಂದು ಪವಾಡವೆಂದೇ ಹೇಳಬೇಕು.'

ಸ್ವಾಮಿಗೆ ಮುಂದೆ ಪ್ರಶ್ನೆ ಹಾಕಲು ಮನಸಾಗಲಿಲ್ಲ. ನಟೇಶನೇ ಮಾತನ್ನು ಪರಿಷ್ಕಾರಗೊಳಿಸಿದ.

'ಈಗ ನಮ್ಮ ಮುಂದೆ ಮುಖ್ಯವಾಗಿರುವುದು ಆಕಸ್ಮಾತ್ತಾಗಿ ಅಪಾಯಕ್ಕೆ ಸಿಕ್ಕಿರುವ ವಸಂತಾದೇವಿಯನ್ನು ಹೇಗೆ ಪಾರುಮಾಡಬೇಕೆನ್ನುವುದು. ಪಾರಾಗುವ ದಾರಿಯನ್ನು ತೋರಿಸಿದ್ದೇನೆ. ಆಕೆಯ ಮೇಲೆ ಪ್ರೀತಿ ಇದೆ ಎಂದು ಎದೆ ತಟ್ಟಿ ಹೇಳುತ್ತಿದ್ದವರು ಈಗ ಅವಳನ್ನು ಉಳಿಸಿಕೊಳ್ಳಬಹುದು.'

ವಸಂತಾದೇವಿಯು ಸ್ವಾಮಿಯಕಡೆ ಸ್ವಾಭಾವಿಕವಾಗಿ ತಿರುಗಿ ನೋಡಿದಳು. ಮೃತ್ಯುವಿಗೂ ತನಗೂ ನಡುವೆ ಇನ್ನು ಹತ್ತು ನಿಮಿಷಗಳು ಮಾತ್ರ ಇದ್ದುವು. ಆ ಮೃತ್ಯುವನ್ನು ನಿವಾರಿಸುವ ದಾರಿಯನ್ನು ನಟೇಶ ತೋರಿಸಿದ್ದ. ತಾನಿನ್ನೂ ಬದುಕುವ ಸಂಭವವಿದೆಯೆಂಬ ಆಸೆ ಆ ಹೆಣ್ಣಿನಲ್ಲಿ ಹುಟ್ಟಿತ್ತು. ಅಂತೆಯೇ ತನಗೆ ದಿಕ್ಕಾದ, ದಿಕ್ಕಾಗಲು ಬಯಸುವ ಗಂಡಿನ ನೆರವನ್ನು ಹಾರೈಸಿ ಅತ್ತ ನೋಡಿತು.

ನಟೇಶನ ಮಾತು ಸ್ವಾಮಿಯ ಮೇಲೆ ಸಿಡಿಲಿನಂತೆ ಬಿತ್ತು; ಅದರ ತಾಡನೆಯಿಂದ ಆಗಲೇ ಕಂಗೆಟ್ಟಿದ್ದ ಅವನ ಮುಖದ ಮೇಲೆ ವಸಂತಾದೇವಿಯ ಕಣ್ಣ ಮಿಂಚು ಸುಳಿಯಿತು. ತಾನು ಬಲಿಯಾಗಿ ಇವರನ್ನುಳಿಸಬೇಕೆ?

ಸಾವಿನ ನೆನಪಾಗುತ್ತಲೇ ಅವನ ಮೈ ನಡುಗಿತು; ಮುಖವು ನಿಸ್ತೇಜವಾಯಿತು; ಗಂಟಲೊಣಗಿತು; ಕಣ್ಣುಗಳು ಶೂನ್ಯತೆಯಲ್ಲಿ ಬೆರೆತುವು.

ಸ್ವಾಮಿಯ ಅವಸ್ಥೆಯನ್ನು ವಸಂತ ಕಂಡಳು; ಅವನು ಸಿಡಿಮದ್ದನ್ನು ಹಾರಿಸಲಾರನೆಂಬ ಸಂಶಯ ಹುಟ್ಟಿತು. ಆದರೂ ಚಾಪಲ್ಯದಿಂದ ಕೇಳಿದಳು.

'ಏನುಮಾಡುತ್ತೀರಿ ಸ್ವಾಮಿ! ಸುಮ್ಮನೆ ಕುಳಿತರೆ ಪ್ರಯೋಜನವಿಲ್ಲ. ನಮ್ಮಿಬ್ಬರ ಪೈಕಿ ಒಬ್ಬರು ನಿರ್ಧರಿಸಲೇಬೇಕು. ನಮ್ಮನ್ನು ಉಳಿಸುವುದಕ್ಕಾಗಿ ನಟೇಶ ಈ ಸಾಹಸಕ್ಕೆ ಕೈಹಾಕಬೇಕೆಂದು ಬಯಸುವುದು ಸರಿಯಲ್ಲ. ಅವರು ಇಷ್ಟುಮಟ್ಟಿಗೆ ದಾರಿ ತೋರಿಸಿರುವ ಉಪಕಾರವೇ ಸಾಕಾಗಿದೆ. ಏನು ಹೇಳಿ, ನೀವು ಸಿಡಿಮದ್ದನ್ನು ಹಾರಿಸುತ್ತೀರೋ ಅಥವಾ ನಾನು ಹಾರಿಸಲೊ?'

'ಹಾ! ನೀವೆ? ಬೇಡ, ಬೇಡ.'

'ಇಬ್ಬರಲ್ಲಿ ಯಾರಾದರೂ ಅದನ್ನು ಹಾರಿಸಲೇಬೇಕು. ನಾನು ಹಾರಿಸುವುದು ಬೇಡವಾದರೆ ನೀವಾದರೂ ಅದನ್ನು ಮಾಡಬೇಕು.'

ಸ್ವಾಮಿಗೆ ಅದನ್ನು ಕೇಳಿ ಅಳುವೇ ಬಂದುಬಿಟ್ಟಿತು. ಕಣ್ಣಲ್ಲಿ ನೀರು ಸುರಿಸುತ್ತ

'ಹೇಗೆಮಾಡಲಿ ದೇವಿ ? ನನ್ನ ಕೊಲೆಯನ್ನು ನಾನೇ ಹೇಗೆ ಹಾರೈಸಲಿ ?' ಎಂದ.

ಸ್ವಾಮಿಯ ದುರವಸ್ಥೆ ವಸಂತಾದೇವಿಯ ಮನಸ್ಸನ್ನು ಕೆಡಿಸಿತು. ಈಗ ಸ್ವಲ್ಪಹೊತ್ತಿಗೆ ಮುಂಚೆ ಪ್ರೀತಿ, ತ್ಯಾಗ ಎಂದು ಉದ್ದವಾದ ಭಾಷಣ ಮಾಡಿದವನು ಇವನೇ ಅಲ್ಲವೆ ? ಇವಳ ಸುಖಕ್ಕಾಗಿ ತನ್ನ ಜೀವವನ್ನು ಬೇಕಾದರೂ ಕೊಡುತ್ತೇನೆಂದು ಕೊಚ್ಚಿಕೊಂಡವನು ಇವನೇ ಅಲ್ಲವೆ? ಇವನ ಮಾತು ನಿಜವೆಂದು ತಿಳಿದು ಉಬ್ಬಿದೆ. ತನ್ನ ರಕ್ಷಕನಿವನೆಂದು ಹಾರೈಸಿದೆ. ಹೇಡಿ!

ಇವರಿವರ ನಡುವೆ ನಡೆಯುತ್ತಿದ್ದ ದೃಶ್ಯವನ್ನು ನಟೇಶ ನಗೆಮೊಗದಿಂದ ನೋಡುತ್ತಿದ್ದ. ವಸಂತ ಅತ್ತಕಡೆ ಒಮ್ಮೆ ನೋಡಿದಳು. ಅವನೂ ಸಾವಿನ ಮುಂದೆ ಕುಳಿತಿದ್ದಾನೆ, ಆದರೂ ಹಸನ್ಮುಖಿಯಾಗಿದ್ದಾನೆ. ಮೊದಲದಿನ ತಾನು ಅವನನ್ನು ಜೈಲಿನಲ್ಲಿ ಕಂಡ ನೆನಪಾಯಿತು. ಆಗಲೂ ಅವನು ಸಾವಿನ ಎದುರಿಗೆ ನಿಂತಿದ್ದ, ಆದರೂ ಸ್ವಲ್ಪವೂ ಚಿಂತೆಯಿಲ್ಲದೆ ನಗುತ್ತಿದ್ದ. ಎಂಥ ಗಂಡೆದೆ ಅವನದು ಎಂಬ ಅಭಿಮಾನ ಅವಳಲ್ಲಿ ಹುಟ್ಟಿತು.

ಇಬ್ಬರೂ ಸುಮ್ಮನಿರುವುದನ್ನು ನೋಡಿ ನಟೇಶನು

'ವೇಳೆಯಾಗುತ್ತ ಬಂತು' ಎಂದು ಎಚ್ಚರಿಸಿದ.

ಗುಹೆಯಲ್ಲಿನ ಗಾಳಿ ಆಗಲೇ ಕಡಮೆಯಾಗಿತ್ತು; ಅವರು ಉಸಿರಾಡುವುದು ಕಷ್ಟವಾಗಿ ತೋರುತ್ತಿತ್ತು ; ಗಾಳಿ ಸಾಲದೆ ಅವರು ಕೆಮ್ಮಲು ಆರಂಭಿಸಿದರು ; ಮೈಯೆಲ್ಲ ಬೆವತು ನೀರು ಸುರಿಯುತ್ತಿತ್ತು ; ಸೇಫ್ಟಿ ಲ್ಯಾಂಪಿನ ದೀಪ ಇನ್ನೂ ಚಿಕ್ಕದಾಯಿತು

'ಇನ್ನು ಐದು ನಿಮಿಷಗಳ ಅವಧಿಯಿದೆ' ಎಂದ ನಟೇಶ.

ಸ್ವಾಮಿಯಿಂದ ಕೆಲಸವಾಗದೆಂದು ನಿಶ್ಚಯಿಸಿ ವಸಂತಾದೇವಿ ನಟೇಶನ ಬಳಿಗೆ ಬಂದು

'ಬೆಂಕಿಪಟ್ಣ ಕೊಡಿ. ನಾನು ಸಿಡಿಮದ್ದನ್ನು ಹಾರಿಸುತ್ತೇನೆ' ಎಂದಳು.

ನಟೇಶನು ಅಚ್ಚರಿಯಿಂದ ಅವಳನ್ನು ದುರುಗುಟ್ಟಿ ನೋಡಿದ.

'ಅದಕ್ಕೆ ಬೆಂಕಿ ಸೋಕಿದ ಕೂಡಲೇ ನೀನು ಸಾಯುತ್ತೀಯೆ.'

'ಚಿಂತೆಯಿಲ್ಲ. ಹೇಗೂ ಸಾಯುವುದು ನಿಜ. ನೀವಾದರೂ ಇಲ್ಲಿಂದ ಪಾರಾಗಿ.'

'ನಾನು ಪಾರಾಗಿ ನಿನ್ನನ್ನು ಸಾಯಲು ಬಿಡುವುದೆ? ಒಂದು ಹೆಣ್ಣನ್ನು ಬಲಿಗೊಟ್ಟು ಜೀವವನ್ನುಳಿಸಿಕೊಳ್ಳುವುದೆ? ಅದು ನಟೇಶನಿಂದ ಆಗದ ಕೆಲಸ.'

'ಉಸಿರುಕಟ್ಟಿ ಎಲ್ಲರೂ ಸಾಯುವುದಕ್ಕಿಂತ ಅದು ಮೇಲು.'

ನಟೇಶನು ನಿರ್ಧಾರದಿಂದ ಹೇಳಿದ

'ಇಲ್ಲಿ ಕೇಳು ದೇವಿ. ಸಿಡಿ ಮದ್ದನ್ನು ಅಲ್ಲಿಟ್ಟಾಗಲೇ ಅದನ್ನು ನಾನೇ ಹಾರಿಸುವನೆಂದು ನಿಶ್ಚಯಿಸಿದೆ. ನಿನ್ನ ಈ ಸಕ್ಕರೆ ಬೊಂಬೆಯು ಏನು ಮಾಡುತ್ತದೋ ನೋಡೋಣವೆಂದು ಕಾದೆ. ಪ್ರೀತಿಯೆಂದರೆ ಏನೆಂಬುದನ್ನು ನಾನರಿಯೆ ನಿಜ. ಆದರೆ ಕೈಹಿಡಿದ ಹೆಂಡತಿಯನ್ನು, ಕಷ್ಟದಲ್ಲಿ ಸಿಕ್ಕಿರುವ ಹೆಣ್ಣನ್ನು ಉಳಿಸಲು ನನ್ನ ಜೀವ ತೆರಬಲ್ಲುದನ್ನು ಬಲ್ಲೆ. ನಾನೇ ಮದ್ದಿಗೆ ಬೆಂಕಿಯಿಡುತ್ತೇನೆ.'

ವಸಂತಾದೇವಿ ಅವನ ಮಾತನ್ನು ನಂಬಲಾರದವಳಂತೆ ಅಚ್ಚರಿಯಿಂದ ನೋಡುತ್ತಿದ್ದಳು. ಅವನು ಮಾತನ್ನು ನಿಲ್ಲಿಸುತ್ತಲೇ

'ಆದರೆ, ನೀವು.... ನೀವು....'

'ಹೌದು. ನಾನು ಸಾಯುತ್ತೇನೆ. ಚಿಂತೆಯಿಲ್ಲ. ಹಿಂದೊಮ್ಮೆ ಆಗಲೇ ಸತ್ತಿದ್ದೆ. ದೇವರ ದಯೆಯಿಂದ ಉಳಿದುಕೊಂಡೆ. ಇಂದು ನನ್ನ ಕೈಹಿಡಿದವಳ ಜೀವವನ್ನುಳಿಸುವುದಕ್ಕಾಗಿ ಸಾವನ್ನು ಎದುರಿಸುತ್ತೇನೆ. ಎಲ್ಲಾದರೂ ನೀನು ಸುಖವಾಗಿರು. ನನ್ನಿಂದ ನಿನಗೆ ಇದೊಂದು ಉಪಕಾರವಾದರೂ ಆಗಲಿ.'

ನಟೇಶನು ಮೇಲಕ್ಕೆದ್ದ. ವಸಂತಾದೇವಿಯ ಅಜ್ಞಾನ ಹರಿಯಿತು. ಇವನು ತನ್ನನ್ನು ಪ್ರೀತಿಸುತ್ತಿದಾನೆ; ಪ್ರಪಂಚದ ಎಲ್ಲಕ್ಕಿಂತಲೂ ಹೆಚ್ಚಾಗಿ ತನ್ನನ್ನು ಪ್ರೀತಿಸುತ್ತಿದಾನೆ. ಇದನ್ನು ಕಂಡುಕೊಳ್ಳದೆ ಹೋದೆ.

ನಟೇಶನು ಮುಂದಕ್ಕೆ ಎರಡು ಹೆಜ್ಜೆಯಿಟ್ಟ. ವಸಂತಳ ಹೊಟ್ಟೆಯಲ್ಲಿ ಬಡಬಾಗ್ನಿ ಬಿದ್ದಷ್ಟು ಸಂಕಟವಾಯಿತು. ತಟ್ಟನೆ ಹೋಗಿ ಅವನನ್ನು ಅಡ್ಡಗಟ್ಟಿ

ಬೇಡ ನಟೇಶ್. ನೀವು ಬೆಂಕಿ ಹಚ್ಚಬೇಡಿ. ನೀವು ಸಾಯುವುದನ್ನು ನೋಡಲಾರೆ. ಸತ್ತರೆ ಮೂರು ಜನರೂ ಒಟ್ಟಿಗೆ ಸಾಯೋಣ. ಬೇಡಿ, ಬೇಡಿ' ಎಂದು ಅರಚಿಕೊಂಡಳು.

ಮಾತು ಧಾರಾಳವಾಗಿ ಬರದಂತೆ ಕೆಮ್ಮು ಅಡ್ಡ ಬರುತ್ತಿತ್ತು.

'ದಾರಿ ಬಿಡು ದೇವಿ ; ಹುಚ್ಚಳಂತೆ ಮಾತಾಡಬೇಡ.' ಎಂದು ನಟೇಶ ಅವಳನ್ನು ನಿವಾರಿಸಲೆತ್ನಿಸಿದ.

ವಸಂತಾದೇವಿಯ ಹೃದಯ ಪ್ರೇರಿಸಿತು. ಮುಂದೆ ಹೆಜ್ಜೆಯಿಟ್ಟ ನಟೇಶನನ್ನು ಎರಡು ತೋಳುಗಳಿಂದಲೂ ಬಿಗಿದಪ್ಪಿದಳು.

'ನೀವು ನನ್ನ ಪತಿ. ನೀವು ಸಾಯುವುದನ್ನು ನೋಡಲಾರೆ. ಹೋಗ ಬೇಡಿ' ಎಂದು ಮತ್ತೆ ಕೇಳಿಕೊಂಡಳು.

ಅವಳ ಹಿಡಿತದಿಂದ ಬಿಡಿಸಿಕೊಳ್ಳಲು ನಟೇಶನು ಯತ್ನಿಸಿದ. ತನ್ನ ತೋಳಲ್ಲಿ ಆ ಶಕ್ತಿಯಿಲ್ಲವೆಂಬಂತೆ ತೋರಿತು. ಕಣ್ಣಲ್ಲಿ ನೀರು ಸುರಿಸುತ್ತ ತನ್ನನ್ನು ಬಿಗಿದಪ್ಪಿದ್ದ ವಸಂತ ತನ್ನ ಪತಿದೇವನ ತುಟಿಯ ಮೇಲೆ ಪ್ರೇಮದ ಮುದ್ರೆಯೊತ್ತಿದಳು.

ತನ್ನ ಸಮ್ಮತಿಯಿಲ್ಲದೆ ಮುಟ್ಟಕೂಡದೆಂದು ಕರಾರುಮಾಡಿಕೊಂಡವಳು ತಾನಾಗಿ ಮುತ್ತಿಟ್ಟಳು !

ಯಾವುದೋ ವಿನೂತನವಾದ ಊಹಾತೀತವಾದ ಸುಖದ ಸಾಮ್ರಾಜ್ಯ ದಲ್ಲಿ ತೇಲಿಹೋಗುತ್ತಿರುವಂತೆ ನಟೇಶನಿಗೆ ತೋರಿತು. ಅವಳನ್ನು ಅಲ್ಲಿಂದ ಪಾರುಮಾಡಬೇಕು, ರೆಪ್ಪೆ ಮುಚ್ಚುವುದರೊಳಗಾಗಿ ಅಲ್ಲಿಂದ ಆಚೆಗೆ ದಾಟಿಸ ಬೇಕು, ಇಲ್ಲವಾದರೆ ವೇಳೆ ಮೀರೀತು ಎಂದು ಅವನರಿಯದ ಯಾವುದೋ ಚೇತನ ಒಳಗಿಂದ ಒತ್ತಾಯಪಡಿಸಿತು. ಬಿಗಿದಪ್ಪಿದ್ದ ಪ್ರೇಯಸಿಯನ್ನು ಬಲವೆಲ್ಲ ಬಿಟ್ಟು ಬೇರೆಮಾಡಿ

'ಹೋಗು ದೂರ, ಕಾಲ ಮೀರುತ್ತಿದೆ' ಎಂದು ದೂರ ನೂಕಿದ.

ಅವನು ನೂಕಿದ ರಭಸಕ್ಕೆ ವಸಂತಾದೇವಿಯು ಹತ್ತು ಹಜ್ಜೆ ಆಚೆ ಹೋಗಿ ನೆಲದಮೇಲೆ ಬಿದ್ದುಬಿಟ್ಟಳು. ನಟೇಶನು ಬೆಂಕಿ ಕಡ್ಡಿಯನ್ನು ಕೈಯಲ್ಲಿ ಹಿಡಿದು ಇತ್ತ ತನ್ನ ಪ್ರಿಯತಮೆಯನ್ನೊಮ್ಮೆ ಅತ್ತ ಗೋಡೆಯ ಲ್ಲಿಟ್ಟಿದ್ದ ಸಿಡಿಮದ್ದನ್ನೊಮ್ಮೆ ನೋಡಿದ. ಇನ್ನೊಂದು ಗಳಿಗೆಯಲ್ಲಿ ತನ್ನ ಆಯುಸ್ಸು ಮುಗಿಯಬಹುದು. ಈಗ ತಾನು ಸಂತೋಷದಿಂದ ಪ್ರಾಣ ಬಿಡು ತ್ತೇನೆ. ಯಾವ ಹೆಣ್ಣು ತನಗೆ ಒಲಿಯಲಿಲ್ಲವೆಂಬ ಕೊರಗು ಅವ್ಯಕ್ತವಾಗಿ ಒಳಗೇ ಬಾಧಿಸುತ್ತಿದ್ದಿತೋ ಅವಳು ಈಗ ತನ್ನವಳಾಗಿದ್ದಾಳೆ. ತನ್ನಿಂದ

ದೂರವಾಗಿರಿಸಲು ಸರ್ವ ಪ್ರಯತ್ನ ನಡೆಸಿದ ಅವಳ ಮನಸ್ಸನ್ನು ಈಗ ತನಗೆ ಕೊಟ್ಟಿದಾಳೆ. ಅವಳನ್ನು ಈಗಿನ ಕಷ್ಟದಿಂದ ಪಾರುಮಾಡಲು ಈ ಜೀವ ಇನ್ನು ಹೋದರೂ ಚಿಂತೆಯಿಲ್ಲ. ಜೀವನದ ಕಡೆಯ ಗಳಿಗೆಯು ಬಹು ಸುಖ ಮಯವಾಯಿತು.

ಅನಿರೀಕ್ಷಿತವಾದ ಈ ಸುಖವನ್ನೊದಗಿಸಿದವನು ನಮ್ಮ ಕಣ್ಣುಮರೆಯಲ್ಲಿ ನಿಂತು ಜಗತ್ತಿನ ನಾಟಕವನ್ನಾಡಿಸುತ್ತಿರುವವನು. ಆ ದೈವ ಇರುವುದೇ ಸುಳ್ಳೆಂದು ಹಿಂದೊಮ್ಮೆ ಜರಿದೆ. ಅಜ್ಞಾನದಿಂದ, ಕಷ್ಟವನ್ನು ಸಹಿಸಲಾರದ ಮನೋದೌರ್ಬಲ್ಯದಿಂದ ಹಾಗೆ ಹೇಳಿದೆ. ದೇವರೆ, ಅದನ್ನು ಮನಸ್ಸಿನಲ್ಲಿಡದೆ ಇಂದು ನನಗೆ ಈ ಸಂತೋಷವನ್ನು ಕೊಟ್ಟೆ. ನನ್ನ ಕಡೆಯ ಪ್ರಾರ್ಥನೆಯನ್ನು ಸಲ್ಲಿಸು. ಒಂದು ಕ್ಷಣವಾದರೂ ನನ್ನನ್ನು ಪ್ರೀತಿಸಿದ ವಸಂತಾದೇವಿಯನ್ನು ಸುಖವಾಗಿರಿಸು.

ಮೌನವಾಗಿ ಪ್ರಾರ್ಥಿಸಿ ನಟೇಶನು ಗೋಡೆಯ ಬಳಿಗೆ ಬಂದು ಸಿಡಿ ಮದ್ದನ್ನು ಹೊತ್ತಿಸಿದ. 'ಪಕ್ಕಕ್ಕೆ ಸರಿ' ಎಂದು ಯಾವುದೋ ಹೊಸ ದನಿ ಕಿವಿಯಲ್ಲಿ ಕೂಗುತ್ತ ಅವನನ್ನು ಗುಹೆಯ ಮೂಲೆಗೆ ತಳ್ಳಿದಂತಾಯಿತು. ತಟ್ಟಾಡುತ್ತ ಅವನು ಅಲ್ಲಿಹೋಗಿ ನಿಲ್ಲುವುದರೊಳಗಾಗಿ ಮದ್ದು ಹಾರಿತು. ಹತ್ತಾರು ಸಿಡಿಲುಗಳು ಏಕಕಾಲದಲ್ಲಿ ಹೊಡೆದರೆ ಆಗುವಷ್ಟು ಶಬ್ದವಾಗಿ ಗೋಡೆ ಛಿದ್ರ ಛಿದ್ರವಾಗಿ ಒಡೆದು ಬೆಟ್ಟದಿಂದ ಕೆಳಕ್ಕೆ ಸುರಿವಂತೆ ಕಲ್ಲು ಗುಂಡು ಮಣ್ಣು ಸುರಿಯಿತು. ಭೂಮಿಯೆಲ್ಲವೂ ನಡುಗುತ್ತಿರುವಂತೆ, ಎಂಟು ಸಾವಿರ ಅಡಿಗಳ ಆಳವಿರುವ ಇಡೀ ಗಣಿಯು ಕಳಚಿ ತಮ್ಮ ಮೇಲೆ ಬೀಳುತ್ತಿರುವಂತೆ ತೋರಿತು. ಸಿಡಿಮದ್ದಿನ ಶಬ್ದ ಕೇಳಿದ ವಸಂತ ಘಟ್ಟಿಯಾಗಿ ಚೀರಿ ಮೂರ್ಛೆ ಹೋದಳು. ಸ್ವಾಮಿ ಎದುತ್ತ ಓಡಿಹೋಗಿ ಗುಹೆಯ ಕಡೆಯ ಮೂಲೆಯನ್ನು ಸೇರಿದ್ದ. ಎರಡು ನಿಮಿಷ ಗುಹೆಯೆಲ್ಲ ಅಂಧಕಾರಮಯವಾಗಿತ್ತು. ಕತ್ತಲೆಯ ಜೊತೆಗೆ ಧೂಳು ತುಂಬಿಕೊಂಡು ಏನನ್ನೂ ಕಾಣದಂತೆ ಮಾಡಿತ್ತು.

ಮೂಲೆಗೆ ತಳ್ಳಿದ ದೈವ ನಟೇಶನ ಜೀವವನ್ನು ಉಳಿಸಿತು; ಆದರೂ ಕಲ್ಲು ಸಿಡಿದು ನಾಲ್ಕಾರು ಕಡೆ ಮೈಯಲ್ಲಿ ಗಾಯಗಳಾಗಿ ರಕ್ತ ಸುರಿಯುತ್ತಿತ್ತು; ತಲೆ ತುಂಬ, ಮೈ ತುಂಬ ಮಣ್ಣು ತುಂಬಿತ್ತು. ಅದನ್ನು ಕೊಡವಿಕೊಂಡು ನಟೇಶನು ವಸಂತಾದೇವಿಯ ನೆಲೆಯನ್ನು ಗುರುತಿಸಲೆತ್ನಿಸಿದ.

ಸಿಡಿಮದ್ದು ಹಾರಿದ ಸ್ಥಳದಲ್ಲಿ ದೊಡ್ಡದಾಗಿ ಗೋಡೆ ತೆರದು ಆಚೆ ಕಡೆಯಿಂದ ಶುದ್ಧವಾದ ಗಾಳಿ ನುಗ್ಗುತ್ತಿತ್ತು; ಆದರೆ ಸಾಕಷ್ಟು ಬೆಳಕು ಈ ಭಾಗಕ್ಕೆ ಬೀಳುವಂತಿರಲಿಲ್ಲ. ಕತ್ತಲಲ್ಲೇ ನಟೇಶನು ತಡವರಿಸುತ್ತ 'ವಸಂತಾ, ವಸಂತಾ' ಎಂದು ಕೂಗುತ್ತ ಅವಳನ್ನು ಹುಡುಕತೊಡಗಿದ. ತನ್ನ ಕೂಗಿಗೆ ಮಾರುತ್ತರ ಬಾರದುದು ಕಂಡು ಅವನಿಗೆ ಎದೆ ನಡುಗಿತು. ಅವಳಿಗೇನಾವರೂ ಅಪಾಯವಾಗಿರಬಹುದೆ? ತಾನು ಮದ್ದು ಹಾರಿಸುವಾಗ ಅವಳೇನಾದರೂ ಇತ್ತ ಬಂದು ಕಲ್ಲುಗುಂಡುಗಳ ಮಳೆಗೆ ಸಿಕ್ಕಿರಬಹುದೆ? ಅವಳು ಚೀರಿದ ಶಬ್ದ ಕಿವಿಗೆ ಬಿತ್ತು; ಅದು ಅವಳ ಅಂತ್ಯದ ಕೂಗಾಗಿರಬಹುದೆ? ಅಧೀರನಾಗಿ ನಟೇಶನು ಮುಂದುವರಿದು ಹುಡುಕುತ್ತಿದ್ದ. ಹತ್ತು ಹೆಜ್ಜೆ ಹೋಗುವಷ್ಟರಲ್ಲಿ ಕಾಲಿಗೆ ಅವಳ ಮೈ ತಗುಲಿದಂತಾಯಿತು. ಮರದ ದೊಡ್ಡ ದಿಮ್ಮಿಯೊಂದು ಅಡ್ಡಲಾಗಿ ಒಂದು ಪಕ್ಕದ ಗೋಡೆಗೆ ಆತುಕೊಂಡು ಬಿದ್ದಿತ್ತು; ಆ ದಿಮ್ಮಿಯ ಕೆಳಗೆ, ಅದರ ಆಶ್ರಯದಲ್ಲಿ ವಸಂತಳ ದೇಹವಿತ್ತು.

ತನ್ನಲ್ಲಿ ಅಡಗಿದ್ದ ಧೈರ್ಯವನ್ನೆಲ್ಲ ಒಂದುಗೂಡಿಸಿ ಹಿಡಿಯಲ್ಲಿಟ್ಟುಕೊಂಡು ನಟೇಶನು ಕೆಳಗೆ ಕುಳಿತು ವಸಂತಳನ್ನು ಮುಟ್ಟಿ ನೋಡಿದ; ಮೆಲ್ಲನೆ 'ವಸಂತ, ವಸಂತ' ಎಂದು ಕೂಗಿದ; ದೇಹ ನಿಶ್ಚೇಷ್ಟಿತವಾಗಿತ್ತು; ಕೂಗಿಗೆ ಉತ್ತರ ಬರಲಿಲ್ಲ. ಅರೆಮಬ್ಬಿನಲ್ಲಿ ಅವಳ ದೇಹ ಮಸುಕು ಮಸುಕಾಗಿ ಕಾಣುತ್ತಿತ್ತು. ಎರಡು ಕೈಗಳಲ್ಲೂ ಮಗುವನ್ನೆತ್ತಿಕೊಳ್ಳುವಂತೆ ಅವಳನ್ನೆತ್ತಿಕೊಂಡು ಅಲ್ಲಿಂದೀಚೆಗೆ ಬಂದ. ಅವನ ದೃಷ್ಟಿ ಮನಸ್ಸುಗಳೆರಡೂ ಅವಳ ಕಡೆಗೇ ಇದ್ದುವು. ಸ್ವಾಮಿಯು ತನ್ನನ್ನು ಹಿಂಬಾಲಿಸುತ್ತಿರುವ ಅರಿವು ಇಲ್ಲದೆ ಅವನು ಆಡಿದ ಒಂದೆರಡು ಮಾತು ಸಹ ಕೇಳಿಸದೆ ತನ್ನ ನಿಯಳ ದೇಹ ಗುಹೆಯಿಂದಾಚೆಗೆ ತಂದ.

ಗಣಿಯಲ್ಲಿ ಯಾರಾದರೂ ಸಿಕ್ಕಿಕೊಂಡಿದ್ದಾರೇನೋ ಎಂದು ಶೋಧನೆ ಮಾಡುವುದಕ್ಕಾಗಿ ಬರುತ್ತಿದ್ದ ಒಂದು ತಂಡದ ಜನರು ಎದುರುಗಡೆಯಿಂದ ಬರುತ್ತಿದ್ದರು. ಅವರ ಸಹಾಯದಿಂದ ಮೂವರೂ ಮೇಲಕ್ಕೆ ತಲುಪಿದರು.

— ೩೪ —

ಗಣಿಯ ಇನ್ಸ್‌ಪೆಕ್ಟರ ಕಚೇರಿಯೇ ಆಸ್ಪತ್ರೆಯಾಗಿತ್ತು. ಮಂಚವೊಂದನ್ನು ತರಿಸಿಹಾಕಿ ಅದರಮೇಲೆ ವಸಂತಾದೇವಿಯನ್ನು ಮಲಗಿಸಿದ್ದರು.

ಪಕ್ಕದಲ್ಲಿ ಡಾಕ್ಟರು ಕುರ್ಚಿಯ ಮೇಲೆ ಕುಳಿತು ಐದು ನಿಮಿಷಕ್ಕೊಮ್ಮೆ ನಾಡಿ ನೋಡುತ್ತಿದ್ದರು. ಒಂದು ಗಂಟೆಯೊಳಗಾಗಿ ಮೂರು ಇಂಜಕ್ಷನ್ನುಗಳನ್ನು ಕೊಟ್ಟಿದ್ದರು. ಗಣಿಯ ಅಧಿಕಾರಿಗಳು ಕುತೂಹಲದಿಂದ ದೂರ ನಿಂತಿದ್ದರು. ನರ್ಸುಗಳು ಸೇವಕರು ಡಾಕ್ಟರ ಆಜ್ಞೆಯನ್ನು ನಿರೀಕ್ಷಿಸುತ್ತ ಅವರ ಹಿಂದೆ ಸ್ವಲ್ಪ ದೂರದಲ್ಲಿದ್ದರು. ಮಂಚದ ಬಲಗಡೆ ನಟೇಶನು ಕಂಗೆಟ್ಟ ಮುಖ ದಿಂದ ನಿಂತಿದ್ದ; ಎಡಗಡೆ ಸ್ವಾಮಿಯಿದ್ದ.

ಒಂದು ಗಂಟೆಯಾದ ಮೇಲೆ ಡಾಕ್ಟರು ಮೇಲಕ್ಕೆದ್ದು

'ಇನ್ನು ಭಯವಿಲ್ಲ. ಹೆಚ್ಚೆಂದರೆ ಹತ್ತು ನಿಮಿಷಗಳಲ್ಲಿ ಪ್ರಜ್ಞೆ ಬರು ತ್ತದೆ. ರಕ್ತದ ಓಟ ಸರಿಹೋಯಿತು' ಎಂದು ಕೊಟಡಿಯ ಹೊರಗೆ ಹೋಗಿ ನಿಂತರು. ಉಳಿದವರು ಯಾರೂ ಕದಲದೆ ನಿಂತಿದ್ದರು.

ಡಾಕ್ಟರು ಹೇಳಿದಂತೆ ಹತ್ತು ನಿಮಿಷದ ಮೇಲೆ ವಸಂತಾದೇವಿಗೆ ಎಚ್ಚರ ವಾಯಿತು. ಇನ್ನೂ ಕಣ್ಣು ಮುಚ್ಚಿಕೊಂಡೇ

'ನಟೇಶ್, ನಟೇಶ್' ಎಂದಳು.

ನಟೇಶನು ಅವಳ ಹಣೆಯ ಮೇಲೆ ಕೈಯಿಟ್ಟು

'ಇಲ್ಲಿದೇನೆ ವಸಂತಾ, ಭಯಪಡಬೇಡ' ಎಂದ.

ಅದನ್ನು ನಂಬಲಾರದವಳಂತೆ ವಸಂತ ಕಣ್ಣು ತೆರೆದು ಅವನಕಡೆ ನೋಡಿದಳು; ದೃಷ್ಟಿ ಇನ್ನೂ ಮಂಜಾಗಿತ್ತು. ಅದರಿಂದ ಕಣ್ಣುಜ್ಜಿಕೊಂಡು ಮತ್ತೆ ನೋಡಿದಳು. ಇದು ನಿಜವೋ ಸ್ವಪ್ನವೋ ಎಂದು ಅವನ ಕೈಯನ್ನು ಮೈಯನ್ನು ತಡವಿದಳು. ಅಲ್ಲಿಗೂ ಭರವಸೆ ಸಾಲದೆಂಬಂತೆ

'ನಿಜವಾಗಿಯೂ ನೀವೇನೆ? ಮಾತಾಡಿ' ಎಂದಳು.

'ನಿಜವಾಗಿಯೂ ನಾನೇ, ವಸಂತಾ. ದೇವರ ದಯೆಯಿಂದ ನನಗೆ ಹೆಚ್ಚು ಅಪಾಯವೇನೂ ಆಗಲಿಲ್ಲ; ಭಯಪಡಬೇಡ. ನಾನು ಸುರಕ್ಷಿತ ವಾಗಿದೇನೆ' ಎಂದು ನಟೇಶ ಭರವಸೆ ಹೇಳಿದ.

ವಸಂತಾದೇವಿ ದೇವರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸುವಂತೆ ಎರಡು ಕೈ ಜೋಡಿಸಿದಳು. ಸಂತೋಷದಿಂದ ಮುಖವರಳಿತು; ಕಣ್ಣ ಮಂಜು ಹರಿದು ದೃಷ್ಟಿ ಪೂರ್ಣವಾಗಿ ತೆರೆಯಿತು. ತನ್ನ ಪ್ರಿಯತಮನನ್ನು, ಪ್ರಾಣ ದಾತನನ್ನು ಕಣ್ಣುತುಂಬ ನೋಡಿದಳು.

ಪಕ್ಕದಲ್ಲಿ ಎಡಗಡೆ ನಿಂತಿದ್ದು ಎಲ್ಲವನ್ನೂ ನೋಡುತ್ತಿದ್ದ ಸ್ವಾಮಿಯು ತಾನು ಮಾತನಾಡುವ ಸರದಿ ಬಂತೆಂಬಂತೆ

'ನಾನೂ ಇಲ್ಲಿದೇನೆ ವಸಂತಾದೇವಿ' ಎಂದ.

'ನೀವೂ ಇದ್ದೀರಾ? ಸಂತೋಷ' ಎಂದು ಅದಕ್ಕೆ ಉತ್ತರಕೊಟ್ಟು ದೇವಿಯು ತನ್ನ ಗಂಡನಕಡೆ ನೋಡುತ್ತ ಮುಗುಳ್ನಗೆ ನಕ್ಕಳು.

ಗಣಿಯ ಇನ್‌ಸ್ಪೆಕ್ಟರು ಮಂಚದ ಬಳಿಗೆ ಬಂದು ವಸಂತಾದೇವಿಯು ಈ ಗಂಡಾಂತರದಿಂದ ಪಾರಾದುದಕ್ಕಾಗಿ ಧನ್ಯವಾದಗಳನ್ನು ಹೇಳಿದ. ಆಕೆಯು ಎದ್ದು ಕುಳಿತು ತನ್ನಿಂದ ಅವರೆಲ್ಲರಿಗೂ ಬಹಳ ಶ್ರಮವಾಯಿತೆಂದು ಕ್ಷಮೆ ಕೇಳಿ ಅಪ್ಪಣೆ ಕೊಟ್ಟರೆ ತಾವು ಅಲ್ಲಿಂದ ಹೊರಡುವುದಾಗಿ ಹೇಳಿದಳು.

ಅದುವರೆಗೆ ಕೋಣೆಯೊಳಕ್ಕೆ ಹಿಂತಿರುಗಿದ್ದ ಡಾಕ್ಟರು ಅವರು ಆಗಲೇ ಹೊರಡುವುದನ್ನು ನಿಷೇಧಿಸಿದರು. ಎರಡು ದಿನವಾದರೂ ತಮ್ಮ ಆಸ್ಪತ್ರೆಯಲ್ಲಿದ್ದು ವಿಶ್ರಾಂತಿ ಪಡೆದು ಹೋಗಬೇಕೆಂದು ಕೇಳಿಕೊಂಡರು. ವಸಂತಾದೇವಿ ಅದಕ್ಕೆ ಒಪ್ಪಲಿಲ್ಲ. ತಾನು ಆರೋಗ್ಯವಾಗಿರುವುದಾಗಿ ಧೈರ್ಯ ಹೇಳಿ ಡಾಕ್ಟರು ಮಾಡಿದ ಚಿಕಿತ್ಸೆಗಾಗಿ ಅವರನ್ನು ವಂದಿಸಿ ತನ್ನ ಕಾರನ್ನು ಬಿಟ್ಟ ಸ್ಥಳಕ್ಕೆಂದು ಹೊರಟಳು.

ಗಣಿಯ ಅಧಿಕಾರಿಗಳೂ ಸ್ವಾಮಿಯೂ ಅವಳ ಜೊತೆಗೆ ನಡೆದರು; ನಟೇಶನು ಮಾತ್ರ ಕದಲದೆ ನಿಂತು ತನ್ನ ನೋಟವನ್ನು ಅವಳ ಹಿಂದೆ ಕಳಿಸಿದ್ದ. ಬಾಗಿಲನ್ನು ದಾಟಿದ್ದ ವಸಂತಾದೇವಿ ಹಿಂತಿರುಗಿ 'ಬನ್ನಿ' ಎಂದು ಕರೆದಳು. ಅವಳ ದನಿಯಲ್ಲಿ ವಾತ್ಸಲ್ಯವಿತ್ತು, ನೀವು ಬಂದಲ್ಲದೆ ಬಿಡೆನೆಂಬ ನಿರ್ಧಾರವಿತ್ತು, ಏಕೆ ಇನ್ನೂ ಹಟಮಾಡುವಿರೆಂಬ ಕೊಂಕುತನವಿತ್ತು; ಆ ಕರೆಯೊಂದೆ ಸಾಕಾಯಿತು, ನಟೇಶನು ಹೋಗಿ ಅವಳ ಪಕ್ಕವನ್ನು ಸೇರಿದ.

ನಟೇಶನ ಮೈಯ ಗಾಯಗಳಿಗೆ ಹಾಕಿದ್ದ ಕಟ್ಟುಗಳು ವಸಂತಾದೇವಿಯ ಹೃದಯಕ್ಕೆ ಹಾಕಿದ ಬರೆಗಳಂತೆ ಅವಳಿಗೆ ತೋರುತ್ತಿತ್ತು. ಪಕ್ಕದಲ್ಲಿ ನಡೆಯುತ್ತಿದ್ದ ಅವನ ಗಾಯದ ಕಟ್ಟುಗಳನ್ನು ಮೆಲ್ಲನೆ ಮುಟ್ಟುತ್ತ

'ಬಹಳ ಗಾಯಗಳಾಗಿವೆಯೆ?' ಎಂದು ಕೇಳಿದಳು.

'ಹೆಚ್ಚೇನೂ ಇಲ್ಲ' ಎಂದು ಅವನು ಔಪಚಾರಿಕವಾಗಿ ಉತ್ತರಕೊಟ್ಟ. ಆದರೂ ಅವಳ ಮನಸ್ಸಿಗೆ ಅವು ಹೆಚ್ಚಾಗಿಯೇ ಇರುವಂತೆ ತೋರುತ್ತಿತ್ತು.

ವಸಂತಾದೇವಿಯು ತನ್ನ ಕಾರನ್ನು ತಲುಪಿ ಮುಂದುಗಡೆಯ ಬಾಗಿಲನ್ನು ತೆಗೆದು ನಟೇಶನಿಗೆ

'ಕುಳಿತುಕೊಳ್ಳಿ' ಎಂದಳು.

ಯಾವ ಕಾರು ಇಷ್ಟೆಲ್ಲ ರಾದ್ಧಾಂತಕ್ಕೆ ಕಾರಣವಾಯಿತೋ ಅದೇ ಕಾರು. ಯಾವ ಕಾರನ್ನು ಅವಳು ಉಪಯೋಗಿಸಕೂಡದೆಂದು ಅವನು ಕಟ್ಟಾಜ್ಞೆ ಮಾಡಿದ್ದಾನೋ ಅದರಲ್ಲಿಯೇ ತಾನು ಈಗ ಕೂಡಬೇಕು! ನಟೇಶನ ಕಾಲು ಹಿಂದೆಗೆಯಿತು. ಅವನ ತೊಣಚಾಟವನ್ನು ಕಂಡು ವಸಂತಾದೇವಿಯು ಅವನ ಭುಜದ ಮೇಲೆ ಕೈಹಾಕಿ ಮತ್ತೆ

'ಕುಳಿತುಕೊಳ್ಳಿ, ದಯವಿಟ್ಟು–ನನಗಾಗಿ' ಎಂದಳು.

ಅವಳ ಪ್ರಾರ್ಥನೆ ಅವನ ಮನಸ್ಸನ್ನು ಸಡಲಿಸಿತು. ಭುಜದ ಮೇಲಿದ್ದ ಕೈವಾಸ್ತವವಾಗಿ ಅವನನ್ನು ಕಾರಿನೊಳಕ್ಕೆ ತಳ್ಳುತ್ತಿತ್ತು. ವಿಧಿಯಿಲ್ಲವೆಂಬಂತೆ ಅವನು ಕಾರಿನಲ್ಲಿ ಕುಳಿತ. ವಸಂತಾದೇವಿಯು ಅತ್ತಕಡೆಯ ಬಾಗಿಲನ್ನು ತೆಗೆದುಕೊಂಡು ಕಾರು ನಡೆಸುವ ಸ್ಥಾನದಲ್ಲಿ ಕುಳಿತುಕೊಂಡಳು.

ಅವರ ಹಿಂದೆಯೇ ನಡೆದುಬಂದು ಕಾರಿನಲ್ಲಿ ತನಗೂ ಸ್ಥಳ ದೊರೆಯುವುದೆಂದು ನಿರೀಕ್ಷಿಸುತ್ತ ನಿಂತಿದ್ದ ಸ್ವಾಮಿಯು ತಾನಿಲ್ಲಿಯೇ ಇದೇನೆಂದು ಸೂಚಿಸುವಂತೆ ಒಮ್ಮೆ ಕೆಮ್ಮಿದ. ವಸಂತಾದೇವಿಯು ಕಾರಿನಿಂದ ತಲೆಯನ್ನು ಈಚೆಗಿಟ್ಟು ಸ್ವಾಮಿಯ ಕಡೆ ನೋಡಿ

'ನೀವೊಂದು ಟ್ಯಾಕ್ಸಿ ಮಾಡಿಕೊಂಡು ಬೆಂಗಳೂರಿಗೆ ಹೋಗಿ ಸ್ವಾಮಿ' ಎಂದಳು.

'ನೀವು?'

'ನಾನು ನನ್ನ ಗಂಡನ ಮನೆಗೆ ಹೋಗುತ್ತೇನೆ.'

ಸ್ವಾಮಿಯ ಮುಖ ಪೆಚ್ಚಾಯಿತು; ನಟೇಶನ ಹೃದಯ ಹಿಗ್ಗಿತು.

ಕಾರು ಕ್ಲೂಲಿಗ್ಗಾರರ ಕೇಲ್ಲಿಯ ಕಡೆಗೆ ಹೊರಟಿತು.

ಶುಭಂ.